**ಹೊಸತು**

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು

**ಭಗವದ್ಗೀತೆ : ಒಂದು ಅವಲೋಕನ**
**೬. ಸ್ಥಿತಪ್ರಜ್ಞೆ ಮತ್ತು ಲೋಕಸಂಗ್ರಹ** *ಜಿ. ರಾಮಕೃಷ್ಣ* ... ೯

**ಬರ ನಿರ್ವಹಣೆಯಲ್ಲಿ ಅನ್ನಭಾಗ್ಯದ ಪಾತ್ರ**
*ಡಾ॥ ಟಿ. ಆರ್. ಚಂದ್ರಶೇಖರ* ... ೧೩

**ಕ್ರಾಂತಿಯ ನಂದಾದೀಪ ಸಾವಿತ್ರಿಬಾಯಿ ಫುಲೆ** *ಡಾ॥ ಎನ್. ಗಾಯತ್ರಿ* ... ೧೯

**ನಗದುರಹಿತ ಸಮಾಜ ಸಾಧ್ಯವೇ ?** *ಮ. ಶ್ರೀ. ಮುರಳಿ ಕೃಷ್ಣ* ... ೨೭

**ಸುಭದ್ರ ಉದ್ಯೋಗ, ಸುರಕ್ಷಿತ ಮಹಿಳೆ :**
**ಸಮಾಜದ ಪ್ರಗತಿ ಸೂಚಕಗಳು** *ಜ್ಯೋತಿ ಎ.* ... ೩೧
**ಪರಂಪರೆಯ ತಿಳುವಳಿಕೆ ಮೂಲೆಗುಂಪಾದಾಗ** *ನಳಿನ ಡಿ.* ... ೨೨

**ಪ್ರಧಾನಿ ನರೇಂದ್ರ ಮೋದಿಯವರಿಗೊಂದು ಬಹಿರಂಗ ಪತ್ರ**
*ಯತಿನ್ ಓಝ, ಕನ್ನಡಕ್ಕೆ : ಎಸ್. ಸುರೇಂದ್ರ* ... ೨೩

**ಕಾವ್ಯಲೋಕ** ೧೭, ೨೯, ೪೪, ೪೯, ೫೧, ೫೯

**ಆಕಾಶ ಮತ್ತು ನಗು** *ಡಾ॥ ಪಾರ್ವತಿ ಜಿ. ಐತಾಳ್* ... ೨೫
**ಗಿಣಿ ಪಾಠ** *ಪ್ರೊ॥ ಎಚ್. ಕೆ. ರಾಮಚಂದ್ರಮೂರ್ತಿ* ... ೪೩
**ಸ್ಥಿತಿ** *ಡಾ॥ ಎಸ್. ಬಿ. ಜೋಗುರ* ... ೫೧

**ಸಂದರ್ಶನ : ಜನಪರ ಕಾಳಜಿಯ ನಟ ಚೇತನ್**
*ಸಂದರ್ಶಕರು : ಹುಲಿಕುಂಟೆ ಮೂರ್ತಿ, ಗೌರಿ, ಮಲ್ಲಿಗೆ, ಸರೋವರ್* ... ೩೭

**ಕೊಡಗಿನ ಡಿಡ್ಡಳ್ಳಿ ಆದಿವಾಸಿಗಳ ಮೇಲೆ ನಡೆದ ದೌರ್ಜನ್ಯದ ಕಥೆ**
*ಸಿರಿಮನೆ ನಾಗರಾಜ್* ... ೪೭

**ಭ್ರಷ್ಟಾಚಾರ ತಡೆಯೋ ? ರಕ್ಷಣೆಯೋ ?**
*ಪ್ರೊ॥ ಟಿ. ಎಸ್. ವೇಣುಗೋಪಾಲ್* ... ೫೫

**ಮಳೆಯೆಂದರೆ... ಬರಿ ಮಳೆಯಲ್ಲ...** *ಸ್ಮಿತಾ ಅಮೃತರಾಜ್. ಸಂಪಾಜೆ* ... ೪೫

**ವ್ಯಕ್ತಿ – ಜೈವಿಕ ನೋಟ** *ಎಸ್. ಶಂಕರ* ... ೬೧

**ನಾನು ಓದಿದ ಪುಸ್ತಕ : ಹೋರಾಟದ ಅಂತರ್ಜಲ ಬರಗೂರರ 'ಶಬರಿ'** *ಡಾ॥ ಗೀತಾ ವಸಂತ* ... ೫೮
**ವಿಶ್ವವೀಕ್ಷಣೆ : ಮೈನ್ಮಾರ್ – ರೋಹಿಂಗ್ಯಾ ಜನಾಂಗದ ಸಮಸ್ಯೆ**
*ಸೀಯಾರ್ಕೆ* ... ೩೬
**ನಭಾವಲೋಕನ : ಯುರೇನಸ್ ಗುರುತಿಸುವ ಅವಕಾಶ**
*ಡಾ॥ ಬಿ. ಎಸ್. ಶೈಲಜಾ* ... ೫೦
**ಹೊಸ ಓದು** *ಡಾ॥ ಎಂ. ವೆಂಕಟಸ್ವಾಮಿ* ... ೧೮
**ಸಾದರ ಸ್ವೀಕಾರ** ... ೪೨
**ಕ್ಷ–ಕಿರಣ** *ಸಾನ್ವಿ ಪಿ.* ... ೧೨

**ಚಿತ್ರಗಳು :** ಕಮಲಂ ಅರಸು, ಸುನಿಲ್ ಮಿಶ್ರಾ, ಗೋಪಿ ಹಿರೇಬೆಟ್ಟು
**ಮುಖಪುಟ :** ಕೆಳವರ್ಗದವರ ಶಿಕ್ಷಣಕ್ಕಾಗಿ ಶ್ರಮಿಸಿದ ಸಾವಿತ್ರಿಬಾಯಿ ಫುಲೆ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು



ಸೇನೆಯಲ್ಲಿ ಅತ್ಯಂತ ಕನಿಷ್ಠ ದರ್ಜೆಯವ ಎಂದರೆ ಸಿಪಾಯಿ. ಮೇಲಧಿಕಾರಿಗಳ ಆಜ್ಞೆಗಳನ್ನು ಶಿರಸಾವಹಿಸಿ ಪಾಲಿಸುವ ಇವರಿಗೆ ಶಿಸ್ತು ಒಂದೇ ಮಂತ್ರ. ಅಧಿಕಾರಿಗಳ, ಅವರ ಮನೆಯವರ ಸೇವೆ ಸಲ್ಲಿಸುವ ಇವರು ಯುದ್ಧರಂಗದಲ್ಲಿ ಮುನ್ನುಗ್ಗುವವರು, ಅತ್ಯಂತ ಕಠಿಣ ಪರಿಸ್ಥಿತಿಯಲ್ಲೂ ಹವಾಮಾನದ ವೈಪರೀತ್ಯಗಳಿಗೆ ಮೈಒಡ್ಡಿ ಗಡಿ ಕಾಯುವವರು ಇವರೇ. ಇವರ ಪರಿಸ್ಥಿತಿ ಪೊಲೀಸು ಇಲಾಖೆಯ ಪೇದೆಗಳಿಗೇನೂ ಕಡಿಮೆ ಇಲ್ಲ. ಪೇದೆಗಳಾದರೋ ಸಂಸಾರಿಗಳು, ಮನೆ ಮಠ ಇರುವವರು. ಸೈನಿಕರಿಗೆ ಅವೆಲ್ಲ ಕನಸು. ರಜೆಯಲ್ಲಿ ಬಂದಾಗ ಮಾತ್ರ ಬಂಧುಬಳಗ ಕಳತ್ರರ ದರ್ಶನ. ಅಧಿಕಾರಿಗಳು ದರ್ಪ ತೋರುತ್ತಾರೆಯೇ ಹೊರತು ಅವರ ಕಷ್ಟಸುಖಗಳ ಕಡೆಗೆ ಗಮನ ಕೊಡುವುದಿಲ್ಲ. ಕಡಿಮೆ ವೇತನ ಪಡೆಯುವ ಇವರು ಮಧ್ಯ ವಯಸ್ಸು ದಾಟುತ್ತಿದ್ದಂತೆಯೇ ನಿವೃತ್ತರಾಗುತ್ತಾರೆ. ಅನಂತರ ಅವರ ಪಾಡು ಕೇಳುವವರಿಲ್ಲ. ಬಹುತೇಕರು ಖಾಸಗಿ ರಕ್ಷಣಾ ಸಂಸ್ಥೆಗಳ ಕೃಪಾಶ್ರಯದಲ್ಲಿ ವಾಚ್‌ಮನ್‌ಗಳಾಗುತ್ತಾರೆ. ಮಾಜಿ ಯೋಧರು ದೆಹಲಿಯ ಜಂತರ್ ಮಂತರ್‌ನಲ್ಲಿ ಈಚೆಗೆ ನಡೆಸಿದ ಹೋರಾಟ ನೆನಪಿನಿಂದ ಮಾಸಿಲ್ಲ.

ಕೆಲದಿನಗಳ ಹಿಂದೆ ಗಡಿ ಭದ್ರತಾ ಪಡೆಯ ಪೇದೆಯೊಬ್ಬ ತಮಗೆ ನೀಡುತ್ತಿರುವ ಆಹಾರ ಎಷ್ಟು ಕೆಟ್ಟದಾಗಿರುತ್ತದೆ ಎಂಬ ವಿವರಗಳನ್ನು ಸಾಮಾಜಿಕ ಜಾಲತಾಣದಲ್ಲಿ ಬಿತ್ತರಿಸುವ ಸಾಹಸ ಮಾಡಿದ. ಸೀದು ಬಗ್ಗಾಗಿರುವ ಒಣಕಲು ರೊಟ್ಟಿ, ನಿಸ್ಸಾರವಾದ  ನೀರುನೀರಾದ ಬೇಳೆಸಾರು (ದಾಲ್) ಜಗಜ್ಜಾಹೀರವಾಯಿತು. ಪೇದೆಯ ಹೆಸರು ತೇಜ್ ಬಹದ್ದೂರ್ ಯಾದವ್. ಒಡನೆಯೇ ಬಿಎಸ್‌ಎಫ್ ಅಧಿಕಾರಿಗಳು ಆತನಿಗೆ ಬುದ್ಧಿ ಭ್ರಮಣೆಯ, ಅತಿ ಕುಡುಕನ ಹಣೆಪಟ್ಟಿಹಚ್ಚಿ ಎಲ್ಲವೂ ಸರಿಯಾಗಿದೆ ಎಂದು ಹೇಳಿಕೆ ನೀಡಿ ಆರೋಪಗಳನ್ನು ಅಲ್ಲಗಳೆದರು. ಬುದ್ಧಿಭ್ರಮಣೆ ಯಾಗಿರುವವನನ್ನು ಗಡಿಕಾಯಲು ನೇಮಕ ಮಾಡಿದ್ದು ಸರಿಯೇ ಎಂಬ ಪ್ರಶ್ನೆ ಉದ್ಭವಿಸಿತು. ಏನೇ ಆದರೂ ಸೇನೆಯಲ್ಲಿ ಎಲ್ಲವೂ ಸರಿಯಾಗಿಲ್ಲ ಎನ್ನುವುದು ಈಗ ಬೆಳಕಿಗೆ ಬಂದಿದೆ. ಪೇಚಿನಲ್ಲಿ ಸಿಕ್ಕಿರುವ ಸರಕಾರ ಈಗ ತೀವ್ರವಾದ ತನಿಖೆ ಪ್ರಾರಂಭಿಸಿದೆ. ಪ್ರಧಾನ ಮಂತ್ರಿ ಮೋದಿಯ ಕಚೇರಿ, ಗೃಹ ಸಚಿವ ರಾಜನಾಥ್‌ಸಿಂಗ್ ಖುದ್ದಾಗಿ ಅಧಿಕಾರಿಗಳಿಂದ ವರದಿ ಕೇಳಿದ್ದಾರೆ. ಹಲವು ವರ್ಷಗಳ ಹಿಂದೆ ಬ್ರಿಟಿಷ್ ಸಾಮ್ರಾಜ್ಯಶಾಹಿ ಆಡಳಿತದ ಕಾಲದಲ್ಲಿ ಸೈನಿಕರ ಪಾಡು ಫಜೀತಿ ಕುರಿತು ಪುಸ್ತಕವೊಂದನ್ನು ಓದಿದ ನೆನಪಾಗುತ್ತಿದೆ. ಆಗ ಪರಿಸ್ಥಿತಿ ಇನ್ನೂ ಚಿಂತಾಜನಕವಾಗಿತ್ತು. ಸ್ವಾತಂತ್ರ್ಯಾನಂತರ ಎಪ್ಪತ್ತು ವರ್ಷಗಳಾದರು ಇನ್ನೂ ಸ್ಥಿತಿ ಸುಧಾರಿಸ ದಿರುವುದು ಬೇಸರದ ಸಂಗತಿ. ದಶಕಗಳ ಹಿಂದೆ ದಿನಪತ್ರಿಕೆಯೊಂದರ ವರದಿಗಾರನಾಗಿದ್ದಾಗ ಬೆಂಗಳೂರಿನ ಜಾಲಹಳ್ಳಿಯ ಮಿಲಿಟರಿ ಕ್ಯಾಂಪಿಗೆ ಇಡೀ ದಿನ ಭೇಟಿ ನೀಡಿದ್ದುದು ನೆನಪಿಗೆ ಬರುತ್ತಿದೆ. ಪತ್ರಕರ್ತರ ತಂಡದವರು ಯಾವ ಪೇದೆಯನ್ನೂ ಭೇಟಿಯಾಗಲು ಅವಕಾಶವಿಲ್ಲದ ಹಾಗೆ ಸೇನೆಯ ಅಧಿಕಾರಿಗಳು ನೋಡಿಕೊಂಡಿದ್ದರು. ದಿನವಿಡೀ ಇದ್ದರೂ ಒಬ್ಬ ಸಾಮಾನ್ಯ ಸೈನಿಕನೂ ಕಣ್ಣಿಗೆ ಬೀಳಲಿಲ್ಲ ಸೆಂಟ್ರಿಡ್ಯೂಟಿ ಯಲ್ಲಿದ್ದವರನ್ನು ಬಿಟ್ಟರೆ. ಪ್ರತಿಭಟನೆ ಮಾಡುವ ಸೈನಿಕರು ಶಿಕ್ಷೆಗೆ ಗುರಿಯಾಗುತ್ತಾರೆ. ಶಿಕ್ಷೆ ಎಂದರೆ ಭಾರವಾದ ಮೂಟೆ ಬೆನ್ನಮೇಲೆ ಹೊತ್ತು, ಬಂದೂಕು ಹಿಡಿದು ಮೂರು ಸುತ್ತು ಪೆರೇಡ್ ಗ್ರೌಂಡ್ಸ್‌ನಲ್ಲಿ ದೌಡಾಯಿಸುವುದು, ಇಲ್ಲವೇ ಕೋರ್ಟ್ ಮಾರ್ಷಲ್ ಆಗಿ ಹತರಾಗುವುದು, ಸೇನಾ ಕಾರಾಗೃಹದಲ್ಲಿ ಕೊಳೆಯುವುದು. ಅವರಿಗೆ ನ್ಯಾಯಾಲಯದ ಮೆಟ್ಟಿಲೇರುವ ಯಾವ ಪೌರಹಕ್ಕೂ ಇರುವುದಿಲ್ಲ. ಈ ಸ್ಥಿತಿ ಬದಲಾದೀತೆ ?

* * *

(೬ನೇ ಪುಟಕ್ಕೆ )






ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೮ ಸಂಚಿಕೆ-೭ ಫೆಬ್ರವರಿ ೨೦೧೭

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ರಾಮಲಿಂಗಪ್ಪ ಟಿ. ಬೇಗೂರು

ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ರಮೇಶ ಉಡುಪ

**ಮುದ್ರಣ**

ಶ್ರೀ ವಿನಾಯಕ ಪ್ರಿಂಟರ್ಸ್

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೪

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೫೪೨೪೭೩, ೨೨೨೦೩೫೮೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**


# ಸಂಪಾದಕೀಯ

## ಕಪ್ಪತ್ತಗುಡ್ಡ ಕರಗದಿರಲಿ

ಉತ್ತರ ಕರ್ನಾಟಕದಲ್ಲಿ ನಡೆಯುತ್ತಿರುವ ಮಹಾದಾಯಿ ಹೋರಾಟ ವರ್ಷಗಳನ್ನೇ ದಾಟುತ್ತಿದ್ದರೂ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಅದನ್ನು ಗಂಭೀರವಾಗಿ ಪರಿಗಣಿಸಿಲ್ಲ. ಕೇಂದ್ರ ಸರಕಾರ ಮಧ್ಯಪ್ರವೇಶ ಮಾಡಬೇಕು ಎಂಬ ಮಹಾದಾಯಿ ಹೋರಾಟಗಾರರ ಕೂಗಿಗೆ ಯಾವುದೇ ಪ್ರತಿಕ್ರಿಯೆ ಸಿಗುತ್ತಿಲ್ಲ. ಇಂಥ ಸಂದರ್ಭದಲ್ಲಿ ಈಗ ಗದಗ ಜಿಲ್ಲೆಯಲ್ಲಿ ಮತ್ತೊಂದು ಹೋರಾಟ ರೂಪುಗೊಳ್ಳುತ್ತಿದೆ. ಮಹಾದಾಯಿಯದು ಜಲಕ್ಕಾಗಿ ನಡೆಯುತ್ತಿರುವ ಹೋರಾಟವಾದರೆ ಈಗ ರೂಪುಗೊಳ್ಳುತ್ತಿರುವುದು ನೆಲಕ್ಕಾಗಿ ನಡೆವ ಹೋರಾಟ. ಇದೇ ಗದಗ ಜಿಲ್ಲೆಯಲ್ಲಿ ಹಿಂದೆ ಪೋಸ್ಕೊ ಕಂಪನಿ ರೈತರ ಭೂಮಿ ಪಡೆವ ಹುನ್ನಾರದಲ್ಲಿದ್ದಾಗ ಗದಗಿನ ತೋಂಟದಾರ್ಯ ಸ್ವಾಮೀಜಿಯವರ ನೇತೃತ್ವದಲ್ಲಿ ಜನಪರ ಹೋರಾಟಗಾರರು ಬೀದಿಗಿಳಿದು ಅದನ್ನು ತಡೆದಿದ್ದರು. ಈಗ ಗದಗ ನಗರದ ಸಮೀಪದಲ್ಲಿರುವ ಬಿಂಕದಕಟ್ಟಿ ಎಂಬ ಗ್ರಾಮದಿಂದ ಆರಂಭವಾಗಿ ಮುಂಡರಗಿ, ಸಿರಹಟ್ಟಿ ತಾಲೂಕುಗಳ ಮೂಲಕ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನವರೆಗೂ ಸುಮಾರು ೬೩ ಕಿಲೋಮೀಟರ್ ವ್ಯಾಪ್ತಿಯಲ್ಲಿ ೮೦ ಸಾವಿರ ಎಕರೆ ವಿಸ್ತೀರ್ಣದಲ್ಲಿ ನಿಂತಿರುವ ಕಪ್ಪತ್ತಗುಡ್ಡ ಎಂಬ ಬೆಟ್ಟಗಳ ಸರಣಿಯನ್ನು ಉಳಿಸಲು ಈ ಹೋರಾಟ ರೂಪುಗೊಳ್ಳುತ್ತಿವೆ. ದಿನಾಂಕ ೧೬-೧-೨೦೧೭ರಂದು ಗದಗ ಜಿಲ್ಲೆಯ ಜಿಲ್ಲಾಧಿಕಾರಿಗಳು ಡಂಬಳ ಗ್ರಾಮದಲ್ಲಿ ನಡೆಸಿದ ಸಾರ್ವಜನಿಕ ಅಹವಾಲು ಸ್ವೀಕರಣ ಕಾರ್ಯಕ್ರಮದಲ್ಲಿ ಮತ್ತೆ ತೋಂಟದ ಸಿದ್ಧಲಿಂಗ ಸ್ವಾಮೀಜಿಯವರ ನೇತೃತ್ವದಲ್ಲಿ ಜನ ಪ್ರತಿನಿಧಿಗಳು, ಜನಪರ ಹೋರಾಟಗಾರರು, ವಿವಿಧ ಮಠಾಧೀಶರು ಭಾಗವಹಿಸಿ ಕಪ್ಪತ್ತಗುಡ್ಡ ರಕ್ಷಣೆಗಾಗಿ ಒತ್ತಾಯಿಸಿದ್ದಾರೆ. ಸಾವಿರಾರು ಜನರ ಸಮ್ಮುಖದಲ್ಲಿ ನಡೆದ ಈ ಸಭೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಚ್. ಕೆ. ಪಾಟೀಲ ಅವರೂ ಭಾಗವಹಿಸಿದ್ದರು. ಕಪ್ಪತ್ತಗುಡ್ಡ ಅಪಾರ ಖನಿಜ ಸಂಪತ್ತು, ವಿವಿಧ ಸಸ್ಯ ಸಂಪತ್ತು, ಪ್ರಾಣಿ ಸಂಕುಲವನ್ನು ಹೊಂದಿರುವ ಒಂದು ಅಪರೂಪದ ನೈಸರ್ಗಿಕ ತಾಣ. ಈ ಕುರಿತು ಈಗಾಗಲೇ 'ಹೊಸತು' ಪತ್ರಿಕೆ ಒಂದು ವಿಶೇಷ ಲೇಖನವನ್ನೂ ಪ್ರಕಟಿಸಿದೆ. ಅಭಿವೃದ್ಧಿಯ ಹೆಸರಿನಲ್ಲಿ ನಾಡಿನ ನೈಸರ್ಗಿಕ ಸಂಪನ್ಮೂಲಗಳನ್ನು ಕಾರ್ಪೊರೇಟ್ ಕಂಪನಿಗಳಿಗೆ ವಹಿಸಿಕೊಡುವ ಸರಕಾರಗಳ ಬೇಜವಾಬ್ದಾರಿ ನೀತಿಗಳನ್ನು ನಾಡಿನ ಜನ ಒಕ್ಕೊರಲಿನಿಂದ ಪ್ರತಿಭಟಿಸಬೇಕಿದೆ. ಮಹಾದಾಯಿ ನೀರನ್ನು ಇಂದಲ್ಲಾ ನಾಳೆ ಹೋರಾಟದ ಮೂಲಕವೋ, ನ್ಯಾಯ ಮಂಡಲಿಗಳ ತೀರ್ಪುಗಳ ಮೂಲಕವೋ ಪಡೆಯಬಹುದು. ಆದರೆ ಗಣಿಗಾರಿಕೆಗೆ ಬಲಿಯಾಗುತ್ತಿರುವ ಕಪ್ಪತ್ತಗುಡ್ಡವೇನಾದರೂ ಕರಗಿಹೋದರೆ ಶಾಶ್ವತವಾದ ಹಾನಿಯನ್ನು ಆ ಪ್ರದೇಶದ ಜನ ಅನುಭವಿಸಬೇಕಾಗುತ್ತದೆ. ಮತ್ತೆ ಅಂಥ ಸಂಪನ್ಮೂಲವನ್ನು ಸೃಷ್ಟಿಮಾಡುವ ತಂತ್ರಜ್ಞಾನವನ್ನು ಮಾನವ ಕುಲ ಇಂದಿಗೂ ಕಂಡುಹಿಡಿದಿಲ್ಲ.

ಕಪ್ಪತ್ತಗುಡ್ಡ ಬರೀ ಒಂದು ಗುಡ್ಡವಲ್ಲ. ತನ್ನ ಒಡಲಾಳದಲ್ಲಿ ಚಿನ್ನ, ಕಬ್ಬಿಣದ ಅದಿರು, ಮ್ಯಾಂಗನೀಸ್, ತಾಮ್ರ ಮುಂತಾದ ಖನಿಜ ಸಂಪತ್ತನ್ನು ಹೊಂದಿದೆ. ಅದರ ಮೇಲ್ಮೈನಲ್ಲಿ ಸುಮಾರು ೩೦೦ಕ್ಕೂ ಹೆಚ್ಚು ವಿವಿಧ ತಳಿಯ ಔಷಧಿ ಸಸ್ಯಗಳನ್ನು ಹೊಂದಿದೆ. ಈ ಬೆಟ್ಟದಲ್ಲಿ ಸುಮಾರು ೩೦ಕ್ಕೂ ಹೆಚ್ಚು ಕೆರೆಗಳು, ಹಲವಾರು ಝರಿಗಳಿವೆ. ಈ ವ್ಯಾಪ್ತಿಯಲ್ಲಿ ೩೦ಕ್ಕೂ ಹೆಚ್ಚು ಗ್ರಾಮಗಳು, ತಾಂಡಾಗಳಿವೆ. ಗದಗ ಮತ್ತು ಬಳ್ಳಾರಿಯಂಥ ಭೀಕರ ಬರಗಾಲದ ಪ್ರದೇಶದಲ್ಲಿ ಮೋಡಗಳನ್ನು ತಡೆದು ನಿಲ್ಲಿಸಿ ಮಳೆ ತರುವ ತಾಣ ಈ ಕಪ್ಪತ್ತಗುಡ್ಡ. ಬಿಸಿಲು ನಾಡಿನ ಬರದ ಪ್ರದೇಶದಲ್ಲಿ ಎದ್ದು ನಿಂತಿರುವ ಈ ಬೆಟ್ಟದ ಕುರಿತು ಸ್ಥಳೀಯರಲ್ಲಿ ಭಾವನಾತ್ಮಕ ಸಂಬಂಧಗಳೂ ಇವೆ. ಇಂಥ ಪ್ರದೇಶದ ಖನಿಜ ಸಂಪತ್ತನ್ನು ದೋಚಲು ಕಾರ್ಪೊರೇಟ್ ಕಂಪನಿಗಳು ಹಲವಾರು ರೀತಿಯಲ್ಲಿ ಸಂಚು ನಡೆಸಿವೆ. ಈ ಬೆಟ್ಟದ ಸಂಪತ್ತಿನ ಲೂಟಿಗಾಗಿಯೇ ವಿಶ್ವದ ಕುಖ್ಯಾತ ಕಾರ್ಪೊರೇಟ್ ಕಂಪನಿ ಪೋಸ್ಕೊ ಯತ್ನಿಸಿತು. ಆದರೆ ಜನತೆಯ ಪ್ರತಿರೋಧದಿಂದಾಗಿ ಅದು ಸಾಧ್ಯವಾಗಲಿಲ್ಲ. ಈಗ ಇನ್ನೊಂದು ದೈತ್ಯ ಕಾರ್ಪೊರೇಟ್ ಕಂಪನಿ 'ಬಲ್ಡೋಟಾ' ಈ ಕಪ್ಪತ್ತಗುಡ್ಡದ ಮೇಲೆ ದಾಳಿ ನಡೆಸಿದೆ. ೧೮೮೨ರಲ್ಲಿ ಬ್ರಿಟಿಷ್ ಸರಕಾರವೇ ಈ ಗುಡ್ಡವನ್ನು ರಕ್ಷಿತ ಅರಣ್ಯಪ್ರದೇಶ ಎಂದು ಘೋಷಿಸಿತ್ತು. ಸ್ವಾತಂತ್ರ್ಯಾನಂತರ ಬರನಾಡಿನ ಸೂಕ್ಷ್ಮಪ್ರದೇಶವಾದ ಈ ಕಪ್ಪತ್ತಗುಡ್ಡವನ್ನು ಸಂರಕ್ಷಿಸುವ ಕೆಲಸವನ್ನು ನಮ್ಮ ಸರಕಾರಗಳು ಮಾಡಲಿಲ್ಲ. ಬದಲಾಗಿ, ೨೦೦೭ ಮತ್ತು ೨೦೦೮ರಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಲಾ ನೂರು ಎಕರೆಯಂತೆ ಒಟ್ಟು ೨೦೦ ಎಕರೆ ಜಮೀನನ್ನು ಚಿನ್ನದ ಗಣಿಗಾರಿಕೆಗಾಗಿ ಬಲ್ಡೋಟಾ ಕಂಪನಿಗೆ ಬಿಟ್ಟುಕೊಟ್ಟಿವೆ. ಚಿನ್ನದ ಮೊಟ್ಟೆ ಇಡುವ ಕೋಳಿಯನ್ನೇ ಕುಯ್ದುಹಾಕುವ ವಿವೇಕಹೀನ ಕೆಲಸ ಕೇಂದ್ರ ಹಾಗೂ ರಾಜ್ಯ ಸರಕಾರದಿಂದಲೇ ನಡೆದಿದೆ. ಸರಕಾರ ಈ ಕುರಿತು ನೇಮಿಸಿದ ಕುಂಬ್ಳೆ ಸಮಿತಿ ವರದಿ ಆಧರಿಸಿ ಇದನ್ನು ಸಂರಕ್ಷಿತ ಅರಣ್ಯ ಪ್ರದೇಶವೆಂದು ೨೦೧೫ರಲ್ಲಿ ಆದೇಶ ಹೊರಡಿಸಿತ್ತು. ಈಗ ಆ ಆದೇಶವನ್ನೂ ಹಿಂಪಡೆದು ಗಣಿಗಾರಿಕೆಗೆ ಈ ಕಪ್ಪತ್ತಗುಡ್ಡವನ್ನು ಬಲಿಕೊಡಲು ಸರಕಾರವೇ ಮುಂದಾಗಿದೆ.

ಈಗಾಗಲೇ ವಿಂಡ್‌ಮಿಲ್ ಹೆಸರಿನಲ್ಲಿ ಖಾಸಗಿ ಕಂಪನಿಗಳೂ ಕಪ್ಪತ್ತಗುಡ್ಡದಲ್ಲಿ ಪ್ರವೇಶ ಮಾಡಿವೆ. ಇಲ್ಲಿ ಖಾಸಗಿ ಕಂಪನಿಗಳಿಗೆ ೨೪೦ ವಿಂಡ್‌ಮಿಲ್ ಹಾಕಲು ೮೨೦ ಎಕರೆ ಜಾಗಕೊಟ್ಟಿದೆ. ಅದೇ ಸರಕಾರಿ ವಲಯಕ್ಕೆ ಕೇವಲ ೪೨ ಎಕರೆ ಲೀಜ಼್ ನೀಡಿದೆ. ಅಂದರೆ ಅಲ್ಲಿಯೂ ಖಾಸಗಿ ವಲಯಕ್ಕೆ ಹೆಚ್ಚಿನ ಆದ್ಯತೆ ಸಿಕ್ಕಿದೆ. ಗಮನಿಸಬೇಕಾದ ಮಹತ್ವದ ಅಂಶವೆಂದರೆ ಸಾವಿರಾರು ಕಿಲೋಮೀಟರ್ ವ್ಯಾಪಿಸಿರುವ ಪಶ್ಚಿಮ ಘಟ್ಟಕ್ಕೆ ಅಪಾಯ ತರುತ್ತದೆ ಎಂದು ಬ್ರಿಟಿಷ್ ಕಾಲದಿಂದ ಆರಂಭವಾಗಿದ್ದ ಚಿಕ್ಕಮಗಳೂರು ಜಿಲ್ಲೆಯಲ್ಲಿನ ಕುದುರೆಮುಖ ಗಣಿಯನ್ನು ನ್ಯಾಯಾಂಗದ ಮಧ್ಯಪ್ರವೇಶದಿಂದ ಸ್ಥಗಿತಗೊಳಿಸಲಾಯಿತು. ಕುದುರೆಮುಖ ಗಣಿ ಪ್ರದೇಶದ ಗಂಗಡಿಕಲ್ಲು ಮತ್ತು ನೆಲ್ಲಿ ಬೀಡು ಎಂಬ ಪ್ರದೇಶಗಳು ನಮ್ಮ ರಾಜ್ಯದ ಮಹತ್ವದ ನದಿಗಳಾದ ತುಂಗಾ ಮತ್ತು ಭದ್ರಾಗಳ ಉಗಮಪ್ರದೇಶ. ಸಾವಿರಾರು ಕೋಟಿ ಮೌಲ್ಯದ ಕೈಗಾರಿಕೆ, ಸಾವಿರಾರು ಜನ ಉದ್ಯೋಗದಲ್ಲಿದ್ದ ಸಾರ್ವಜನಿಕ ವಲಯದ ಕುದುರೆಮುಖ ಕೈಗಾರಿಕೆಯನ್ನು ಪರಿಸರದ ಕಾಳಜಿಯಿಂದಾಗಿ ಸ್ಥಗಿತಗೊಳಿಸಿದ್ದು ಸ್ವಾಗತಾರ್ಹವೇ. ಆದರೆ ಅದೇ ಕಾಳಜಿ ಖಾಸಗಿ ಕಂಪನಿಗಳೂ ನಡೆಸುವ ಗಣಿಗಾರಿಕಾ ಪ್ರದೇಶವಾದ ಬಳ್ಳಾರಿ, ಸಂಡೂರಿಗೆ ಅನ್ವಯವಾಗಲಿಲ್ಲ. ಈಗ ಇಡೀ ಬರಗಾಲದ ಬಯಲುನಾಡಿನಲ್ಲಿ ಆ ಪ್ರದೇಶದ ಪರಿಸರದ ಸಮತೋಲನವನ್ನು ಕಾಪಾಡಲು ಇರುವ ಏಕೈಕ ಆಸರೆಯಾದ ಕಪ್ಪತ್ತಗುಡ್ಡದಲ್ಲಿ ಗಣಿಗಾರಿಕೆ ಮಾಡಲು ಅನುಮತಿ ನೀಡಲಾಗುತ್ತಿದೆ. ಆ ಪ್ರದೇಶದಲ್ಲಿರುವ ೩೩ ಹಳ್ಳಿಗಳ ಗ್ರಾಮ ಪಂಚಾಯಿತಿಗಳ ಅಭಿಪ್ರಾಯಕ್ಕೂ ಮನ್ನಣೆ ನೀಡದೆ ಈ ಕೆಲಸ ನಡೆಯುತ್ತಿದೆ. ಇಲ್ಲಿ ಗಣಿಗಾರಿಕೆ ನಡೆದರೆ ಅದರ ವಿಷಕಾರಿ ತ್ಯಾಜ್ಯ ಅದೇ ತುಂಗಭದ್ರಾ ನದಿಗೆ ಸೇರುತ್ತದೆ.

ಯಾವುದೇ ವಸ್ತು ಇದ್ದಾಗ ಅದರ ಮಹತ್ವ ಗೊತ್ತಾಗುವುದಿಲ್ಲ. ಕಳೆದುಹೋದಾಗ ಮಾತ್ರ ತಿಳಿಯುತ್ತದೆ. ಆದರೆ ನೈಸರ್ಗಿಕ ಸಂಪತ್ತು ಕಳೆದುಕೊಂಡರೆ ಮತ್ತೆ ಸೃಷ್ಟಿಸುವಂಥದ್ದಲ್ಲ. ಇಷ್ಟಕ್ಕೂ ಈಗ ದೇಶದಲ್ಲಿ ಖಾಸಗಿ ವಲಯದಲ್ಲಿ ನಡೆಯುತ್ತಿರುವ ಗಣಿಗಾರಿಕೆಗಳು ನಾಡಿನ ಅಭಿವೃದ್ಧಿಗೆ ಕೊಟ್ಟ ಕಾಣಿಕೆಯಾದರೂ ಏನು ಎಂಬುದನ್ನು ಗಮನಿಸಬೇಕು. ಚಿಲ್ಲರೆ ರೂಪದ ರಾಯಲ್ಟಿ ಬಿಟ್ಟರೆ ಉಳಿದದ್ದೆಲ್ಲ ಲೂಟಿಯೆ. ಬಳ್ಳಾರಿ, ಚಿತ್ರದುರ್ಗ, ತುಮಕೂರು ಜಿಲ್ಲೆಯಲ್ಲಿ ಲೂಟಿಯಿಂದಾಗಿ ನಮ್ಮ ದೇಶದ ಕಬ್ಬಿಣ ಅದಿರಿನ ಬೆಟ್ಟಗಳು ಕರಗಿ ಚೀನಾದಂಥ ದೇಶಗಳಲ್ಲಿ ಎದ್ದು ನಿಂತಿವೆ. ಈ ಪಟ್ಟಿಯಲ್ಲಿ ಕಪ್ಪತ್ತಗುಡ್ಡ ಬರಬಾರದು. ಕುದುರೆಮುಖ ಪ್ರದೇಶವನ್ನು ರಕ್ಷಿಸಲು ಯಾವ ಮಾನದಂಡಗಳು ಅನ್ವಯವಾದವೋ ಅದಕ್ಕಿಂತ ಹೆಚ್ಚಿನ ರಕ್ಷಣೆಗೆ ಪೂರಕವಾದ ಅಂಶಗಳು ಕಪ್ಪತ್ತಗುಡ್ಡದ ಪ್ರದೇಶದಲ್ಲಿವೆ. ಸರಕಾರ ಈ ಪ್ರದೇಶವನ್ನು ಸಂರಕ್ಷಿತ ಪ್ರದೇಶವೆಂದು ಘೋಷಿಸಬೇಕು. ಖಾಸಗಿ ಕಂಪನಿಗಳ ದುರಾಲೋಚನೆಗೆ ಬಲಿಯಾಗದೆ ಮುಂದಿನ ಪೀಳಿಗೆಯ ನೆಮ್ಮದಿಗಾಗಿ ದೂರಾಲೋಚನೆ ಮಾಡಬೇಕು. ಜನರ ಆಸೆಗಳನ್ನು ಪೂರೈಸುವುದು ಸರಕಾರಗಳ ಕರ್ತವ್ಯವಾಗಬೇಕೇ ಹೊರತು ಕಾರ್ಪೊರೇಟ್ ಕಂಪನಿಗಳ ದುರಾಸೆ ತಣಿಸುವ ಗುಲಾಮರಾಗಬಾರದು. ಈಗಲೂ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಎಚ್ಚೆತ್ತುಕೊಳ್ಳದಿದ್ದರೆ ಕಪ್ಪತ್ತಗುಡ್ಡ ರಕ್ಷಣೆಗಾಗಿ ಜನತೆಯ ತೀವ್ರ ಪ್ರತಿರೋಧ ಎದುರಿಸ ಬೇಕಾಗುತ್ತದೆ. ಬಲ್ಡೋಟಾ ಬೇಕೋ ಅಥವಾ ಮತ ಹಾಕಿ ಅಧಿಕಾರ ಕೊಟ್ಟ ಜನ ಬೇಕೋ ಎಂಬುದನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ತೀರ್ಮಾನಿಸಬೇಕು.

ಸಿದ್ದನಗೌಡ ಪಾಟೀಲ

## ಅಮೆರಿಕದಲ್ಲಿ ಟ್ರಂಪ್ ಯುಗ ಆರಂಭ

**ಮೊ**ದಲ ಆಫ್ರಿಕನ್ ಅಮೆರಿಕನ್ ಅಧ್ಯಕ್ಷ ಎಂಬ ಹೆಗ್ಗಳಿಕೆ ಹಾಗೂ ನೊಬೆಲ್ ಶಾಂತಿ ಪುರಸ್ಕೃತ ಒಬಾಮಾರ ಎಂಟು ವರ್ಷಗಳ ಆಡಳಿತ ಅಂತ್ಯಗೊಂಡು ಅಮೆರಿಕದಲ್ಲಿ ಈಗ ರಿಯಲ್ ಎಸ್ಟೇಟ್ ಶ್ರೀಮಂತ ಡೊನಾಲ್ಡ್ ಟ್ರಂಪ್‌ಯುಗ ಪ್ರಾರಂಭವಾಗಿದೆ. ಉಗ್ರಬಲಪಂಥೀಯ, ರಾಜಕೀಯದಲ್ಲಿ ಅನನುಭವಿ, ದಿಢೀರ್ ನಿರ್ಧಾರಗಳನ್ನು ಕೈಗೊಳ್ಳುವವ ಎಂದೆಲ್ಲ ಹೆಸರು ಪಡೆದುಕೊಂಡಿರುವ ಈತನ ನಡೆ ಅನಿರೀಕ್ಷಿತ. ಅಮೆರಿಕದ ಮಟ್ಟಿಗೆ ಬಲಪಂಥ ಎನ್ನುವ ನುಡಿಗಟ್ಟು ಅರ್ಥವಿಲ್ಲದ್ದು. ಡೆಮಾಕ್ರಾಟರು ಮತ್ತು ರಿಪಬ್ಲಿಕನ್ನರು ಒಂದೇ ನಾಣ್ಯದ ಎರಡು ಮುಖಗಳು. ಅಮೆರಿಕನ್ನರಿಗೆ ಈ ವಿಷಯದಲ್ಲಿ ಆಯ್ಕೆಯೇ ಇಲ್ಲ. ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ತಮ್ಮ ಕೊನೆಯ ಭಾಷಣದಲ್ಲಿ ಪ್ರಜಾಪ್ರಭುತ್ವದ ರಕ್ಷಣೆಯ ನಿರಂತರ ಹೋರಾಟ ಕುರಿತು ನುಡಿದಿರುವ ಎಚ್ಚರಿಕೆಯ ನುಡಿಗಳು ಗಮನಾರ್ಹ.

ಅಮೆರಿಕ ಹಾಗೂ ಅಮೆರಿಕನ್ನರ ಶ್ರೇಷ್ಠತೆ, ಅಮೆರಿಕನ್ನರಿಗೇ ಉದ್ಯೋಗ ಮುಂತಾದ ಘೋಷಣೆಗಳ ಬೆನ್ನೇರಿ ಅಧಿಕಾರಕ್ಕೆ ಬಂದಿರುವ ಟ್ರಂಪ್ ಹಿಂದಿನ ಸರಕಾರದ ನೀತಿಗಳನ್ನು ಬದಲಿಸುವ ಸೂಚನೆ ಇದೆ. ಆದರೆ ಅಮೆರಿಕದ ಮೂಲ ನೀತಿಗಳಾದ ಮುಕ್ತ ಮಾರುಕಟ್ಟೆ, ಸೈನಿಕ ನೆಲೆಗಳ ಸ್ಥಾಪನೆ, ಅಧಿನಾಯಕತ್ವದ ಹಂಬಲ ಮುಂತಾದವು ಬದಲಾಗದು. ಸರಕಾರದ ಮೇಲೆ ಮಿಲಿಟರಿ – ಕೈಗಾರಿಕಾ ಸಂಕೀರ್ಣದ ಹಿಡಿತ ಮತ್ತಷ್ಟು ಬಲಗೊಳ್ಳುವ ಸಂಭವವೇ ಹೆಚ್ಚು. ಅಮೆರಿಕನ್ನರಿಗೇ ಉದ್ಯೋಗ ಕಲ್ಪಿಸುವ ಯೋಜನೆ ಎಷ್ಟು ಮಟ್ಟಿಗೆ

*(೮ನೇ ಪುಟಕ್ಕೆ )*




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ದೂರದ ಉತ್ತರಪ್ರದೇಶದಲ್ಲಿ ಅಧಿಕಾರದಲ್ಲಿರುವ ಸಮಾಜವಾದಿ ಪಕ್ಷ ಅಪ್ಪ ಮಗನ ಜುಗ್ಗಾಟದಿಂದ ಹೋಳಾಗಿದೆ. ಗೊಂದಲದ ಗೂಡಾಗಿರುವ ಈ ಪಾರ್ಟಿಯ 'ಸೈಕಲ್' ಯಾರು ಏರುತ್ತಾರೆ ಎನ್ನುವುದು ಚುನಾವಣಾ ಆಯೋಗದ ಮುಂದಿತ್ತು. ಈಗ ಸೈಕಲ್ ಅಖಿಲೇಶ್ ಪಾಲಾಗಿದೆ. ಎಸ್‌ಪಿಯೂ ಹೋಳಾಗಿದೆ. ಹೊಂದಾಣಿಕೆಗೆ ಹುಡುಕಾಟ ಶುರುವಾಗಿದೆ. ಇತ್ತ ತಮಿಳುನಾಡಿನಲ್ಲಿ ಜಯಲಲಿತಾ ನಿಧನದ ನಂತರ ದ್ರಾವಿಡ ಪಕ್ಷಗಳಲ್ಲಿ ಸಂಚಲನ ಉಂಟಾಗಿದೆ. ಡಿಎಂಕೆಯ ನಾಯಕತ್ವ ಕರುಣಾನಿಧಿಯ ಕಿರಿಯ ಮಗ ಸ್ಟಾಲಿನ್ ವಹಿಸಿಕೊಂಡರೆ, ಅಣ್ಣಾಡಿಎಂಕೆ 'ಚಿನ್ನಮ್ಮ' ಎಂದು ಕರೆಸಿಕೊಳ್ಳುವ ಶಶಿಕಲಾ ಮಡಿಲಿಗೆ ಬಂದಿದೆ. ಈಕೆ ಯಾವಾಗ ಮುಖ್ಯಮಂತ್ರಿ ಗಾದಿ ಹಿಡಿಯುತ್ತಾರೋ! ಮುಂದೆ ಈ ಪಕ್ಷಗಳಲ್ಲಿ ಏನಾಗುತ್ತದೋ ನೋಡಬೇಕು. ಕರ್ನಾಟಕದಲ್ಲಿ ಮುಂದಿನ ವರ್ಷ ಅಧಿಕಾರಕ್ಕೇರುವ ಕನಸು ಕಾಣುತ್ತಿರುವ ಭಾಜಪದಲ್ಲಿ ಮುಖ್ಯಮಂತ್ರಿ ಪದವಿಗಾಗಿ ಈಶ್ವರಪ್ಪ – ಯಡಿಯೂರಪ್ಪ ಮಧ್ಯೆ ಕಚ್ಚಾಟ ಪ್ರಾರಂಭವಾಗಿದೆ. ಮಾಜಿ ಮುಖ್ಯಮಂತ್ರಿ ಬಿಎಸ್‌ವೈ ಪಕ್ಷದ ಅಧ್ಯಕ್ಷರಾಗಿ ನಡೆದುಕೊಳ್ಳುತ್ತಿರುವ ರೀತಿಯಿಂದ ಅತೃಪ್ತಿ ಭುಗಿಲೆದ್ದಿದೆ. ಪಕ್ಷದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಮೇಲೆ ಬಿಎಸ್‌ವೈ ವಿರುದ್ಧ ಈಶ್ವರಪ್ಪಗೆ ಆಕ್ರೋಶ. 'ರಾಯಣ್ಣ ಬ್ರಿಗೇಡ್' ಸಂಘಟನೆ ಸ್ಥಾಪಿಸಿಕೊಂಡಿರುವ ಈತ ಬಂಡಾಯದ ಬಾವುಟ ಹಾರಿಸಿದ್ದಾನೆ. ಇಬ್ಬರೂ ಭಾಜಪಗೆ ನಿಷ್ಠೆಯುಳ್ಳವರೇ. ಹಾಗಂತ ಪ್ರಮಾಣ ಮಾಡುತ್ತಾರೆ. ಇಬ್ಬರೂ ಶಿವಮೊಗ್ಗದವರೇ. ಯಾವತ್ತೂ ಇವರ ಮಧ್ಯೆ ಪೈಪೋಟಿ ಇದ್ದದ್ದೆ. ಒಂದು ರೀತಿಯಲ್ಲಿ ಈ ಮಲೆನಾಡ ಜಿಲ್ಲೆ ಕರ್ನಾಟಕದಲ್ಲಿ ರಾಜಕೀಯ ಕಣ. ಇಲ್ಲಿ ಎಲ್ಲ ರಾಜಕೀಯ ಪಕ್ಷಗಳೂ ಸಕ್ರಿಯವಾಗಿವೆ. ಒಂದು ಕಾಲದಲ್ಲಿ ಲೋಹಿಯ ಸೋಷಲಿಸ್ಟರ ಕೇಂದ್ರವೂ ಆಗಿದ್ದು ಸಾಕಷ್ಟು ಹಿಂಬಾಲಕರೂ ಇದ್ದರು. ಶಾಂತವೇರಿ ಗೋಪಾಲಗೌಡ, ಕಡಿದಾಳು ಮಂಜಪ್ಪರಂಥ ಶ್ರೇಷ್ಠ ರಾಜಕಾರಣಿಗಳನ್ನು ನೀಡಿದ ಶಿವಮೊಗ್ಗ ಕರ್ನಾಟಕಕ್ಕೆ ಮೂವರು ಮುಖ್ಯಮಂತ್ರಿಗಳನ್ನು (ಬಂಗಾರಪ್ಪ, ಜೆ. ಹೆಚ್. ಪಟೇಲ್, ಯಡಿಯೂರಪ್ಪ) ಕೊಟ್ಟಿದೆ. ಹಲವು ರಾಜಕಾರಣಿಗಳಿರುವ ಈ ಜಿಲ್ಲೆ ರಾಜ್ಯದಲ್ಲಿ ಹಲವು ಬೆಳವಣಿಗೆಗಳಿಗೂ ಕಾರಣವಾಗಿದೆ. ಅವುಗಳಲ್ಲಿ ಒಂದು ಈಶ್ವರಪ್ಪ – ಯಡಿಯೂರಪ್ಪ ಪ್ರಕರಣ. ಇದರಲ್ಲಿ ಯಾರು ಮೇಲುಗೈ ಪಡೆಯುತ್ತಾರೋ ತಿಳಿಯದು. ಯಡಿಯೂರಪ್ಪಗೆ ಭಾಜಪ ರಾಷ್ಟ್ರೀಯ ಅಧ್ಯಕ್ಷ ಅಮಿತ್‌ಷಾ ಅಭಯ ಹಸ್ತ ಇದೆ. ಈ ಇಬ್ಬರೂ ನಾಯಕರ ಕಚ್ಚಾಟ ಯಾವ ತಿರುವು ಪಡೆದುಕೊಳ್ಳುವುದೋ ಎಂಬ ಕುತೂಹಲವಂತೂ ಇದೆ ಈಗ ಸದ್ಯಕ್ಕೆ.

* * *

'ವ್ಯಕ್ತಿ ಆರಾಧನೆ' ಇಂಗ್ಲಿಷಿನಲ್ಲಿ 'ಪರ್ಸನಾಲಿಟಿ ಕಲ್ಟ್' ಎಂಬ ನುಡಿಗಟ್ಟು ರಷ್ಯಾದ ಉಕ್ಕಿನ ಮನುಷ್ಯ ಜೋಸೆಫ್ ಸ್ಟಾಲಿನ್ ನಿಧನದ ನಂತರ ಚಾಲ್ತಿಗೆ ಬಂತು. ಸೋವಿಯೆತ್ ಒಕ್ಕೂಟ ಅಸ್ತಿತ್ವದಲ್ಲಿರುವಷ್ಟೂ ಕಾಲ ಹಲವು ಹೊಸ ಪದಗಳು ನಿಘಂಟಿಗೆ ಸೇರಿಹೋಗಿವೆ ಈ ಶತಮಾನದ 'ಬ್ರೆಕ್ಸಿಟ್' ಪದದಂತೆ. ಈ ವ್ಯಕ್ತಿ ಆರಾಧನೆ ಏನೆಲ್ಲ ಅನಾಹುತ ತಂದಿತು ಎನ್ನುವುದನ್ನು ಹೊರಗೆಡಹಿದ್ದು ನಿಕಿಟ ಕೃಶ್ಚೇವ್ ಒಪ್ಪಿಸಿದ ರಹಸ್ಯ ವರದಿ. ಅದು ಬೆಳಕಿಗೆ ಬಂದದ್ದು 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯ ಮೂಲಕ ಸೋರಿಕೆಯಾಗಿ. ಇದು ಪ್ರಪಂಚದಾದ್ಯಂತ ರಾಜಕಾರಣಿಗಳು ಅನುಸರಿಸುವ ಚಾಣಾಕ್ಷತನಗಳಲ್ಲಿ ಒಂದು. ಈಗ ನಮ್ಮ ಭಾರತದಲ್ಲಿ ಪ್ರಧಾನಿ ನರೇಂದ್ರ ಮೋದಿಯನ್ನು ಅವತಾರ ಪುರುಷನನ್ನಾಗಿ, ದೇಶದ ಉದ್ಧಾರಕ್ಕಾಗಿಯೇ ಬಂದಿರುವ ಮಹಾಪುರುಷನನ್ನಾಗಿ ಬಿಂಬಿಸಲು ಭಾಜಪ ಪ್ರಯತ್ನಿಸುತ್ತಿದೆ. ಒಂದು ಬಗೆಯ 'ವ್ಯಕ್ತಿ ಆರಾಧನೆ' ಶುರುವಾಗಿದೆ. ನೋಟುರದ್ದತಿಯ ಅವಾಂತರವನ್ನು ಕಪ್ಪುಹಣ, ಅಕ್ರಮ ಗಳಿಕೆ, ಸಮಾಂತರ ಹಣಕಾಸು ಚಲಾವಣೆ ವಿರುದ್ಧ ಸಾರಿರುವ ಸಮರ ಎಂಬುದಾಗಿ ಮೋದಿಯನ್ನು ಹೀರೋ ಆಗಿ ಮಾಡಲಾಗುತ್ತಿದೆ. ಖಾದಿಗೂ–ಮೋದಿಗೂ ಗೋಕುಲಾಷ್ಟಮಿ –ಇಮಾಮಸಾಬಿ ಸಂಬಂಧ. ಎಂದೂ ಇಲ್ಲದ ಮೋದಿ ಈಗ ಚರಕಾ ಸುತ್ತುತ್ತಿರುವ ಚಿತ್ರದಲ್ಲಿ ಕಾಣಿಸಿಕೊಂಡಿದ್ದಾರೆ. ಖಾದಿ ಗ್ರಾಮೋದ್ಯೋಗ ಸಂಸ್ಥೆ ಪ್ರತಿವರ್ಷ ಪ್ರಕಟಿಸುವ ಕ್ಯಾಲೆಂಡರ್‌ನಲ್ಲಿ ಚರ್ಕಾ ಹಿಡಿದಿರುವ ಗಾಂಧಿ ಹೋಗಿ ಮೋದಿ ಅವತರಿಸಿದ್ದಾರೆ. ಇದಕ್ಕೆ ಪ್ರತಿಭಟನೆಯೂ ಬಂದಿದೆ. ಈ ದಿಢೀರ್ ಬದಲಾವಣೆಯನ್ನು ಭಾಜಪ ಸಮರ್ಥಿಸಿಕೊಂಡಿರುವ ರೀತಿ ವಿಚಿತ್ರವಾಗಿದೆ. ಪ್ರಾರಂಭದಿಂದಲೇ ಮೋದಿ ಸರ್ವಾಧಿಕಾರಿ ಧೋರಣೆ ಅನುಸರಿಸುತ್ತ ಬಂದಿದ್ದಾರೆ. ಆನೆ ತುಳಿದದ್ದೇ ದಾರಿ ಎಂಬಂತೆ ನಡೆದುಕೊಳ್ಳುತ್ತಿದ್ದಾರೆ. ಕೆಲವು ಪರಮಾಪ್ತ ಸಚಿವರುಗಳನ್ನು ಬಿಟ್ಟರೆ ಉಳಿದವರಾರೂ ಸೊಲ್ಲೆತ್ತುವಂತಿಲ್ಲ. ಪಕ್ಷ ಹಾಗೂ ಪಾರ್ಲಿಮೆಂಟ್‌ನಲ್ಲಿ ಉಗ್ರಮತ ಹೊಂದಿರುವ ಮೋದಿ–ಅಮಿತ್ ಷಾ ಜೋಡಿ ವಸ್ತುಶಃ ಸರ್ವಾಧಿಕಾರ ನಡೆಸುತ್ತಿದ್ದಾರೆ. ನೋಟು ರದ್ದತಿ ತೀರ್ಮಾನ ಕೈಗೊಂಡ ರೀತಿ, ಅದು ಆರ್ಥಿಕ ಕ್ಷೇತ್ರದಲ್ಲಿ ಸೃಷ್ಟಿಸಿರುವ ಗೊಂದಲ ಅದಕ್ಕೆ ಉದಾಹರಣೆ. ರಿಸರ್ವ್‌ಬ್ಯಾಂಕಿನ ಸ್ವಾಯತ್ತತೆಯನ್ನು ಮೂಲೆಗುಂಪಾಗಿಸಿರುವ ಸರಕಾರ ತನ್ನ ತೀರ್ಮಾನವನ್ನು ಇಪ್ಪತ್ತನಾಲ್ಕು ಗಂಟೆಗಳ ಕಾಲಾವಕಾಶವನ್ನೂ ನೀಡದೆ ಗವರ್ನರ್ ಮೇಲೆ ಹೊರಿಸಿದೆ. ತರಾತುರಿಯಲ್ಲಿ ಸಭೆ ನಡೆಸಿದ ಬ್ಯಾಂಕಿನ ಬೋರ್ಡಿನ ಮೂರು ನಾಲ್ಕು ಮಂದಿ ಸದಸ್ಯರು ಸರಕಾರದ ತೀರ್ಮಾನಕ್ಕೆ ಸಮ್ಮತಿಸಿದ್ದಾರೆ. ಇನ್ನೂ ಏನೇನು ರಹಸ್ಯ ಹೊರಬೀಳುವುದೋ ದಿನಕಳೆದಂತೆ. ಐವತ್ತು ದಿನಗಳ ಗಡುವು ಮುಗಿದು ಅರವತ್ತು ದಿನಗಳು ಕಳೆದರೂ ಇನ್ನೂ ಗೊಂದಲ ನಿವಾರಣೆಯಾಗಿಲ್ಲ. ನಿರ್ಬಂಧಗಳೆಲ್ಲವೂ ಹಾಗೆಯೇ ಮುಂದುವರಿಯುತ್ತಿದೆ ಬ್ಯಾಂಕಿನಲ್ಲಿರುವ ನಮ್ಮ ಹಣ ಪಡೆದುಕೊಳ್ಳಲು. ಇದುವರೆಗೆ ಸರಕಾರ ಕಪ್ಪುಹಣದ ಬಗ್ಗೆಯಾಗಲಿ, ಹಳೆಯ ನೋಟುಗಳ ಪಾವತಿ ಬಗ್ಗೆಯಾಗಲಿ, ಹೊಸ ನೋಟುಗಳ ಚಲಾವಣೆ ಯಾವಾಗ ಮಾಮೂಲಾಗುತ್ತದೆ ಎಂಬ ಬಗ್ಗೆಯಾಗಲಿ ಯಾವುದೇ ಅಂಕಿಅಂಶಗಳನ್ನೂ ನೀಡಿಲ್ಲ. ರಿಸರ್ವ್ ಬ್ಯಾಂಕ್ ಕೂಡ ಪ್ರಕಟಿಸಿಲ್ಲ. ಮೋದಿ ಅನುಮತಿ ಇಲ್ಲದೆ ಯಾವುದೂ ಸಾಧ್ಯವಿಲ್ಲ. ಎಲ್ಲ ಮೋದಿಮಯವಾಗಿ ಬಿಟ್ಟಿದೆ ಈ ದಿನಗಳಲ್ಲಿ. ಒಂದೊಂದಾಗಿ ಎಲ್ಲ ಸರಕಾರೇತರ ಸ್ವಾಯತ್ತ ಸಂಸ್ಥೆಗಳೂ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ. ಪ್ರಜಾಪ್ರಭುತ್ವಕ್ಕಾಗಿ ಹೋರಾಟ ನಿರಂತರ ಎಂಬುದಾಗಿ ತಮ್ಮ ವಿದಾಯದ ಭಾಷಣದಲ್ಲಿ ಅಮೆರಿಕದ ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಹೇಳಿದ್ದನ್ನು ಮೋದಿ ನೆನಪಿಗೆ ತರಬೇಕಾಗಿದೆ. ಅಂತೂ ಭಾಜಪದಲ್ಲೀಗ ಮೋದಿ ಆರಾಧನೆ ಪ್ರಾರಂಭವಾಗಿದೆ.

* * *

ನಮ್ಮ ದೇಶವು ಹಲವು ರಾಜ್ಯಗಳ ಒಕ್ಕೂಟ. ಅದನ್ನು ಸಂವಿಧಾನ ಸಹ ಘೋಷಿಸುತ್ತಿದೆ. ರಾಜ್ಯಗಳಿಗೆ ಕೆಲವು ವಿಚಾರಗಳಲ್ಲಿ ಸ್ವಾಯತ್ತತೆ ಇದೆ ಮತ್ತು ಇರಬೇಕು. ಇಲ್ಲವಾದರೆ ಒಕ್ಕೂಟದ ನೀತಿಯು ಅರ್ಥರಹಿತವಾಗುತ್ತದೆ, ವಿಘಟನೆಯ ಸಾಧ್ಯತೆ ಹೆಚ್ಚುತ್ತದೆ. ಇಂದಿನ ಕೇಂದ್ರ ಸರ್ಕಾರವು ಒಕ್ಕೂಟದ ರಚನೆಯೊಡನೆ ಚೆಲ್ಲಾಟವಾಡುತ್ತಿದೆ. ಸರ್ವಸ್ವವೂ ಕೇಂದ್ರದ, ಅದರಲ್ಲೂ ಪ್ರಧಾನಿಯವರ, ಹಿಡಿತದಲ್ಲಿರಬೇಕೆಂಬ ಆಶಯಕ್ಕೆ ತಕ್ಕಂತೆ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ. ಇದು ರಾಜ್ಯಗಳ ಘನತೆಗೆ ಚ್ಯುತಿ ತರುವಂತಹ ಕೆಟ್ಟ ಕ್ರಮ.

ಅದಕ್ಕೆ ಇತ್ತೀಚಿನ ಉದಾಹರಣೆಯು ನೆರೆರಾಜ್ಯ ಕೇರಳದಿಂದ ಬಂದಿದೆ: ಆ ರಾಜ್ಯದಲ್ಲಿ ಆರೆಸ್ಸೆಸ್ ಮತ್ತು ಕಮ್ಯುನಿಸ್ಟರ ನಡುವೆ ಘರ್ಷಣೆಗಳು ನಡೆಯುತ್ತಿರುವುದು ಈಚಿನ ವಿದ್ಯಮಾನ. ಕೇರಳ ಭಾರತೀಯ ಜನತಾ ಪಕ್ಷದ ನಾಯಕರನ್ನು ಕೇರಳದಲ್ಲಿ ಅಪಾಯಕ್ಕೆ ಗುರಿಮಾಡಲಾಗುತ್ತಿದೆಯೆಂದು ಹೇಳಿಕೊಂಡು ಕೇಂದ್ರದ ಗೃಹಖಾತೆಯು ಅವರಿಗೆ ರಕ್ಷಣೆ ಒದಗಿಸಲು ಕೇಂದ್ರದ ಅಧೀನದಲ್ಲಿರುವ ಪಡೆಗಳನ್ನು ನಿಯೋಜಿಸುತ್ತಿದೆ. ಇದು ಮೂರು ಅಂಶಗಳನ್ನು ನಮ್ಮ ಮುಂದಿಡುತ್ತಿದೆ: (ಅ) ಭಾಜಪ ನಾಯಕರಿಗೆ ಕಮ್ಯುನಿಸ್ಟರು ಕುತ್ತು ಉಂಟುಮಾಡುತ್ತಿದ್ದಾರೆ, ಅವರನ್ನು ಗುರಿಮಾಡಿ ಹಿಂಸೆಗಿಳಿದಿದ್ದಾರೆ; (ಆ) ಕೇರಳ ಸರ್ಕಾರವು ತನ್ನ ನಾಗರಿಕರಿಗೆ ರಕ್ಷಣೆ ಒದಗಿಸುತ್ತಿಲ್ಲ, ಭಾಜಪದ ನಾಯಕರನ್ನು ಚಚ್ಚಿದರೆ ಚಚ್ಚಲಿ ಎಂಬ ನಿರ್ಭಾವ ತಾಳಿದೆ; (ಇ) ಕೇಂದ್ರವು ರಕ್ಷಣೆ ಒದಗಿಸುವ ಜವಾಬ್ದಾರಿಯನ್ನು ಹೊರುತ್ತದೆ.

ಈ ಮೂರೂ ಗ್ರಹಿಕೆಗಳು ಸುಳ್ಳು ಎಂಬುದನ್ನು ದೃಢೀಕರಿಸುವ ಪುರಾವೆಗಳು ಲಭ್ಯವಿವೆ. ಮಂಗಳೂರಿನಲ್ಲಿ, ಮುಜಾಫರ್ ನಗರದಲ್ಲಿ,

ದಾದ್ರಿಯಲ್ಲಿ ಭಾಜಪ ಮತ್ತು ಅದರ ಅಂಗಸಂಸ್ಥೆಗಳು ಎಷ್ಟು ಉಪಟಳ ನೀಡಿದ್ದಾರೆಂಬುದು ದೇಶಕ್ಕೆಲ್ಲಾ ತಿಳಿದಿದೆ. 'ಪ್ರಜಾವಾಣಿ' ಪತ್ರಿಕೆಯಲ್ಲಿ ಶ್ರೀ. ಡಿ. ಉಮಾಪತಿಯವರು ಛತ್ತೀಸಘಡದಲ್ಲಿ ಇತ್ತೀಚೆಗೆ ಆದಿವಾಸಿಗಳ ಮೇಲೆ ಅಲ್ಲಿಯ ಭಾಜಪ ಸರ್ಕಾರದ ಪಡೆಗಳು ನಡೆಸಿದ ಭೀಕರ ಹಲ್ಲೆಯನ್ನು ವಿಶದೀಕರಿಸಿದ್ದಾರೆ. ಅಲ್ಲಿಯ ಪಾತಕ ಮತ್ತು ಹಿಂಸೆ ಖಂಡನೀಯ. ಮಹಿಳೆಯರಿಗಂತೂ ಅತ್ಯಂತ ಅಸಹನೀಯವಾದ ಬರ್ಬರತೆಯ ವಿಷಾನುಭವ ಆಗುವಂತಾಯಿತು. ಸರ್ಕಾರವು ಕಾಡುಹುಲಿಯಂತೆ ವರ್ತಿಸಿದೆ. ಕೇಂದ್ರ ಗೃಹಖಾತೆಯು ಅಲ್ಲೆಲ್ಲೂ ರಕ್ಷಣೆ ಒದಗಿಸಲು ಮುಂದಾಗಲಿಲ್ಲ; ಬದಲಾಗಿ, ಹಿಂಸೆಯನ್ನು ಉತ್ತೇಜಿಸಿದೆ. ಈಗ ಕೇರಳದಲ್ಲಿ ಎಂಥದೋ ಭೀತಿಯ ವಾತಾವರಣವಿದೆಯೆಂದು ಅಬ್ಬರಿಸುತ್ತಾ ಒಕ್ಕೂಟದ ನೀತಿಗೆ ಧಕ್ಕೆ ತರುವಂತಹ ರೀತಿಯಲ್ಲಿ ತನ್ನ ರಕ್ಷಣಾ ದಳಗಳನ್ನು ನಿಯೋಜಿಸುತ್ತಿದೆ. ಇದು ಕೆಟ್ಟ ರಾಜಕೀಯ, ಅಪಾಯಕಾರಿ ಬೆಳವಣಿಗೆ. ಚಿತಾವಣೆಗಾಗಿ ಕಾಲುಕೆರೆದು ಜಗಳಕ್ಕೆ ನಿಲ್ಲುವ ಮತ್ತು ಕೇರಳದ ವಾತಾವರಣವನ್ನು ಕದಡುವ ಕೀಳುಮಟ್ಟದ ಕುತಂತ್ರ ಇದರಲ್ಲಿದೆ. ಇನ್ನುಮುಂದೆ ರಾಜ್ಯಗಳಿಗೆ ಮಾರ್ಗದರ್ಶನ ನೀಡುವ ಮತ್ತು ಎಂತಹ ಕ್ರಮಗಳು ಅಗತ್ಯವೆಂದು ತಿಳಿವಳಿಕೆ ನೀಡುವ ಬದಲು ಕೇಂದ್ರ ಗೃಹಖಾತೆಯು ತಾನೇ ರಕ್ಷಕನಾಗಿ ಧಾವಿಸುತ್ತದೇನು ? ರಾಜ್ಯಗಳು ತಮ್ಮವೇ ಸೈನ್ಯದ ತುಕಡಿಗಳನ್ನು ನಿರ್ಮಿಸಿಕೊಳ್ಳುವತ್ತ ಕ್ರಮಿಸುತ್ತೇವೆಯೆ ?

ತನ್ನ ಪಕ್ಷದ ಶಕ್ತಿಯನ್ನು ವೃದ್ಧಿಸಿಕೊಳ್ಳಲು ಕೇಂದ್ರದ ಭಾಜಪ ಸರ್ಕಾರವು ಕೇರಳದಲ್ಲಿ ಸಂವಿಧಾನಬಾಹಿರವಾಗಿ ಮಧ್ಯಪ್ರವೇಶ ಮಾಡುತ್ತಿದೆ. ಅದು ಖಂಡನೀಯ. ದೇಶದ ಎಲ್ಲ ರಾಜ್ಯಗಳೂ ಈ ಬಗ್ಗೆ ಕೇಂದ್ರಕ್ಕೆ ಬುದ್ಧಿವಾದ ಹೇಳಬೇಕಾದ ಅನಿವಾರ್ಯತೆ ಇದೆ. ಇಲ್ಲವಾದರೆ ಕೇಂದ್ರದ ಯಾವ ಘಟಕಕ್ಕೂ ರಾಜ್ಯಸರ್ಕಾರಗಳು ರಕ್ಷಣೆ ಒದಗಿಸಬೇಕಾಗಿಲ್ಲವೆಂದು ಹೇಳಿದಂತಾಗುತ್ತದೆ. ಈ ಮಧ್ಯೆ ಮಂಗಳೂರಿನಿಂದ ಲೋಕಸಭೆಗೆ ಚುನಾಯಿತರಾಗಿರುವ ಮಹನೀಯರು ಸಾರ್ವಜನಿಕ ಸಭೆಯೊಂದರಲ್ಲಿ ಒಂದು ಎಚ್ಚರಿಕೆಯನ್ನು ನೀಡಿದ್ದಾರೆ. ಕೇರಳದಲ್ಲಿ ಭಾಜಪ ನಾಯಕರನ್ನು ಕಮ್ಯುನಿಸ್ಟರು ಹೊಡೆದರೆ ಕರ್ನಾಟಕದಲ್ಲಿ ನಾವು ಕಮ್ಯುನಿಸ್ಟರನ್ನು ಚೆನ್ನಾಗಿ ಹೊಡೆಯುತ್ತೇವೆ, ಎಂದು ಅವರು ಹೇಳಿದ್ದಾಗಿ ವರದಿಯಾಗಿದೆ. ನಾಗರಿಕ ಅಂತರ್ಯುದ್ಧಕ್ಕೆ ಆಹ್ವಾನ ಕೊಡುತ್ತಿದ್ದಾರೆಂದು ಇದರರ್ಥ. ಮಾನ್ಯ ಶ್ರೀ. ರಾಜನಾಥ ಸಿಂಗ್ ಅವರು ಇದಕ್ಕೆ ಹೇಗೆ ಪ್ರತಿಕ್ರಿಯಿಸುತ್ತಾರೋ ತಿಳಿಯದು. ಹೊರಗಿನ ಉಗ್ರರಿಂದ ಭಾರತಕ್ಕೆ ಸಾಕಷ್ಟು ಉಪಟಳ ದೊರಕಿದೆ; ಈಗ ಆಂತರಿಕ ಉಗ್ರರು ಅದಕ್ಕೆ ಕೊಸರು ಸೇರಿಸಲು ಹವಣಿಸುತ್ತಿದ್ದಾರೆಂದು ಹೇಳಬಹುದೆ ? ದೇಶ ಎತ್ತ ಸಾಗುತ್ತಿದೆ ?

* * *

ಪ್ರೊಫೆಸರ್ ಬರಗೂರು ರಾಮಚಂದ್ರಪ್ಪನವರ ನೇತೃತ್ವದಲ್ಲಿ ನಮ್ಮ ರಾಜ್ಯದ ಶಾಲಾ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ ಸಮಿತಿಯೊಂದನ್ನು ರಚಿಸಿದ್ದು, ಆ ಸಮಿತಿಯು ಪರಿಷ್ಕೃತ ನೂತನ ಪಠ್ಯಪುಸ್ತಕಗಳ ಹಸ್ತಪ್ರತಿಗಳನ್ನು ಸಿದ್ಧಗೊಳಿಸಿದೆ. ಅದನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಪ್ರಾಥಮಿಕ ಶಿಕ್ಷಣ ಸಚಿವ ತನ್ವೀರ್ ಸೇಠ್ ಆ ಪುಸ್ತಕಗಳ ವಿರುದ್ಧವಾಗಿರುವಂತಿದೆ. ಆತ ಹೇಗೂ ಕೇವಲ ಪ್ರಾಥಮಿಕ ಹಂತದ ಸಚಿವ, ಆತನಿಗೆ ಪುಸ್ತಕಗಳಲ್ಲಿರುವ ವಿಷಯ ಮತ್ತು ಮೌಲ್ಯ ಅರ್ಥವಾಗಿಲ್ಲವೆಂದು ತೋರುತ್ತದೆ. ಆರಂಭದಿಂದಲೇ ಆತ ಹೊಸ ಪಠ್ಯಗಳನ್ನು ಬರುವ ವರ್ಷ ಅಳವಡಿಸಿಕೊಳ್ಳಲಾಗದೆಂದು ಹೇಳುತ್ತಾ ಬಂದಿದ್ದಾನೆ. ಈಗ ಭಾರತೀಯ ಜನತಾ ಪಕ್ಷ ಮತ್ತು ಅದರ ಸಾಂಸ್ಕೃತಿಕ–ಬೌದ್ಧಿಕ ಮಾತೃಸಂಸ್ಥೆ ಆರೆಸ್ಸೆಸ್ ಜೊತೆಯಾಗಿ ಬರಗೂರರ ನಿರ್ದೇಶನದಲ್ಲಿ ಸಿದ್ಧಗೊಳಿಸಲಾದ ಪಠ್ಯಪುಸ್ತಕಗಳ ವಿರುದ್ಧ ಹರಿಯಾಯ್ದಿವೆ. ಸೇಠ್ ಮತ್ತು ಆರೆಸ್ಸೆಸ್ ಒಂದೇ ಕಂಠದಲ್ಲಿ ಮಾತನಾಡುತ್ತಿರುವುದನ್ನು ಮುಖ್ಯಮಂತ್ರಿ ಗಮನಿಸಿದ್ದಾರೆಂದು ಆಶಿಸಬೇಕಾಗಿದೆ. ಪುಸ್ತಕಗಳ ರಚನೆಯಲ್ಲಿ ಏನೋ ಪ್ರಶ್ನಾರ್ಹ ಪ್ರಕ್ರಿಯೆ ಜರುಗಿದೆಯೆಂಬಂತೆ ಭಾಜಪ ಮತ್ತು ಆರೆಸ್ಸೆಸ್ ಆಕ್ಷೇಪವೆತ್ತಿವೆ. ಪುಸ್ತಕಗಳ ಬಗೆಗಿನ ವರದಿಯನ್ನು ಸಾರ್ವಜನಿಕ ಚರ್ಚೆಗೆ ಮುಕ್ತಗೊಳಿಸಬೇಕೆಂದು ಅವು ಆಗ್ರಹಿಸುತ್ತಿವೆ. ಇದು ಪುಸ್ತಕಗಳ ಮೇಲಿನ ಆಕ್ಷೇಪವೋ ಅಥವಾ ಬರಗೂರರ ಮೇಲಿನ ವಿಷಕಾರುವಿಕೆಯೋ ಎಂಬ ಸಂಶಯ ಮೂಡಿದೆ. ಬಹುಶಃ ಎರಡೂ ಸೇರಿವೆ. ಸಾರ್ವಜನಿಕರನ್ನು ದಿಕ್ಕು ತಪ್ಪಿಸುವುದರಲ್ಲಿ ನಿಷ್ಣಾತವಾದ ಆರೆಸ್ಸೆಸ್ ಮುಖ್ಯವಾಗಿ ತಿಳಿಯಬೇಕಾದ್ದಿದು : ಬರಗೂರರ ವರದಿಯೇ ಬೇರೆ, ಪರಿಷ್ಕೃತ ಪಠ್ಯಪುಸ್ತಕಗಳೇ ಬೇರೆ. ಸಮಿತಿಗೆ ನಿರ್ವಹಿಸಲಾಗಿದ್ದ ಕೆಲಸವನ್ನು ನಿರ್ವಹಿಸಲಾಗಿದೆಯೆಂಬ ಮಾಹಿತಿಯನ್ನು ನೀಡುವುದು ವರದಿ. ಅದರಲ್ಲಿ ಚರ್ಚಿಸುವಂಥದೇನಿದ್ದೀತು ? ಶಾಲಾ ಅಧ್ಯಾಪಕರು, ಪರಿಣತರು, ಶಿಕ್ಷಣ ಇಲಾಖೆ, ಇವರೆಲ್ಲಾ ಸೇರಿ ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಿದ್ದಾರೆ. ಇದು ಯಾವಾಗಲೂ ನಡೆಯುವ ವಿಧಾನ. ಆದ್ದರಿಂದ ಸಮಿತಿಯು ಸಿದ್ಧಗೊಳಿಸಿ ಸರ್ಕಾರಕ್ಕೆ ನೀಡಿರುವ ಪುಸ್ತಕಗಳನ್ನು ಸಕಾಲದಲ್ಲಿ ಮುದ್ರಿಸಿ ಮೇ ೨೦೧೭ರಲ್ಲಿ ಶಾಲೆಗಳು ಆರಂಭವಾಗುವ ಮೊದಲೇ ವಿದ್ಯಾರ್ಥಿಗಳಿಗೆ ಕೊಡಬೇಕಾದ್ದು ಸರ್ಕಾರದ ಕರ್ತವ್ಯ. ಅಷ್ಟನ್ನೂ ಮಾಡಲಾಗದಿದ್ದರೆ ಸರ್ಕಾರದ ಶಿಕ್ಷಣ ಇಲಾಖೆ ಏಕೆ ಬೇಕು ?

ಬರಗೂರರ ನೇತೃತ್ವದಲ್ಲಿ ಸಿದ್ಧಗೊಳಿಸಲಾಗಿರುವ ಪುಸ್ತಕಗಳನ್ನು ಸಾರ್ವಜನಿಕವಾಗಿ ಚರ್ಚಿಸಬೇಕೆಂಬ ಆಗ್ರಹವು ಅವನ್ನು ಜಾರಿಯಾಗದಂತೆ ಮಾಡಲು ನಡೆಯುತ್ತಿರುವ ಹುನ್ನಾರ. ನಮ್ಮ ದೇಶದಲ್ಲಿ ಮತ್ತು ರಾಜ್ಯದಲ್ಲಿ ಪಠ್ಯಪುಸ್ತಕಗಳನ್ನು ಸಾರ್ವಜನಿಕವಾಗಿ ಚರ್ಚೆಗೆ ಎತ್ತಿಕೊಂಡಿದ್ದು ಯಾವಾಗಲಾದರೂ ಇತ್ತೆ ? ಭಾಜಪ ಸರ್ಕಾರವಿದ್ದಾಗ ಪ್ರಕಟವಾದ ಪುಸ್ತಕಗಳನ್ನು ಹಾಗೆ ಚರ್ಚೆಗೆ ಇಡಲಾಗಿತ್ತೆ ? ಪಠ್ಯಗಳ ಚೌಕಟ್ಟು ಮತ್ತು ಗುಣಮಟ್ಟವನ್ನು ಕಾಯ್ದುಕೊಳ್ಳಲು ಪರಿಣತ ಸಂಸ್ಥೆಗಳಿವೆ. ಎನ್‌ಸಿಇಆರ್‌ಟಿ, ಡಿಎಸ್‌ಇಆರ್‌ಟಿ, ಮುಂತಾದುವು ಅಂಥವು. ಅವು ಕೆಲವು ಸೂಚನೆಗಳನ್ನು ನೀಡುತ್ತವೆ. ಅವನ್ನು ಅನುಸರಿಸಿಯೇ ಈಗಿನ ಪಠ್ಯಪುಸ್ತಕಗಳು ರಚಿತವಾಗಿವೆ. ಅವನ್ನು ಪರಿಣತರು ಪರಿಶೀಲಿಸಿಯೂ ಇದ್ದಾರೆ. ಅದನ್ನು ಬರಗೂರರು ಈಗಾಗಲೆ ಸ್ಪಷ್ಟಪಡಿಸಿದ್ದಾರೆ.

ಈವರೆವಿಗೆ ಇದ್ದ ಪುಸ್ತಕಗಳಲ್ಲಿದ್ದ ನ್ಯೂನತೆಗಳು ಎಂಥವು ಮತ್ತು ಯಾವುವು ಎಂಬುದನ್ನು ಶಿಕ್ಷಣ ಇಲಾಖೆಯು ಆಸಕ್ತರ ಗಮನಕ್ಕೆ ತರಲು ಅವನ್ನು ಪ್ರಕಟಿಸಬಹುದು. ಅವುಗಳನ್ನು ಚರ್ಚಿಸಬಹುದೇ ವಿನಾ ಇಡೀ ಪಠ್ಯಪುಸ್ತಕಗಳನ್ನು ಸಾರ್ವಜನಿಕರು ಚರ್ಚಿಸಬೇಕೆಂಬ ಆಶಯ ಮತ್ತು ಒತ್ತಾಯ ಅರ್ಥಹೀನವಾದ್ದು. ತಾನು ಪಠ್ಯಪುಸ್ತಕಗಳಲ್ಲಿ ತೂರಿಸಿದ್ದ ಅವೈಚಾರಿಕ ಅಂಶಗಳು ಹೊಸ ಪುಸ್ತಕಗಳಲ್ಲಿ ಇರುವುದಿಲ್ಲವಲ್ಲಾ ಎಂಬುದು ಆರೆಸ್ಸೆಸ್‌ಗೆ ಬೇಸರ ಉಂಟುಮಾಡಿರಬಹುದು. ಅದು ಹೊಸ ಪಠ್ಯಪುಸ್ತಕಗಳ ನಿರಾಕರಣೆಗೆ ಸರಿಯಾದ ಕಾರಣವಂತೂ ಆಗಲಾರದು. ಅದನ್ನು ಅರಿತು ಮುಖ್ಯಮಂತ್ರಿಗಳು ಸಕ್ರಿಯವಾಗಿ ಮಧ್ಯಪ್ರವೇಶ ಮಾಡಿ ಶಿಕ್ಷಣ ಇಲಾಖೆಗೆ ಸೂಕ್ತ ನಿರ್ದೇಶನ ನೀಡಬೇಕು.

ಈ ಸಂದರ್ಭದಲ್ಲಿ ಆರೆಸ್ಸೆಸ್‌ಗೆ ಎಂತಹ ಪಠ್ಯಪುಸ್ತಕಗಳು ಬೇಕೆಂಬುದನ್ನು ಕುರಿತಂತೆ ಹರಿಯಾಣದ ಶಿಕ್ಷಣ ಸಚಿವರು ಸೂಚನೆ ಕೊಟ್ಟಿದ್ದಾರೆ. ಗೋಮಾತೆಯು ಉಸಿರು ತೆಗೆದುಕೊಂಡಾಗ ಆಮ್ಲಜನಕವು ಒಳಹೋಗುತ್ತದೆ; ಇದು ಎಲ್ಲರಿಗೂ ಗೊತ್ತು. ಆದರೆ ಮಾನ್ಯ ಸದರಿ ಮಂತ್ರಿಯವರಿಗೆ ಮಾತ್ರ ದಕ್ಕಿರುವ ಮಹತ್ವದ ಜ್ಞಾನವೇನೆಂದರೆ ಗೋವು ಉಸಿರುಬಿಟ್ಟಾಗ ಮತ್ತೆ ಆಮ್ಲಜನಕವೇ ಹೊರಬರುತ್ತದೆ; ಆದ್ದರಿಂದ ಗೋವು ಪರಿಸರವನ್ನು ಸ್ವಚ್ಛಗೊಳಿಸುತ್ತದೆ. ಅದರ ಸನಿಹದಲ್ಲಿದ್ದರೆ ನಮಗೆ ಅಧಿಕ ಆಮ್ಲಜನಕವು ದೊರಕಿ ನಮ್ಮ ಆರೋಗ್ಯವು ಅತಿಶಯವಾಗಿ ಉತ್ತಮಗೊಳ್ಳುತ್ತದೆ. ಇಂತಹ ಅಪೂರ್ವ ಜ್ಞಾನ ಪಡೆಯಲು ಸಚಿವರು ಎಲ್ಲಿ ಸಂಶೋಧನೆ ನಡೆಸಿದರೋ ತಿಳಿಯದು. ಖಂಡಿತ ಅವರು ಪಶುವೈದ್ಯಕೀಯ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ನೇಮಕಗೊಳ್ಳಲು ಸರ್ವಥಾ ಅರ್ಹರು. ಅವರ ಗೋ–ಆಮ್ಲಜನಕ ಜ್ಞಾನವನ್ನು ಶಾಲೆಗಳ ಮಕ್ಕಳಿಗೆ ಬೋಧಿಸುವುದು ವಿಜ್ಞಾನ; ಅದು ಪಠ್ಯಪುಸ್ತಕಗಳಲ್ಲಿ ಸೇರ್ಪಡೆಯಾಗಬೇಕು ! ಮಾನ್ಯ ಮುರಳಿ ಮನೋಹರ ಜೋಶಿ ಸಚಿವರಾಗಿದ್ದಾಗ ವಿಶ್ವವಿದ್ಯಾನಿಲಯಗಳಲ್ಲಿ ಜ್ಯೋತಿಷ್ಯದ ತರಗತಿಗಳನ್ನು ತೆರೆದರು. ಅವರು ಇಂತಹ ಶಿಸ್ತಿನಲ್ಲಿ ಪದವೀಧರರಾದರೆ ಹರಿಯಾಣ ಶಿಕ್ಷಣ ಸಚಿವರು ಎಳಸು ಜ್ಞಾನದಲ್ಲಿ ಸ್ನಾತಕೋತ್ತರ ಪದವೀಧರರು. ಕ್ಯಾನ್ಸರ್ ಕಾರಕಗಳ (ಕಾರ್ಸಿನೋಜೆನಿಕ್)

ಅಧ್ಯಯನವನ್ನೂ ಅವರು ಮಾಡಿದ್ದಾರಂತೆ ಮತ್ತು ಗೋಮೂತ್ರವು ಅರ್ಬುದರೋಗಕ್ಕೆ ಸಿದ್ಧೌಷಧವಂತೆ !

✳ ✳ ✳

ಗುಜರಾತಿನಲ್ಲಿ ಇತ್ತೀಚೆಗೆ ಗ್ರಾಮ ಪಂಚಾಯಿತಿಗಳಿಗಾಗಿ ಚುನಾವಣೆ ನಡೆದು ಫಲಿತಾಂಶವು ಹೊರಬಿದ್ದಿದೆ. ಅದರಂತೆ ಭಾರತೀಯ ಜನತಾ ಪಕ್ಷಕ್ಕೆ ತೀವ್ರವಾದ ಹಿನ್ನಡೆಯುಂಟಾಗಿದೆ. ನಮ್ಮ ಮಾಧ್ಯಮಗಳು ಈ ಚುನಾವಣಾ ಫಲಿತಾಂಶವನ್ನು ಪ್ರಕಟಿಸುವ ಗೋಜಿಗೇ ಹೋಗಲಿಲ್ಲ. ಅದು ಅವೇ ಕೈಗೊಂಡ ತೀರ್ಮಾನವೋ ಇಲ್ಲವೇ ಕೇಂದ್ರ ಸರ್ಕಾರದ ನಾಯಕರ ಹುಕುಂನಂತೆ ನಡೆದುಕೊಂಡುದರ ಪರಿಣಾಮವೋ ಎಂಬುದನ್ನು ಮಾಧ್ಯಮಗಳು ಪ್ರಾಮಾಣಿಕವಾಗಿ ಸಾರ್ವಜನಿಕರಿಗೆ ತಿಳಿಸಬೇಕು. ಕೆಲವು ರಾಜ್ಯಗಳಲ್ಲಿ ಶಾಸನಸಭಾ ಚುನಾವಣೆಗಳು ನಡೆಯುವ ಹಿನ್ನೆಲೆಯಲ್ಲಿ ಭಾಜಪಕ್ಕೆ ಮುಜುಗರ ಉಂಟುಮಾಡಿರುವ ಪಂಚಾಯಿತಿ ಚುನಾವಣಾ ಫಲಿತಾಂಶವನ್ನು ಪ್ರಕಟಿಸಲು ಮಾಧ್ಯಮಗಳು ಹಿಂಜರಿದಿರುವುದು ನಾಚಿಕೆಗೇಡು. ಮಾಧ್ಯಮಗಳು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಬಳಸಿಕೊಂಡಿರುವುದು ಹೀಗೆ. ಇನ್ನು ಅವು ಛತ್ತೀಸ್‌ಘಡದ ಆದಿವಾಸಿಗಳ ಮೇಲಿನ ಹಲ್ಲೆಯನ್ನು ಹೇಗೆ ತಾನೆ ಸಾರ್ವಜನಿಕರಿಗೆ ತಿಳಿಸುತ್ತವೆ ! ಅಲ್ಲಿ ಮಾಧ್ಯಮದವರಿಗೆ ನಿಷೇಧ ಹೇರಲಾಗಿತ್ತು, ಹಳ್ಳಿಗಳಿಗೆ ತೆರಳಿ ನೇರವಾಗಿ ಸನ್ನಿವೇಶವನ್ನು ಗ್ರಹಿಸಲು ಅವಕ್ಕೆ ಅವಕಾಶವಿರಲಿಲ್ಲ. ಹಾಗಿದ್ದಾಗ್ಯೂ ಶ್ರೀ. ಉಮಾಪತಿ ಅದನ್ನು ಸಾರ್ವಜನಿಕರೆದುರು ಬಿಚ್ಚಿಟ್ಟಿದ್ದಾರೆ. ಗುಜರಾತಿನ ಪಂಚಾಯಿತಿ ಚುನಾವಣಾ ಫಲಿತಾಂಶಗಳನ್ನು ಮತ್ತೆ ಅವರೇ ವಿವರಿಸಿ ಹೇಳಬೇಕೆ ? ಗುಜರಾತಿನಲ್ಲಿರುವ ಮಾಧ್ಯಮ ಪ್ರತಿನಿಧಿಗಳು ಏನು ಮಾಡುತ್ತಿದ್ದಾರೆಂಬ ಕುತೂಹಲ ಸಾರ್ವಜನಿಕರನ್ನು ಕಾಡುತ್ತಿದೆ.

✳ ✳ ✳

ಕಾಶ್ಮೀರದ ಒಬ್ಬ ಬಾಲೆ ಝಾಯಿರಾ ವಾಸಿಂ, 'ದಂಗಲ್' ಎಂಬ ಚಲನಚಿತ್ರದಲ್ಲಿ ನಟಿಸಿದ್ದುದು ಮತ್ತು ಆಕೆ ಜಮ್ಮು-ಕಾಶ್ಮೀರದ ಮುಖ್ಯಮಂತ್ರಿಯವರನ್ನು ಭೇಟಿಯಾದ್ದು ಕಾಶ್ಮೀರದ ಪ್ರತ್ಯೇಕತಾವಾದಿಗಳಿಗೆ ಹಿಡಿಸಲಿಲ್ಲವಂತೆ. ಆದ್ದರಿಂದ ಅವರೆಲ್ಲಾ ಕುಮಾರಿ ವಾಸಿಂ ವಿರುದ್ಧ ವಾಗ್ದಾಳಿ ಹರಿಸಿದ್ದಾರೆ, ಬೆದರಿಕೆ ಒಡ್ಡಿದ್ದಾರೆ. ಜಡ್ಡು ಮನೋಭಾವದವರಿಂದ ಇನ್ನೇನನ್ನು ನಿರೀಕ್ಷಿಸಲು ಸಾಧ್ಯ ! ಕಾಶ್ಮೀರದ ಯುವಕ-ಯುವತಿಯರಿಗೆ ಇಂತಹ ಅಡೆತಡೆಗಳು ಅಗಾಧ ತೊಂದರೆಯನ್ನುಂಟುಮಾಡಿವೆ, ಅವರ ಪ್ರಗತಿಯ ಹಾದಿಯನ್ನು ದುರ್ಗಮಗೊಳಿಸಿವೆ. ಇಂತಹ ಅಟ್ಟಹಾಸವನ್ನು ನಿಗ್ರಹಿಸಲು ಜಮ್ಮು-ಕಾಶ್ಮೀರದ ಸರ್ಕಾರವು ಯುವಕ-ಯುವತಿಯರ ಪರವಾಗಿ ನಿಲ್ಲಬೇಕು, ಅವರ ಅಭಿವ್ಯಕ್ತಿಗೆ ಅವಕಾಶ ಕಲ್ಪಿಸಿಕೊಡಬೇಕು. ಪ್ರತ್ಯೇಕತಾವಾದಿಗಳಿಗೆ ಕಾಶ್ಮೀರದ ಯುವಕ-ಯುವತಿಯರ ಬಗೆಗೆ ಕನಿಷ್ಠಮಟ್ಟದ ಕಾಳಜಿ ಇಲ್ಲವಾದರೆ ಅವರು ಯಾರ ಪ್ರತಿನಿಧಿಗಳಾದಾರು ! ಅವರು ಮೆಹಬೂಬಾ ಮುಫ್ತಿಯವರನ್ನು ಮುಖ್ಯಮಂತ್ರಿಯನ್ನಾಗಿ ಮಾನ್ಯ ಮಾಡುವುದಿಲ್ಲವೆಂಬ ಕಾರಣಕ್ಕೆ ಕಾಶ್ಮೀರದ ಯಾವ ಯುವಕ-ಯುವತಿಯರೂ ಅವರನ್ನು ಭೇಟಿಯಾಗುವಂತಿಲ್ಲವೆಂದು ಹೇಳುವ ಹಕ್ಕು ಅವರಿಗಿಲ್ಲ. ಇದು ನಮ್ಮ ರಾಜ್ಯದ ಯುವಕ-ಯುವತಿಯರ ಒಮ್ಮನಸ್ಸಿನ ಆಗ್ರಹವೆಂದರೆ ತಪ್ಪಾಗಲಾರದು.

✳ ✳ ✳

ಅಮೆರಿಕಾದ ಅಧ್ಯಕ್ಷ ಪದವಿಯಿಂದ ನಿರ್ಗಮಿಸಿರುವ ಬರಾಕ್ ಒಬಾಮ ಅವರ ಊರು ಶಿಕಾಗೋನಲ್ಲಿ ವಿದಾಯದ ಭಾಷಣ ಮಾಡುವಾಗ ಕಣ್ಣೀರು ಹಾಕಿದರಂತೆ. ಅವರಿಗೆ ನೊಬೆಲ್ ಶಾಂತಿ ಪುರಸ್ಕಾರ ನೀಡಲಾಗಿತ್ತು. ಅಮೆರಿಕಾದ ಒಬ್ಬ ಚತುರ ಸಂಶೋಧಕ ಒಬಾಮ ಯುಗದಲ್ಲಿ ಅಮೆರಿಕಾ ಯಾವ ಯಾವ ದೇಶಗಳಲ್ಲಿ ವಿವಿಧ ಮಾದರಿಗಳ ಎಷ್ಟೆಷ್ಟು ಬಾಂಬುಗಳನ್ನು ಸುರಿಸಿದರೆಂಬುದರ ಅಂಕಿ-ಸಂಖ್ಯೆ ನೀಡಿದ್ದಾನೆ. ಒಂದೊಂದು ಬಾಂಬಿನಿಂದ ಎಷ್ಟೆಷ್ಟು ಜನ ಹತರಾದರೆಂದು ಆತ ತಿಳಿಸಿಲ್ಲ. ೨೦೧೫ರಲ್ಲಿ ಒಬಾಮ ಸುರಿಸಿದ ಬಾಂಬುಗಳ ಸಂಖ್ಯೆಗಿಂತಲೂ ೩,೦೨೭ರಷ್ಟು ಹೆಚ್ಚು ಸಂಖ್ಯೆಯ ಬಾಂಬುಗಳನ್ನು ೨೦೧೬ರಲ್ಲಿ ಈ ಮಹಾನುಭಾವ ಸುರಿಸಿದ್ದರಂತೆ. ೨೦೧೬ರ ವಿವರಗಳು ಹೀಗಿವೆ : ಒಟ್ಟು ಸುರಿಸಲ್ಪಟ್ಟ ಬಾಂಬುಗಳು : ೨೬,೧೭೧. ಅವುಗಳಲ್ಲಿ ೧೨,೧೯೨ ಸಿರಿಯಾದ ಮೇಲೆ, ೧೨,೦೯೫ ಇರಾಕ್ ಮೇಲೆ, ೧೩೩೭ ಆಫ್ಘಾನಿಸ್ತಾನದ ಮೇಲೆ, ೪೯೬ ಲಿಬಿಯಾದ ಮೇಲೆ ಮತ್ತು ೩೪ ಯೆಮೆನ್ ಮೇಲೆ. ಇನ್ನು ಮಿಕ್ಕವು ಪುಡಿಪುಡಿಯಾಗಿ ಬೇರೆಲ್ಲೋ. ಈ ಮಾಹಿತಿಯನ್ನು ಅಮೆರಿಕಾದಲ್ಲಿ ಪ್ರಾಧ್ಯಾಪಕರಾಗಿರುವ ಡಾ॥ ಬದರಿನಾಥ್ ಒದಗಿಸಿದ್ದಾರೆ.

ನೊಬೆಲ್ ಶಾಂತಿ ಪುರಸ್ಕಾರಕ್ಕೆ ಸರಿಯಾದ ಪುರಸ್ಕಾರ ನೀಡಿದ ಮಾತುಗಾರ ಒಬಾಮ, ಕೊಲೆಗಾರರಾಗಿ ಹೆಚ್ಚು ವಿಜೃಂಭಿಸಿದರು. ಅವರು ಶಿಕಾಗೋದಲ್ಲಿ ಕಣ್ಣೀರು ಮಿಡಿಯುವ ಮುನ್ನ ವಿವಿಧ ದೇಶಗಳಲ್ಲಿ ಲಕ್ಷಾಂತರ ಜನ ರಕ್ತ ಮತ್ತು ಕಣ್ಣೀರು ಸುರಿಸಿದ್ದರು. ■

*(ಸಂಪಾದಕೀಯ ೫ನೇ ಪುಟದಿಂದ)*

ಫಲಕಾರಿಯಾದೀತು ನೋಡಬೇಕು. ಬಂಡವಾಳದ ಹೊರಹರಿವು ಕಡಿಮೆಯಾಗುವ ಸಾಧ್ಯತೆಗಳಿವೆ. ಮುಂದಿನ ದಿನಗಳಲ್ಲಿ ಟ್ರಂಪ್ ಸಂಕುಚಿತ ಬಿಳಿಯರ ಪರನೀತಿಗಳಿಂದಾಗಿ ಜನಾಂಗೀಯ ವೈಷಮ್ಯ, ಪ್ರಮುಖವಾಗಿ ಆಫ್ರಿಕನ್ ಅಮೆರಿಕನ್ನರು ಮತ್ತು ಮುಸಲ್ಮಾನರ ಬಗ್ಗೆ ತಾರತಮ್ಯ ವರ್ಧಿಸಲಿದೆ ಟ್ರಂಪ್ ಆಡಳಿತಾವಧಿಯಲ್ಲಿ. ಅಮೆರಿಕ ಇನ್ನೂ ಕರಿಯರನ್ನು ದ್ವೇಷಿಸುವ ಮನೋವೃತ್ತಿಯಿಂದ ಹೊರ ಬಂದಿಲ್ಲ. ಹಿಂದಿನ ವರ್ಷಗಳ ಘಟನೆಗಳೇ ಅದಕ್ಕೆ ಸಾಕ್ಷಿ.

ಬಂಡವಾಳಶಾಹಿಪರ, ಶ್ರೀಮಂತರ ಪರನೀತಿಗಳಿಗೆ ಆದ್ಯತೆ ಟ್ರಂಪ್ ಆಡಳಿತಾವಧಿಯಲ್ಲಿ ಹೆಚ್ಚಲಿದೆ. ಅವರ ಸಂಪುಟ ರಚನೆಯ ಕಸರತ್ತು ಅದನ್ನು ತೋರಿಸುತ್ತದೆ. ಹಣ ಮತ್ತು ಮಿಲಿಟರಿಗೇ ಪ್ರಾಧಾನ್ಯತೆ. ಟ್ರಂಪ್ ಸಂಪುಟದಲ್ಲಿ ಇರುವವರೆಲ್ಲ ಕೈಗಾರಿಕೋದ್ಯಮಗಳಲ್ಲಿ ಉನ್ನತ ಅಧಿಕಾರದಲ್ಲಿ ಇದ್ದವರು ಮತ್ತು ಮಾಜಿ ಜನರಲ್ಲುಗಳು. ರಕ್ಷಣಾ ಇಲಾಖೆಯ ನೇತೃತ್ವ ಜನರಲ್ ಜೇಮ್ಸ್ ಮ್ಯಾಟಿಸ್‌ಗೆ. ಈತ ನೌಕಾದಳದವ. ಸೇನಾಪಡೆ ಲೆ. ಜನರಲ್ ಮೈಕೇಲ್ ಫ್ಲಿನ್ ರಾಷ್ಟ್ರೀಯ ಭದ್ರತಾ ಸಲಹೆಗಾರ, ಆಂತರಿಕ ಭದ್ರತೆ – ನೌಕಾದಳದ ಜನರಲ್ ಜಾನ್ ಕೆಲ್ಲಿ ವಶದಲ್ಲಿರುತ್ತದೆ. ಇನ್ನೂ ಇಬ್ಬರು ಮೂವರು ರಕ್ಷಣಾಪಡೆಯವರು ಸಂಪುಟ ಸೇರುವ ಸಾಧ್ಯತೆ ಇದೆ. ಇನ್ನು ಉಳಿದ ಸಂಪುಟ ಸದಸ್ಯರುಗಳು ಬಿಲಿಯನೇರುಗಳೇ. ಟ್ರಂಪ್ ಸಂಪುಟದ ಸದಸ್ಯರಲ್ಲಿ ಅರ್ಧ ಜನರ ಶ್ರೀಮಂತಿಕೆ ೧೪.೫ ಬಿಲಿಯ ಡಾಲರುಗಳಿಗೂ ಅಧಿಕ. ಜಾರ್ಜ್ ಬುಷ್ ಸಂಪುಟದಲ್ಲಿದ್ದುದಕ್ಕಿಂತ ಶ್ರೀಮಂತಿಕೆ ೩೦ ಪಟ್ಟು ಅಧಿಕ. ಒಟ್ಟಿನಲ್ಲಿ ಅಮೆರಿಕಾದ ಅತ್ಯಂತ ಶ್ರೀಮಂತರ ಸಂಪುಟ. ವಾಣಿಜ್ಯ ಇಲಾಖೆ ನೇತೃತ್ವದಲ್ಲಿರುವ ವಿಲ್ಬರ್‌ರಾಸ್ ಎಂಬುವವ 'ಕಿಂಗ್ ಆಫ್ ಬ್ಯಾಂಕ್‌ರಪ್ಸಿ' (ದಿವಾಳಿಕೋರರ ಅರಸ) ಖ್ಯಾತಿಯ ವ್ಯಕ್ತಿ ೨.೯ ಬಿಲಿಯ ಡಾಲರುಗಳ ಶ್ರೀಮಂತ. ಹಣಕಾಸು ಸಚಿವ ಸ್ಟೀವನ್ ನುಚಿನ್ ೪೬ ಮಿಲಿಯ ಡಾಲರುಗಳ ಒಡೆಯ. ಇವು ಉದಾಹರಣೆಗಳಷ್ಟೆ. ಇಂಥ ಸರಕಾರದಿಂದ ಬಡ ಜನ ಏನನ್ನು ತಾನೆ ನಿರೀಕ್ಷಿಸಬಹುದು !

ಭಾರತದ ಮಟ್ಟಿಗೆ ವೀಸಾ ನಿರ್ಬಂಧದಿಂದ ಐ.ಟಿ. ಉದ್ಯಮಕ್ಕೆ ಸ್ವಲ್ಪ ಬಿಸಿ ತಟ್ಟೀತು. ಉಳಿದಂತೆ ಹೆಚ್ಚಿನ ಬದಲಾವಣೆಗಳ ಸಾಧ್ಯತೆ ಕಡಿಮೆ. ಟ್ರಂಪ್ ಮತ್ತು ಮೋದಿ ಇಬ್ಬರೂ ತಕ್ಕಡಿಗೆ ಹಾಕಿದರೆ ಒಂದೇ ಸಮ. ಅಭಿವೃದ್ಧಿ, ಉತ್ತಮ ಆಡಳಿತದ ಅಬ್ಬರದ ಮೇಲೆ ಮೋದಿ ಅಧಿಕಾರ ಕ್ಕೇರಿದರೆ, ಟ್ರಂಪ್ ಅಮೆರಿಕದ ಶ್ರೇಷ್ಠತೆ ಎತ್ತಿ ಹಿಡಿಯುವ, ಅನ್ಯದೇಶೀಯ ವಲಸೆಗಾರರನ್ನು ದ್ವೇಷಿಸುವ ಘೋಷಣೆ ಯಿಂದ ಅಧಿಕಾರಕ್ಕೇರಿದವರು. ಮೋದಿ ನೋಟುರದ್ದತಿಯ ದುಸ್ಸಾಹಸ ಮಾಡಿದ್ದಾರೆ, ಟ್ರಂಪ್ ಕೂಡ ಮುಂದೆ ಇಂಥದೇ ಬಗೆಯ ಅವಿವೇಕದ ನಿರ್ಧಾರ ತಳೆಯಬಹುದು. ಸದ್ಯಕ್ಕಂತೂ ಭಾರತ-ಅಮೆರಿಕ ಸಂಬಂಧಗಳಿಗೆ ಬಾಧಕವಿಲ್ಲ. ಟ್ರಂಪ್ ನಡವಳಿಕೆ ಯಾವ ದಿಶೆಯಲ್ಲಿ ತಿರುಗುವುದೋ ಹೇಳಲಾಗದು. ದಿಢೀರ್ ನಿರ್ಧಾರಗಳ ಸಂಭವವೇ ಅಧಿಕ.




## ಭಗವದ್ಗೀತೆ : ಒಂದು ಅವಲೋಕನ

# ೬. ಸ್ಥಿತಪ್ರಜ್ಞ ಮತ್ತು ಲೋಕಸಂಗ್ರಹ

◆

**ಜಿ. ರಾಮಕೃಷ್ಣ**

ಜೀವನಕ್ಕೆ ಒಂದೇ ಮಾದರಿ: ಸಾಮಾಜಿಕ ವ್ಯವಸ್ಥೆ ಯಾವ ಬದಲಾವಣೆಯೂ ಇಲ್ಲದೆ ಏಕಪ್ರಕಾರವಾಗಿ ಮುಂದುವರಿಯಬೇಕು. ಎಲ್ಲ ಸಮಸ್ಯೆಗಳನ್ನೂ ವ್ಯಕ್ತಿಯ ನೆಲೆಯಲ್ಲಿ ಬಗೆಹರಿಸಿಕೊಳ್ಳಬೇಕು. ಒಟ್ಟಿನಲ್ಲಿ, ಸಮಾಜವು ಸ್ಥಗಿತವಾಗಿರಬೇಕು. ಆಗ ವರ್ಣ ವ್ಯವಸ್ಥೆಯ ಏರುಪೇರುಗಳು ಸಾರ್ವಕಾಲಿಕವಾಗುತ್ತವೆ. ಅದನ್ನು ಪ್ರಶ್ನಿಸುವುದು ಒಂದು ಕಳಂಕ. ಇದಕ್ಕೆ ಸಮರ್ಥನೆಯೋ ಎಂಬಂತೆ ಗೀತೆಯ ಲೋಕಸಂಗ್ರಹದ ಪ್ರತಿಪಾದನೆ ಇದೆ.

**ಭ**ಗವದ್ಗೀತೆಯು ದೇಹಾತ್ಮವಾದಿಗಳನ್ನು ಯಥೇಚ್ಛವಾಗಿ ಮೂದಲಿಸಿದೆ, ಆದರೆ ಅದಕ್ಕೆ ಪ್ರತಿಯಾಗಿ ಲೋಕಾಯತ ಪಂಥವು ಗೀತೆಯನ್ನು ಟೀಕಿಸಿರುವುದು ಎಲ್ಲೂ ದಾಖಲಾಗಿಲ್ಲ. ಜನರ ನಡುವೆ ಆ ಪಂಥದವರ ಪ್ರಭಾವವು ಎಷ್ಟರಮಟ್ಟಿಗೆ ಇದ್ದಿತೋ ಅದೂ ತಿಳಿಯುವುದಿಲ್ಲ. ಸಾಮಾಜಿಕ ವ್ಯವಸ್ಥೆಯು ಗೀತೆಗೆ ಪುರಸ್ಕಾರ ನೀಡಿದ್ದು ಆಶ್ಚರ್ಯಕರವೇನಲ್ಲ. ಅಂತಹ ಭಾಗ್ಯವು ಲೋಕಾಯತರಿಗಂತೂ ದುಸ್ಸಾಧ್ಯವೇ ಆಗಿತ್ತು. ವರ್ಣ ವಿಭಜನೆಯನ್ನು ದೇಹಾತ್ಮವಾದಿಗಳು ಪ್ರಶ್ನಿಸಿದ್ದುದುಂಟು, ಆದರೆ ಆ ವಿಭಜನೆಯು ಕುಸಿದುಬೀಳಲು ಸನ್ನಿವೇಶವು ರಚನೆಯಾಗಲಿಲ್ಲ. ಆದರೆ ದೇಹಾತ್ಮವಾದಿಗಳ ನೈತಿಕತೆ, ಜೀವನಾಕಾಂಕ್ಷೆ, ವ್ಯಕ್ತಿತ್ವ ಇವು ಯಾವುವೂ ಭಗವದ್ಗೀತೆಯ ನಿರೂಪಣೆಗೆ ಅನುರೂಪವಾಗಿಲ್ಲವೆಂಬುದು ಇತಿಹಾಸ. ರಾಜರ ಆಸ್ಥಾನಗಳಲ್ಲಿ ಅವರು ಶೋಭಿಸಲಿಲ್ಲ, ಮಠಗಳನ್ನು ಸ್ಥಾಪಿಸಿ ಪ್ರಚಾರಕ್ಕೆ ಹೋಗಲಿಲ್ಲ. ಆದರೆ ಜನಮಧ್ಯದಲ್ಲಿ, ಜನಮಾನಸದಲ್ಲಿ, ಜಾನಪದರ ರೀತಿಯಲ್ಲಿ ನಿಷ್ಠುರದಿಂದ ಬಾಳಿದ್ದಾರೆ. ಅವರು ಛಾಂದೋಗ್ಯ ಉಪನಿಷತ್ತಿನ ಖ್ಯಾತ ಭೌತವಾದಿ ತತ್ತ್ವಶಾಸ್ತ್ರಜ್ಞ ಉದ್ದಾಲಕ ಆರುಣಿಯ ಪರಂಪರೆಯವರು. ಅವನನ್ನು ಅಶ್ವಪತಿ ಕೈಕೇಯ ಎಂಬ ರಾಜ ಕೇಳಿದನಂತೆ, "ಗೌತಮ, ನೀನು ಆತ್ಮನೆಂದು ಯಾವುದನ್ನು ಆರಾಧಿಸುತ್ತೀಯೆ ?" ಎಂದು. ಯಾವ ಅಳುಕೂ ಇಲ್ಲದೆ ಅವನೆಂದ, "ಎಲೈ ರಾಜನೆ, ಪೃಥ್ವಿಯನ್ನು ನಾನು ಹಾಗೆ ಬಗೆಯುತ್ತೇನೆ." ಅದು ದೇಹಾತ್ಮವಾದ. ಅದರಲ್ಲಿ ಗೀತೆಯ ತೆಗಳಿಕೆಗೆ ಅರ್ಹವಾಗುವಂತಹ ತತ್ತ್ವವೇನೂ ಇಲ್ಲ; ವೃಥಾ ಆರೋಪಿಸಲಾದ ತಥಾಕಥಿತ ಅನೀತಿಗಳು ಅವರಿಗೆ ಅನ್ವಯವಾಗುವುದಿಲ್ಲ. ಆಗುವುದಿದ್ದರೆ ಢೋಂಗಿ ಭಾವನಾವಾದಿಗಳಿಗೆ ಅನ್ವಯವಾಗುತ್ತದೇನೋ, ಅಷ್ಟೆ. ಗೀತೆಯು ಎಲ್ಲರೂ "ಸ್ವಭಾವಜ ಧರ್ಮ"ಗಳನ್ನು ಕಟ್ಟುನಿಟ್ಟಾಗಿ ಆಚರಿಸಬೇಕೆಂದು, ಅದನ್ನುಳಿದು ಬೇರೆಯದಕ್ಕೆ ಲಗ್ಗೆ ಇಡಕೂಡದೆಂದು, ಪದೇ ಪದೇ ಸೂತ್ರೀಕರಿಸಿದೆ. ಇದು ದೇಹಾತ್ಮವಾದಿಗಳು (ಲೋಕಾಯತರು) ಹೇಳುವ "ಸ್ವಭಾವ" ಅಲ್ಲ. ಅಲ್ಲಿ ಅದು ಪ್ರಕೃತಿಸಹಜ ನಿಯಮ ಎಂಬರ್ಥವನ್ನು ಹೊಂದಿದೆ. ಆದರೆ ಗೀತೆಯ ಪ್ರಕಾರ 'ಸ್ವಭಾವ' ಎಂದರೆ 'ವ್ಯಕ್ತಿಯು ಜನ್ಮತಾಳಿದ ವರ್ಣಕ್ಕೆ ಅನುಗುಣವಾಗಿ' ಎಂಬರ್ಥವನ್ನು ಹೊಂದಿದೆ. ಈ 'ಸ್ವಭಾವಜ' ಧರ್ಮವನ್ನು ಜನರು ಮರುಮಾತಿಲ್ಲದೆ ಅಂಗೀಕರಿಸುವಂತೆ ಮಾಡಲು ಗೀತೆಯಲ್ಲಿ ವಿಭೂತಿ, ಅವತಾರ, ಭಕ್ತಿ ಇತ್ಯಾದಿ ಉಪದೇಶಗಳಿವೆ ಎಂಬ ಶಂಕೆ ಆಧಾರರಹಿತವಲ್ಲ. "ಸ್ವಭಾವಜ" ಧರ್ಮವನ್ನು ಪ್ರಶ್ನಿಸಿದವರಿಗೆ ಗೀತೆಯು ಸಮಾಧಾನ ರೂಪದ ಉತ್ತರ ನೀಡಿದೆ. ಅದರ ಸಂಕ್ಷಿಪ್ತ ನಿರ್ದೇಶನ ಇದು : "ಅನೂಚಾನವಾಗಿ ನಡೆದುಬಂದಿರುವಂತೆ ನಿನ್ನ ಸ್ಥಾನದಲ್ಲಿ ನೀನು ಕೆಲಸ ಮಾಡು" (೪.೧೫ : ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ। ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥). ಅಂದರೆ, ಯಥಾಸ್ಥಿತಿಯನ್ನು ಅಲ್ಲಾಡಿಸುವುದು ಯೋಗ್ಯವಲ್ಲ, ಎಂದು. ಇನ್ನೂ ಅನುಮಾನ ಉಂಟೆ ? ಕಡೆಯ ೧೮ನೆಯ ಅಧ್ಯಾಯ ಅದನ್ನು ಪರಿಹರಿಸುತ್ತದೆ : "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂದು ಅವರವರ 'ಗುಣ'ಗಳ ಸ್ವಭಾವಕ್ಕನುಗುಣವಾಗಿ ಕೆಲಸಗಳು ವಿಭಜಿತವಾಗಿವೆ" (೧೮.೪೧). ಅದರಂತೆ ಶಮ, ದಮ, ತಪಸ್ಸು , ಶೌಚ ಇತ್ಯಾದಿಗಳು ಮತ್ತು ಆಸ್ತಿಕ್ಯ ಬ್ರಾಹ್ಮಣರ ಕರ್ಮ (೧೮.೪೨). ಶೌರ್ಯ, ತೇಜಸ್ಸು , ಧೃತಿ ಯುದ್ಧಕ್ಕೆ ಹಿಮ್ಮುಖವಾಗದಿರುವುದು, ಈಶ್ವರಭಾವ ಇತ್ಯಾದಿಗಳು ಕ್ಷತ್ರಿಯರ ಕರ್ಮ (೧೮.೪೩). ಕೃಷಿ, ಗೋಪಾಲನೆ, ವಾಣಿಜ್ಯ ಇವು ವೈಶ್ಯನ ಕರ್ಮ. ಶೂದ್ರನ ಸ್ವಭಾವಜ ಕರ್ಮವು ಬೇರೆಯವರ ಸೇವೆ ಮಾಡುವುದು (೧೮.೪೪ : ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥). ಗೀತೆಯು ವರ್ಣಸಂಕರದ ಭೀತಿಯನ್ನು ಮೊದಲನೆಯ ಅಧ್ಯಾಯದಲ್ಲಿ ಪ್ರಕಟಿಸಿದೆ. ಅದಕ್ಕೆ ಮೂಲಭೂತ ಕಾರಣವನ್ನು ಹಲವೆಡೆಗಳಲ್ಲಿ ಸ್ಪಷ್ಟಪಡಿಸಲಾಗಿದೆ ಮತ್ತು ಹದಿನೆಂಟನೆಯ ಕಡೆಯ ಅಧ್ಯಾಯ ಅದಕ್ಕೆ ಒತ್ತುಕೊಟ್ಟು ಬೋಧನೆ ಕರುಣಿಸಿದೆ : "ಅವರವರ ಕರ್ಮಗಳನ್ನು ಪಾಲಿಸುತ್ತಾ ಜನರು ಯಶಸ್ಸು ಸಾಧಿಸುತ್ತಾರೆ" (೧೮.೪೫ : ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ). ಇನ್ನೂ ಅನುಮಾನಗಳಿವೆಯೆ ? ಹಾಗಿದ್ದರೆ ಶ್ರೀ ಭಗವಾನನು ಅವನ್ನೂ ಪರಿಹರಿಸುತ್ತಾನೆ : "ಸ್ವ-ಧರ್ಮದ ಪಾಲನೆಯಲ್ಲಿ ಅಲ್ಪಸ್ವಲ್ಪ ದೋಷಗಳಿದ್ದರೂ ಸರಿಯೆ, ಅದರ ಪಾಲನೆಯು ಶ್ರೇಯಸ್ಕರ. ಆದರೆ, ಪರ-ಧರ್ಮವನ್ನು ಚೆನ್ನಾಗಿ ಪಾಲಿಸುವುದಕ್ಕಿಂತಲೂ ಅದು ಉತ್ತಮ" (೧೮.೪೭ : ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸು ಅನುಷ್ಠಿತಾತ್। ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥). ಒಬ್ಬ ವೈದ್ಯನು ಕಾರು ರಿಪೇರಿ ಮಾಡಬಾರದು, ಕಾರು ರಿಪೇರಿ ಮಾಡಬೇಕಾದವನು ಹೊಲ ಉಳಲು ಹೋಗಬಾರದು, ಏಕೆಂದರೆ ಅವರಿಗೆ ಆ ಬೇರೆ ಕರ್ಮಗಳನ್ನು ಮಾಡಲು ಪರಿಣತಿ ಇಲ್ಲ; ಬೇಕಾದರೆ ಅದನ್ನು ಗಳಿಸಿಕೊಳ್ಳಲು ಸಾಧ್ಯ. ಈ ಅರ್ಥದ ಹಿನ್ನೆಲೆಯಲ್ಲಿ ಸ್ವ-ಧರ್ಮ ಮತ್ತು ಪರ-ಧರ್ಮಗಳನ್ನು ಇಲ್ಲಿ ವ್ಯಾಖ್ಯಾನಿಸಿಲ್ಲ. ಅದು "ಸಹಜ ಕರ್ಮ" (೧೮.೪೮), ಸ್ವಭಾವದ ನಿಯತ ಕರ್ಮ, ವರ್ಣವಿಭಜನೆಯು ವಿಧಿಸಿರುವ ಕರ್ಮ. ಈಗ ನೋಡಿ, ಸ್ವಭಾವ ಧರ್ಮವು ಅನುಲ್ಲಂಘನೀಯ ಎಂದಾದರೆ "ಗುಣಕರ್ಮ ವಿಭಾಗಶಃ" (೪.೧೩) ಎಂಬುದಕ್ಕೆ ಅರ್ಥವೇನಿದೆ ? ಆದ್ದರಿಂದಲೇ ತತ್ತ್ವಶಾಸ್ತ್ರ ಮತ್ತು ಸಮಾಜ ಶಾಸ್ತ್ರಗಳ ದೃಷ್ಟಿಯಿಂದ ಗೀತೆಯ ಮೊದಲನೆಯ ಅಧ್ಯಾಯವು ಮೂರ್ತವಾದ್ದು, ಪ್ರಸ್ತುತವಾದ್ದು ಮತ್ತು ಶ್ರೇಷ್ಠವಾದ್ದು. ಇತರ ಅಧ್ಯಾಯಗಳು ಆ ಪ್ರಶ್ನೆಗಳನ್ನು ತೇಲಿಸಿಬಿಡುತ್ತವೆ. ಹದಿನೆಂಟನೆಯ ಅಧ್ಯಾಯದ ಆರಂಭವನ್ನು ನೋಡಿ. ಶ್ರೀ ಭಗವಾನ್ ಹೇಳುತ್ತಾನೆ (೧೮.೨) : "ಫಲಾಪೇಕ್ಷೆಯಿಂದ ಮಾಡುವ ಕೆಲಸಗಳನ್ನು ಬಿಟ್ಟುಬಿಡುವುದು ಸಂನ್ಯಾಸವೆಂದು ಪ್ರಾಜ್ಞರು ತಿಳಿದಿದ್ದಾರೆ; ಆದರೆ ಎಲ್ಲ ಕರ್ಮಗಳ ಫಲವನ್ನೂ ತ್ಯಾಗಮಾಡುವುದು ಸನ್ಯಾಸವೆಂದು ಪರಿಣತರು ತಿಳಿಯುತ್ತಾರೆ." ಅದರ ಮುಂದಿನ ಶ್ಲೋಕ ಹೀಗಿದೆ : ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ । ಯಜ್ಞದಾನತಪಃ ಕರ್ಮ ನ

ತ್ಯಾಜ್ಯಮಿತಿ ಚಾಪರೇ ॥ (ಕೆಲವು ಪ್ರಾಜ್ಞರು ಹೇಳುತ್ತಾರೆ, ದೋಷಯುತ ಕರ್ಮಗಳನ್ನು ಬಿಟ್ಟುಬಿಡಬೇಕು ಎಂದು; ಬೇರೆ ಕೆಲವು ಪ್ರಾಜ್ಞರು ಯಜ್ಞ, ದಾನ, ತಪಸ್ಸು ಎಂಬ ಕರ್ಮಗಳನ್ನು ಬಿಡಬಾರದು ಎಂದು ಹೇಳುತ್ತಾರೆ). ಇಲ್ಲಿ "ಏಕೇ" ಯಾರು, ಮತ್ತು "ಅಪರೇ" ಯಾರು ? ಯಜ್ಞ ಮತ್ತು ತಪಸ್ಸು ದೋಷಯುತ ಕರ್ಮಗಳೋ ಅಲ್ಲವೋ, ಅದು ಹೇಗೇ ಇರಲಿ; ಒಂದು ಪಂಥದವರು ಅವನ್ನು ದೋಷಯುಕ್ತ ಎಂದು ಪರಿಗಣಿಸಿದ್ದರು ಎಂಬುದನ್ನು ಗೀತೆ ದಾಖಲಿಸಿದೆ. ಈ "ಏಕೇ" (ಕೆಲವರು) ಲೋಕಾಯತರು ಮತ್ತು ಬೌದ್ಧರಲ್ಲದೆ ಬೇರೆ ಇನ್ನಾರಿರಲು ಶಕ್ಯ! ಬೌದ್ಧರು ಮತ್ತು ಲೋಕಾಯತರು ಭಗವದ್ಗೀತೆಗೆ ಪೂರ್ವಪಕ್ಷ; ಅದು ಮೊದಲನೆಯ ಅಧ್ಯಾಯದಲ್ಲಿ ಪ್ರಾತಿನಿಧ್ಯ ಪಡೆದಿದೆ. ಅದಕ್ಕೆ ಸಮಾಧಾನ ಇನ್ನಿತರ ಅಧ್ಯಾಯಗಳದ್ದು, ಅದು ಸಿದ್ಧಾಂತ. ಗೀತೆಯುದ್ದಕ್ಕೂ ಸಿದ್ಧಾಂತಿಯು ಹೇಳುತ್ತಾನೆ, "ಶತ್ರುವನ್ನು ಜಯಿಸು" (೩.೪೩), "ಏಳು, ಎದ್ದೇಳು, ವೀರ" (೪.೪೨), ಇತ್ಯಾದಿ. ಆ ತಥಾಕಥಿತ ಶತ್ರುವು ಯಾರ ಸಂಪತ್ತನ್ನೂ ದೋಚಲು ಹೋಗಿರಲಿಲ್ಲ; ಬದಲಾಗಿ ವರ್ಣ ವಿಭಜನೆಯು ಅನಿಷ್ಟವೆಂದು ಸಾರಿಹೇಳಿದ್ದು ಆ ಶತ್ರು. ಅಂತೆಯೇ, ವಿಶಿಷ್ಟ ಫಲ ಪ್ರಾಪ್ತಿಗಾಗಿ ಯಜ್ಞಾದಿಗಳ ಆಚರಣೆಯನ್ನೂ ಆ ಶತ್ರುವು ಅವಹೇಳನ ಮಾಡಿದ್ದುದುಂಟು.

ಯಾವುದನ್ನು ಗೀತೆಯು "ಆಸುರೀ ಪ್ರವೃತ್ತಿ" ಎಂದು ಕರೆದಿದೆಯೋ ಅದರ ಛಾಯೆಯು ವಾಲ್ಮೀಕಿ ರಾಮಾಯಣದಲ್ಲೂ ಇದೆ ಮತ್ತು ಅಲ್ಲಿಯೂ ಅದನ್ನು ತುಚ್ಛವಾಗಿ ಕಂಡು ಟೀಕಿಸಲಾಗಿದೆ. ಪ್ರಸ್ತುತ ಲೇಖಕನು ಅದನ್ನು "ಬಹುಮುಖೀ ರಾಮಾಯಣ" ಎನ್ನುವ ಲೇಖನದಲ್ಲಿ (ಹೊಸತು, ಜನವರಿ ೨೦೧೭, ಪು. ೮೭) ಪ್ರಸ್ತಾಪಿಸಿದ್ದುದನ್ನು ನೆನೆಯಬಹುದು. ಅಲ್ಲಿಯೂ ನಾಲ್ಕು ವರ್ಣಗಳ ಅಭೇದ್ಯ ಕೋಟೆಯನ್ನು ಭಂಜಿಸಕೂಡದೆಂಬ ಭಾವವಿದೆ. ಬಾಲಕಾಂಡದ ಮೊದಲನೆಯ ಸರ್ಗದಲ್ಲಿ ರಾಮನ ಗುಣಗಾನದಲ್ಲಿ ಹೀಗೆ ಹೇಳಲಾಗಿದೆ: "ರಾಘವನು ನೂರಾರು ಗುಣಗಳ ರಾಜವಂಶಗಳನ್ನು ಸ್ಥಾಪಿಸುತ್ತಾನೆ. ಅಲ್ಲದೆ, ತಮ್ಮ ತಮ್ಮ ಧರ್ಮಗಳಲ್ಲಿ ತಮ್ಮನ್ನು ನಿಯೋಜಿಸಿ ಕೊಂಡಿರುವಂತಹ ನಾಲ್ಕು ವರ್ಣಗಳನ್ನೂ ಈ ಲೋಕದಲ್ಲಿ ಸ್ಥಾಪಿಸುತ್ತಾನೆ" (೧.೯೬ : ರಾಜವಂಶಾನ್ ಶತಗುಣಾನ್ ಸ್ಥಾಪಯಿಷ್ಯತಿ ರಾಘವಃ। ಚಾತುರ್ವರ್ಣ್ಯಂ ಚ ಲೋಕೇऽಸ್ಮಿನ್ ಸ್ವೇ ಸ್ವೇ ಧರ್ಮೇ ನಿಯೋಕ್ಷ್ಯತಿ ॥), ಅಂದರೆ, ಆಯಾ ವರ್ಣದವರು ಅವರಿಗೆ ಹುಟ್ಟಿನಿಂದಲೇ ನಿಗದಿಗೊಳಿಸಲಾದ ಕೆಲಸ ಗಳಲ್ಲಿ ಉಳಿಯಬೇಕು, ಬೇರೆಡೆಗೆ ಸರಿಯಬಾರದು. ಅಂದಿಗೂ, ಇಂದಿಗೂ, ನಮ್ಮ ದೇಶದಲ್ಲಿ ವರ್ಣ ವಿಭಜನೆಯ ಪ್ರಶ್ನೆಯು ಸದಾ ಚರ್ಚಾ ವಿಷಯವಾದ್ದು. ಗೀತೆಯ ಮೊದಲ ಅಧ್ಯಾಯದಲ್ಲಿ ಈ ಘನೀಭೂತವಾದ ವಿಭಜನಾ ಸೂತ್ರಕ್ಕೆ ಧಕ್ಕೆ ಉಂಟಾಗುವ ಸಾಧ್ಯತೆ ಇದೆಯೆಂಬ ಆತಂಕವನ್ನು ವ್ಯಕ್ತಪಡಿಸಲಾಗಿದೆ. ಅದನ್ನು ತಡೆಗಟ್ಟಲು ವರ್ಣ ವಿಭಜನೆಯನ್ನು ಟೀಕಿಸುವವರನ್ನು ಆಸುರೀ ಪ್ರವೃತ್ತಿಯವರೆಂದು ಜರಿಯುವುದೂ ಒಂದು ಅಸ್ತ್ರ. ಗೀತೆಯ ಪ್ರತಿಪಾದನೆಯಲ್ಲಿನ ಅನೇಕ ವಿಷಯಗಳು ಇಂದಿನ ಓದುಗರಿಗೆ ಸಹ ಪ್ರಸ್ತುತವೇ ಆಗಿವೆ. ಆ ಹಿನ್ನೆಲೆಯಲ್ಲಿ ಗೀತೆಯನ್ನು ಸಮಕಾಲೀನಗೊಳಿಸಿ ಕೊಳ್ಳುವ ಅವಶ್ಯಕತೆ ಇದೆ.

ಸಿದ್ಧಾಂತಿಯು ಎತ್ತದಿರುವ ಪ್ರಶ್ನೆಗಳನ್ನು ನಾವಿಂದು ಕೇಳಿಕೊಳ್ಳಬಹುದು : (ಅ) ಆತ್ಮ – ಈಶ್ವರ – ಪುನರ್ಜನ್ಮ – ಮೋಕ್ಷ ಇತ್ಯಾದಿಗಳು ಹುಸಿನಂಬಿಕೆಯೆಂದು ಭಾವಿಸುವವರಿಗೆ ಗೀತೆಯು ಆಪ್ತವಾಗುವುದು ಹೇಗೆ ? (ಆ) ಭೌತವಾದಿ (ಆಸುರೀ ಮಾರ್ಗಿ) ಹಾಗೂ ಶೂದ್ರ–ಸ್ತ್ರೀ ಸಂವೇದನೆಗಳಿಗೆ ಗೀತೆಯು ಆಪ್ತವಾಗುವುದು ಹೇಗೆ ? (ಇ) 'ಆಸುರೀ' ಎಂದು ದೂಷಿಸಲ್ಪಟ್ಟಿರುವವರು ದೂಷಣೆ ಮಾಡಿರುವವರಿಗಿಂತಲೂ ನಿಜಕ್ಕೂ ಹೆಚ್ಚು ಪಾತಕಿಗಳೆ ? ಅವರದೆಂದು ಹೇಳಲಾದ ವೈಭವ ಮತ್ತು ಭೋಗಗಳನ್ನು ಆದರದಿಂದ ಸವಿಯುತ್ತಿದ್ದವರು ಮತ್ತು ಸವಿಯುತ್ತಿರುವವರು ನಿಜಕ್ಕೂ ಭಾವನಾವಾದಿಗಳು, ದೇವೀಮಾರ್ಗಿಗಳು ಮತ್ತು ಶ್ರೀಮಂತ ವರ್ಗವಲ್ಲವೆ ? (ಈ) ಅಂದವಾಗಿ ರಚಿತವಾಗಿದ್ದು ಓದಿಗೆ ಆಕರ್ಷಣೀಯವಾಗಿರುವ ಗೀತೆಯು ಉಚ್ಚವರ್ಗಕ್ಕೆ ಆಪ್ಯಾಯಮಾನವಾಗುವುದೇಕೆ ? (ಉ) ಚಾರಿತ್ರಿಕ ನೆಲೆಯಲ್ಲಿ ಅದನ್ನು ಓದಿಕೊಂಡರೆ ಗೀತೆಯು ಹೆಚ್ಚು ಸಾರ್ಥಕವಲ್ಲವೆ ? (ಊ) ವರ್ಣವಿಭಜನೆಯನ್ನು ಸಮರ್ಥಿಸುವ ಗೀತೆಯು ವರ್ಗಭೇದವನ್ನು ಸಹ ಸಮರ್ಥಿಸುತ್ತದೆ, ಅಲ್ಲವೆ ?

ಇಂತಹ ಪ್ರಶ್ನೆಗಳಿಗೆಲ್ಲಾ ಗೀತೆಯಲ್ಲಿ ನೇರವಾಗಿ ಉತ್ತರ ದೊರಕದಿರಬಹುದು, ಆದರೆ ಗೀತೆಯ ಎಲ್ಲ ಅಧ್ಯಾಯಗಳನ್ನೂ ವಸ್ತುನಿಷ್ಠವಾಗಿ, ಚಾರಿತ್ರಿಕ ಹಿನ್ನೆಲೆಯನ್ನು ಅವಗಣಿಸದೆ, ಅವಲೋಕಿಸಿದರೆ ಉತ್ತರ ರೂಪದ ಸೂಚನೆಗಳಂತೂ ವೇದ್ಯವಾಗುತ್ತವೆ. ಸ್ವ–ಧರ್ಮವನ್ನು ವೈಭವೀಕರಿಸುವುದೂ ಒಂದೇ, ಒಂದು ಅಗಾಧ ಜನಸ್ತೋಮವನ್ನು ಸದಾ ಇತರ ಉಚ್ಚ ವರ್ಗದವರ ಸೇವೆ ಮಾಡಿಕೊಂಡೇ ಬದುಕಬೇಕೆಂದು ಹೇಳುವುದೂ ಒಂದೇ. ಇಂತಹ ಸ್ವ–ಧರ್ಮದ ಜಡ್ಡುತನಕ್ಕೆ ಹೊರತಾದ ಕಾಣ್ಕೆಯನ್ನು ಗೀತೆಯ ಹೊರಗಿನ, ಆ ಗ್ರಂಥದ ಸಮಕಾಲೀನ, ಚರಿತ್ರೆಯಿಂದ ತಿಳಿಯಬೇಕಾಗುತ್ತದೆ. ಜನಸಮುದಾಯದ ದೃಷ್ಟಿಯಿಂದ ನೋಡಿದರೆ ನಮ್ಮ ತತ್ತ್ವಶಾಸ್ತ್ರ ಪರಂಪರೆಯಲ್ಲಿ ಜೊಳ್ಳು ಮತ್ತು ಕಾಳು ಬೆರಕೆಗೊಂಡಿವೆ. ಜೊಳ್ಳನ್ನು ನಿರಾಕರಿಸಿ ತ್ಯಜಿಸಬೇಕು ಮತ್ತು ಕಾಳನ್ನು ಅಂಗೀಕರಿಸಿ ಸೇವಿಸಬೇಕು. ಅದು ಗೀತೆಗೂ ಅನ್ವಯಿಸುವ ಮಾತು.

ಎರಡನೆಯ ಅಧ್ಯಾಯದಲ್ಲಿ ಹಠಾತ್ತನೆ ಸ್ಥಿತಪ್ರಜ್ಞನ ಲಕ್ಷಣಗಳ ಪ್ರಸ್ತಾಪ ಬಂದುಬಿಟ್ಟಿದೆ. ಹತಾಶನಾಗಿದ್ದ ಅರ್ಜುನನಿಗೆ ಭಗವಾನ್ ಹೇಳುತ್ತಾನೆ: ಸುಖದುಃಖ ಗಳನ್ನು ಸಮಾನವಾಗಿ ಸ್ವೀಕರಿಸುವ ಚಿತ್ತವನ್ನು ಆವಾಹಿಸಿಕೊಂಡು ಯುದ್ಧದಲ್ಲಿ ತೊಡಗು, ಎಂದು (೨.೩೮). ಗೀತೆಯ ಸಂದೇಶ ಭಾಗವು ಅಲ್ಲಿಂದ ಮುಂದಕ್ಕೆ ಆರಂಭವಾಗುತ್ತದೆ. ಅವನೀಗ ಅವನ ಸ್ವ–ಧರ್ಮವಾದ ಯುದ್ಧದ ಕರ್ಮದಲ್ಲಿ ಭಾಗಿಯಾಗಲಿದ್ದಾನೆ. ಕರ್ಮಯೋಗಿಯಾಗಿ ಅವನು ಮತ್ತು ಅವನಂತೆ ಇತರರು, ಕರ್ಮವನ್ನು ಮಾಡುತ್ತಲೇ ಕರ್ಮದ ಬಂಧನದಿಂದ ಮುಕ್ತರಾಗುತ್ತಾರೆಂಬ ಮಾತಿದೆ (೨.೩೯). ಅಲ್ಲಿಂದ ಮುಂದುವರಿದು ಅರ್ಜುನನು ಸ್ಥಿತಪ್ರಜ್ಞನ ಲಕ್ಷಣಗಳನ್ನು ಕೇಳುವವರೆಗಿನ ಭಾಗವನ್ನು (೨.೪೦ರಿಂದ ೨.೫೩) ತರ್ಕಬದ್ಧವಾಗಿ ಅರ್ಥೈಸಿಕೊಳ್ಳಲು ಪ್ರಸ್ತುತ ಲೇಖಕನಿಗೆ ಇದುವರೆವಿಗೂ ಸಾಧ್ಯವಾಗಿಲ್ಲ.

"ನಿನ್ನ ನಿಶ್ಚಲ ಮನಸ್ಸಿನಿಂದ ಅಚಲವಾಗಿ ಸಮಾಧಿಸ್ಥನಾದಾಗ ನಿನಗೆ ಯೋಗದ ಪ್ರಾಪ್ತಿ ಯಾಗುತ್ತದೆ" (೨.೫೩) ಎಂದು ಭಗವಾನನು ಉಪದೇಶಿಸಿದಾಗ ಮುಂಬರುವ ಪ್ರಶ್ನೆಯು ಸ್ಥಿತಪ್ರಜ್ಞನ ಲಕ್ಷಣಗಳನ್ನು ಕುರಿತಾದದ್ದು. ಹಿಂದೆಯೇ ಹೇಳಿದ್ದಂತೆ ಈ ಭಾಗವು ಗೀತೆಯ ಒಂದು ಪ್ರಶಸ್ತಭಾಗವೇ ಸರಿ. ಅದನ್ನು ಪರಿಚಯಿಸಿಕೊಳ್ಳುವ ಮುನ್ನ ಒಂದಂಶವನ್ನು ಗಮನಿಸಬೇಕು: ಗೀತೆಯು ಆರಂಭವಾದದ್ದು ಸ್ಥಿರವೆನ್ನಲಾದ ಸಾಮೂಹಿಕ ನೆಲೆಯಲ್ಲಿ ಪಲ್ಲಟಗೊಳ್ಳು ತ್ತಿರುವ ಅಂಶಗಳು ಉಂಟುಮಾಡುವ ಆತಂಕದಿಂದ; ಅಂದರೆ, ವರ್ಣಸಂಕರ, ಇತ್ಯಾದಿಗಳ ಸಂಬಂಧವಾಗಿ ಸಾಮೂಹಿಕ ನೆಲೆಯಿಂದ ವೈಯ್ಯಕ್ತಿಕ ನೆಲೆಯತ್ತ ಸಂಕ್ರಮಿಸುವುದು ಸ್ಥಿತಪ್ರಜ್ಞನ ಲಕ್ಷಣಗಳನ್ನು ವಿಸ್ತರಿಸಿ ಹೇಳುವಾಗ. ವರ್ಣಸಂಕರವನ್ನು ಕೇಡೆಂದು ಭಾವಿಸಲಾಗಿದೆ, ಆದರೆ ಅದೇಕೆ "ಕೇಡು" ಎಂಬ ಪ್ರಶ್ನೆಯನ್ನು ಎತ್ತಲಾಗಿಲ್ಲ. ಸಹಜವಾಗಿಯೇ ಅದಕ್ಕೆ ಉತ್ತರ ನೀಡುವ ಪ್ರಸಂಗವೂ ಇಲ್ಲ.

ವರ್ಣ ವಿಭಜನೆಯನ್ನು ವಿರೋಧಿಸುವವರು ಲೋಕಾಯತರು, ಬುದ್ಧ, ಇತ್ಯಾದಿ; ಆ ವಿರೋಧವು ಸಮುದಾಯದಲ್ಲಿ ಸಮಾನತೆಗೆ ಆಗ್ರಹಿಸಲೋಸುಗ. ಸ್ಥಿತಪ್ರಜ್ಞನ ಲಕ್ಷಣಗಳಲ್ಲಿ ಸಮುದಾಯದ ಬಗೆಗಿನ ಆಸಕ್ತಿ ಏನೂ ಇಲ್ಲ; ಅವನು ಎಲ್ಲವನ್ನೂ ವೈಯ್ಯಕ್ತಿಕ ನೆಲೆಯಲ್ಲಿಯೇ ಸಾಧಿಸಿಕೊಳ್ಳುತ್ತಾನೆ. ಕಡೇ ಪಕ್ಷ, ಸಾಮೂಹಿಕ ನೆಲೆಯಲ್ಲಿನ ದ್ವಂದ್ವಗಳಿಗೆ ಅವನ ಪ್ರತಿಕ್ರಿಯೆ ಏನೆಂಬುದನ್ನಾದರೂ ಗೀತೆ ಹೇಳಬಹುದಿತ್ತು. ಮನಸ್ಸನ್ನು ಮತ್ತು ತನ್ಮೂಲಕ ವ್ಯಕ್ತಿತ್ವವನ್ನು ಸಮತೋಲನ ದಲ್ಲಿರಿಸಿಕೊಳ್ಳುವುದು, ಯಾವುದರಿಂದಲೂ ವಿಚಲಿತ ನಾಗದಿರುವುದು, ಶಾಂತಸ್ವಭಾವವನ್ನು ಮೈದುಂಬಿ ಕೊಳ್ಳುವುದು, ಮುಂತಾಗಿ ಅವನ ಲಕ್ಷಣಗಳು ನಿಜಕ್ಕೂ ಅನುಕರಣೀಯ. ತನ್ನಲ್ಲಿ ತಾನೇ ಸಂತುಷ್ಟನಾಗಿರುವುದು ಅದ್ಭುತವಾದ ಗುಣವೇ ಸರಿ. ತನ್ನೆಲ್ಲ ಅಂಗಗಳನ್ನೂ ಆಮೆಯು ಒಳ ತೆಗೆದುಕೊಳ್ಳುವಂತೆ ಇವನು ಇಂದ್ರಿಯಗಳನ್ನು ಅವುಗಳು ಅರಸುವ ವಿಷಯಗಳಿಂದ ಪೂರ್ತಿಯಾಗಿ ಹಿಂತೆಗೆದುಕೊಳ್ಳುತ್ತಾನೆ. ವಿಷಯಗಳ ಆಕರ್ಷಣೆಯೇ ಇಲ್ಲದಾಗ ಬೇಕು–ಬೇಡಗಳ ಪ್ರಶ್ನೆ ಉದ್ಭವಿಸುವುದಿಲ್ಲ. ಬುದ್ಧನ ವಿಚಾರಗಳಲ್ಲಿ ಕೆಲವನ್ನು ಸ್ಥಿತಪ್ರಜ್ಞನ ಲಕ್ಷಣಗಳಲ್ಲಿ ಕಾಣಬಹುದು. ಆಶಯಗಳ ಮಹಾಪೂರವು ಅನೇಕ ಬೇರೆ ಪರಿಣಾಮಗಳಿಗೆ ಕಾರಣ; ಕಾಮ, ಕ್ರೋಧ, ಭ್ರಾಂತಿ ಮತ್ತು ಕಡೆಗೆ ವಿವೇಕಶೂನ್ಯತೆ. ಒಟ್ಟಿನಲ್ಲಿ, ಜನಸಾಮಾನ್ಯರಿಗೆ ಯಾವುದು ಪ್ರಲೋಭನೆಯೋ ಅದು ಇವನಿಗೆ ಯಾವ ಭಾವನೆಯನ್ನೂ ಮೂಡಿಸುವುದಿಲ್ಲ.

ಅಂತಹ ಅಸಾಧಾರಣ ಮನೋಭಾವವನ್ನು ಯಾರು ತಾನೇ ಸ್ವಾಗತಿಸುವುದಿಲ್ಲ ? ಇದೊಂದು

ರೀತಿಯ ವೈಭವೀಕರಣ; ವಾಸ್ತವ ಜಗತ್ತಿನಿಂದ ನಿರ್ಗಮಿಸಿ ಅನನ್ಯ ಸ್ವಭಾವವು ಮೂರ್ತಿವೆತ್ತಿದಂತೆ ಬಾಳುವುದು; ಅನಿವಾರ್ಯ ಅಗತ್ಯಗಳ ಪೂರೈಕೆಯ ಬದಲು ಅಗತ್ಯಗಳೇ ಇಲ್ಲದಂತಹ ಕಲ್ಪನೆಗೆ ಜಾರುವುದು. "ಹಾಗಿದ್ದರೆ ಎಷ್ಟು ಸೊಗಸು" ಎಂಬ ಭಾವವು ಓದುಗರ ಮನಸ್ಸನ್ನು ತಟ್ಟುತ್ತದೆ.

ಆದರೆ ಸಮುದಾಯ ದೃಷ್ಟಿಯಿಂದ ಇದು ಅಭಾವ ವೈರಾಗ್ಯದಂತೆ ತೋರುತ್ತದೆ. ೧೬ನೆಯ ಶತಮಾನದ ಒಬ್ಬ ಆಂಗ್ಲಕವಿ ಒಂದು ಕವನ ಬರೆದಿದ್ದಾನೆ. ಅವನೊಬ್ಬ "ಲಾರ್ಡ್". ಅವನ ಕವನವು ಸುಖಿಯೊಬ್ಬನ ಲಕ್ಷಣಗಳನ್ನು ಹೇಳುತ್ತದೆ. ಸುಖದಲ್ಲಿ ನಲಿಯುವ ಆ ವ್ಯಕ್ತಿಗೆ ಭೂಮಿ – ಕಾಣಿ ಏನೂ ಇಲ್ಲ, ಆದರೆ ಅವನ ನಿಯಂತ್ರಕ ಅವನೇ ಆಗಿರುತ್ತಾನೆ. ನೂರಾರು ಎಕರೆ ಜಮೀನಿನ ಅಧಿಪತಿಯಾದ ಲಾರ್ಡ್ ಹೀಗೆ ಹೇಳುತ್ತಾನೆಂದರೆ ಏನೋ ಆಭಾಸವಿದ್ದಂತೆ ತೋರುತ್ತದೆ. ಅವನ ಅಧೀನದಲ್ಲಿರುವವರಿಂದ ಅವನು ನಿರೀಕ್ಷಿಸುವ ಗುಣ ಚಕಾರವೆತ್ತದೆ ಇರುವುದೇ ಇರಬೇಕು. ವ್ಯಂಗ್ಯವೆಂದರೆ ಈ ಲಾರ್ಡ್ ತನ್ನ ಮುಂದಿನ ದಿನಗಳಲ್ಲಿ ಕಾರಾಗೃಹಕ್ಕೆ ಅಟ್ಟಲ್ಪಟ್ಟ; ಏಕೆಂದರೆ, ಯಾರದೋ ಸಂಪತ್ತನ್ನು ಅವನು ಎಗರಿಸಿದ್ದ! "ಬದಲಾಗು ವುದಾದರೆ ನೀನು ಬದಲಾಗು, ಸಮುದಾಯದ ಗೊಡವೆ ನಿನಗೇಕೆ?" ಎಂಬ ಸೂಚನೆ ಸ್ಥಿತಪ್ರಜ್ಞನ ಲಕ್ಷಣ ಗಳಲ್ಲಿದೆ. "ಲೋಕದ ಡೊಂಕ ನೀವೇಕೆ ತಿದ್ದುವಿರಿ?" ಎಂದು ನಮ್ಮ ದಾಸವರ್ಯರು ಕೇಳಿದಂತೆ ಇದು. "ನಿಮ್ಮ ನಿಮ್ಮ ಡೊಂಕು ತಿದ್ದಿಕೊಂಡರೆ ಎಲ್ಲಾ ರಂಜನೀಯವಾಗಿರುತ್ತದೆ" ಎಂಬುದು ದಾರ್ಶನಿಕ ತೀರ್ಮಾನ. ಆಗ ಹೇಗೂ ವರ್ಣ ವಿಭಜನೆ ಮುಂತಾದ ಸಾಮಾಜಿಕ ದೋಷಗಳ ಹೊರೆ ಇರುವುದಿಲ್ಲವಲ್ಲ! ವ್ಯಕ್ತಿಯ ಮಟ್ಟದಲ್ಲಿ, ಸಮುದಾಯದ ಮಟ್ಟದಲ್ಲಿ ಅಲ್ಲ.

ಈ ಸಂದರ್ಭದಲ್ಲಿ ಗೀತೆಯ ಇನ್ನೊಂದು ವಿಚಾರವನ್ನು ಸ್ಥಿತಪ್ರಜ್ಞನ ಲಕ್ಷಣಗಳ ಜೊತೆಗಿಟ್ಟು ತೂಗಿ ನೋಡುವುದು ತಪ್ಪಾಗಲಾರದು. ಗೀತೆಯ ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗದ ನಿರೂಪಣೆ ಇದೆ. ಅದನ್ನು ಮುಂದೆ ನೋಡೋಣ. ಪ್ರಸ್ತುತ, ಅಲ್ಲಿ ಸೂಚಿಸಲಾಗಿರುವ "ಲೋಕಸಂಗ್ರಹ" ಎಂಬ ಪ್ರತಿಪಾದನೆಯನ್ನು ಮಾತ್ರ ಗ್ರಹಿಸೋಣ. "ಲೋಕದ ಜನ ಯಾರಿಂದಲೋ ತಿಳಿದು ಮತ್ತು ಪಡೆದು, ಅದನ್ನು ಸಂಗ್ರಹಿಸಿಕೊಂಡು ಅದರಂತೆ ವರ್ತನೆಯಲ್ಲಿ ತೊಡಗುವುದು" ಲೋಕಸಂಗ್ರಹ ಎನಿಸಿಕೊಳ್ಳುತ್ತದೆ. ಒಂದು ದೃಷ್ಟಾಂತದ ಸಹಾಯದಿಂದ ಇದನ್ನು ಸ್ಪಷ್ಟಪಡಿಸಿಕೊಳ್ಳೋಣ. ಸ್ವಾಮಿ ಕುವಲಯಾನಂದರು ಅವರ ಗುರು ಮಾಧವದಾಸರ ಬಗ್ಗೆ ಸಂಸ್ಕೃತದಲ್ಲಿ ಒಂದು ಕವನ ರಚಿಸಿದ್ದರು. ಮಾಧವದಾಸರು ನಿರ್ಮೋಹಿ ಮತ್ತು ಮುಕ್ತ; ಅಂತಹ ಬ್ರಹ್ಮಜ್ಞಾನ ಪಡೆದಿದ್ದರೆಂದು ಕವನದಲ್ಲಿ ಚಿತ್ರಿಸಲಾಗಿದೆ. ಅಷ್ಟು ಎತ್ತರಕ್ಕೆ ಏರಿದ್ದರೂ ಆ ವ್ಯಕ್ತಿ ದೈನಂದಿನ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುತ್ತಿದ್ದರು. ಏಕೆಂದರೆ, ಇವರನ್ನು ಕಂಡು ಇತರರೂ ಅವರನ್ನು ಅನುಸರಿಸ ಬೇಕು, ಎಂಬ ಉದ್ದೇಶದಿಂದ. ಸ್ವತಃ ಅವರಿಗೆ ಏನೂ ಅಗತ್ಯವಿಲ್ಲ, ಯಾವ ಕರ್ಮದ ಒತ್ತಾಯವೂ ಇಲ್ಲ;




ಇತರರಿಗೆ ಮಾದರಿಯಾಗುವುದೊಂದೇ ಉದ್ದೇಶದಿಂದ ಅವರು ಇನ್ನೂ ಜಪ, ತಪ, ಯಜನ, ಇತ್ಯಾದಿಗಳಲ್ಲಿ ಭಾಗಿಯಾಗುತ್ತಿದ್ದರು, ಎಂಬುದು ಕವಿಯ ನಿರೂಪಣೆ. ಗೀತೆಯು ಕರ್ಮಯೋಗಿಯಿಂದ ಇಂತಹ ವರ್ತನೆಯನ್ನು ಅಪೇಕ್ಷಿಸುತ್ತದೆ. "ಜನಕನಂಥವರು ಕರ್ಮದಿಂದಲೇ ಶ್ರವಣ, ಮನನ, ನಿದಿಧ್ಯಾಸಗಳಿಂದ ದೊರೆಯುವ ಫಲಗಳನ್ನು ಪಡೆದುಕೊಂಡಿದ್ದರು; ಆದರೆ ಇತರರು ಕರ್ಮದಲ್ಲಿ ತೊಡಗಲು ನಿರಾಸಕ್ತ ರಾಗದಿರಲೆಂದು ಸ್ವತಃ ಅವರು ಕರ್ಮಗಳಲ್ಲಿ (ಅಂದರೆ ಯಜ್ಞಾದಿ ಕ್ರಿಯೆಗಳಲ್ಲಿ) ತೊಡಗುತ್ತಿದ್ದರು. ಹಾಗೆ ನೀನೂ ಮಾಡಬೇಕು" ಎಂಬುದು ಅರ್ಜುನನಿಗೆ, ತನ್ಮೂಲಕ ಮಾನವಕೋಟಿಗೆ, ಗೀತೆಯ ಉಪದೇಶ. (೩.೨೦: ಕರ್ಮಣಾ ಏವ ಸಂಸಿದ್ಧಿಂ ಆಸ್ಥಿತಾ ಜನಕಾದಯಃ। ಲೋಕ ಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ॥).

ಏನಿದರ ವಿಶೇಷ? ಈ ಸಂಬಂಧದಲ್ಲಿ ನಾವು ಪರಿಶೀಲಿಸುವುದೇನಿದೆ? ಯಥಾಸ್ಥಿತಿವಾದ ಎನುತ್ತೇವಲ್ಲ, ಅದಕ್ಕೆ ಈ "ಲೋಕಸಂಗ್ರಹ" ಎಂಬುದು ಮಹತ್ವದ ಅಡಿಪಾಯ. ಸಾಂಪ್ರದಾಯಿಕ ಆಚರಣೆಗಳ, ಚಿಂತನೆಯ ಮತ್ತು ಕ್ರಿಯೆಗಳ ಪರಿಧಿಯಿಂದ ಹೊರಬರದಂತೆ ಜನರನ್ನು ಕಟ್ಟಿಹಾಕಲು ಇದು ಬಹಳ ಉಪಯುಕ್ತವಾದ ಸಾಧನ. ಸ್ಥಿತಪ್ರಜ್ಞನು ಕೂಡ "ಲೋಕಸಂಗ್ರಹ"ವನ್ನು ಕರ್ತವ್ಯವೆಂಬಂತೆ ಪರಿಪಾಲಿಸಿ ಕಬ್ಬಿಣದ ಕೊಂಡಿಯು ಸಡಿಲವಾಗದಂತೆ ಕಾಪಾಡಿಬಿಡುತ್ತಾನೆ! ಸಾಮಾಜಿಕ ಮೌಲ್ಯಗಳು ಮತ್ತು ಸಂರಚನೆಗಳು ಸಹ ಜಡ್ಡುಗಟ್ಟಿ ನೆಲೆಯೂರುತ್ತವೆ. ಎರಡನೆಯದಾಗಿ, ಅದಾರೋ "ಲೋಕಸಂಗ್ರಹ"ಕ್ಕೆಂದು ಕೆಲವು ಆಚರಣೆ ಮತ್ತು ವಿಧಿಗಳನ್ನು ಅನೂಚಾನವಾಗಿ ಮುಂದುವರಿ ಸುತ್ತಾರಲ್ಲ, ಅವರು ಸಮಾಜಕ್ಕೆ ದಾರಿದೀಪಗಳೆಂಬ ಸ್ಥಾನವನ್ನು ಅಲಂಕರಿಸುತ್ತಾರೆ. ನಮ್ಮಲ್ಲಿ ಅಂತಹ ಅತಿಮಾನವರು ಎಷ್ಟೊಂದು ಮಂದಿ ಇದ್ದಾರೆ! ಪ್ರತಿಷ್ಠಿತ ಸ್ಥಾನವನ್ನು ಪಡೆದವರು ಸ್ವತಂತ್ರ ಮುಕ್ತ ಚಿಂತನೆ ಮತ್ತು ಕ್ರಿಯೆಗೆ ಇಂಬು ನೀಡುವುದಿಲ್ಲ. ಸಮಾಜದ ಶ್ರೇಣೀಕರಣವನ್ನು ಇಲ್ಲವಾಗಿಸಬೇಕೆಂದು ಲೋಕಾಯತರಾಗಲಿ, ಬುದ್ಧನಾಗಲಿ ಪ್ರಯತ್ನಶೀಲ ರಾದರೆ ಲೋಕಸಂಗ್ರಹದ ಕಟ್ಟುಪಾಡು ಅವರ ಹಾದಿಯನ್ನು ದುರ್ಗಮ ಗೊಳಿಸುತ್ತದೆ. ಗೀತೆಯ ಮೊದಲ ಅಧ್ಯಾಯದಲ್ಲಿ ಸ್ಥಿರವಾದ ಸಾಮಾಜಿಕ ಸಂರಚನೆಗೆ ಧಕ್ಕೆಯುಂಟಾಗುತ್ತದೆ ಎಂಬ ಭೀತಿಯ ಚಿತ್ರಣವಿದೆ; ಆ ಭೀತಿಯ ನಿವಾರಣೆಗೆ ಲೋಕ ಸಂಗ್ರಹವೆಂಬ ಅಸ್ತ್ರವನ್ನು ಮೂರನೆಯ ಅಧ್ಯಾಯವು ರೂಪಿಸಿಕೊಟ್ಟಿದೆ. ನಿಂತನೀರಿನಂತೆ ಸಮಾಜವು ಇರಬಲ್ಲದೆ, ಇರಬೇಕೆ, ಎಂಬುದು ಪ್ರಶ್ನೆ.

ಮಾನವನ ಇತಿಹಾಸದಲ್ಲಿ ಸಮಾಜವು ಸ್ಥಗಿತಗೊಂಡು ಉಳಿದಿಲ್ಲ. ಅದಕ್ಕೆ ಪುರಾವೆಗಳ ಅಗತ್ಯವಿಲ್ಲ. ಅದು ಸ್ಥಗಿತವಾಗಿಲ್ಲದಿದ್ದರೆ ಸ್ಥಾಪಿತ ಹಿತಾಸಕ್ತಿಗಳಿಗೆ ಕಸಿವಿಸಿ. ಸಾಮೂಹಿಕತೆಯಿಂದ ವೈಯಕ್ತಿಕ ನೆಲೆಯತ್ತ ದೃಷ್ಟಿಯನ್ನು ಕೇಂದ್ರೀಕರಿ ಸುವುದು ಹಾಗೂ ಆಚರಣೆಗಳ ಅನುಕರಣೆಗೆ ಮಾದರಿ ಒದಗಿಸುವುದು ಪ್ರತಿಗಾಮಿತ್ವದ ಶಾಶ್ವತ ಅಸ್ತ್ರಗಳು. ಸ್ವಾರಸ್ಯವೆಂದರೆ, ಲೋಕಸಂಗ್ರಹಕ್ಕೆ ವ್ಯತಿರಿಕ್ತವಾಗಿ ನಡೆದದ್ದೇ ಇತಿಹಾಸದಲ್ಲಿ ಉದಾತ್ತಚರಿತರ ಶ್ಲಾಘನೀಯ ಹಾದಿಯಾಗಿದೆ. ರೋಮಿನ ಅಡಿಪಾಯವನ್ನು ಅಲುಗಾಡಿಸಿದ ಸ್ಪಾರ್ಟಕಸ್, ಯಹೂದಿಗಳ ಕ್ರೌರ್ಯವನ್ನು ಕಿತ್ತೊಗೆಯಲು ಹೊರಟ ಜೀಸಸ್, ರೋಮಿನ ಕ್ಯಾಥೊಲಿಕ್ ಚರ್ಚ್‌ಗೆ ಘಾಸಿಯುಂಟುಮಾಡಿದ ಸೆಂಟ್ ಜೋನ್, ಬ್ರಿಟಿಷರಿಗೆ ಭಾರತದಲ್ಲಿ ಸವಾಲೆಸೆದ ಭಗತ್ ಸಿಂಗ್, ಅವೈಚಾರಿಕ ಮತಧರ್ಮಕ್ಕೆ ಕುತ್ತು ತಂದ ಗೆಲಿಲಿಯೊ, ೧೨ನೆಯ ಶತಮಾನದ ಬಸವಣ್ಣ ಮತ್ತು ೨೦ನೆಯ ಶತಮಾನದ ಅಂಬೇಡ್ಕರ್, ಇವರೆಲ್ಲಾ ಲೋಕಸಂಗ್ರಹಕ್ಕೆ ವಿರುದ್ಧ ದಿಕ್ಕಿನಲ್ಲಿ ಹೊರಟವರೇ, ಬೇರೆ ರೀತಿಯಲ್ಲಿ ಹೇಳುವು ದಾದರೆ ಅವರೆಲ್ಲಾ ಪರ್ಯಾಯವಾದ ಬೇರೊಂದು ಲೋಕಸಂಗ್ರಹದ ಮಾದರಿಯನ್ನು ಸಿದ್ಧಗೊಳಿಸಿ ಜನತೆಯ ಮುಂದಿಟ್ಟರು. ಶತಮಾನ ಗಳುದ್ದಕ್ಕೂ ವಿಶ್ವದೆಲ್ಲೆಡೆ ಸಮಾನತೆಯ ಗುರಿಯತ್ತ ಸಾಗಲು ಸೆಟೆದೆದ್ದು ನಿಂತವರಿಗೆ ಸಂಪ್ರದಾಯವು ವಿವಿಧ ರೀತಿಗಳಲ್ಲಿ ಅಡೆತಡೆಗಳನ್ನೊಡ್ಡಿದೆ. ಬೌದ್ಧಿಕವಾಗಿ ಮತ್ತು ಸೈದ್ಧಾಂತಿಕವಾಗಿ ಆ ತಡೆಗಳಿರುತ್ತವೆ. ಅರ್ಜುನನ ವಿಷಾದವು ಇಂತಹ ಅಡೆತಡೆಗಳನ್ನು ಮೀರಿನಿಲ್ಲುವ ಶಕ್ತಿಗಳಿವೆ ಎಂಬುದು; ಆ ಶಕ್ತಿಯನ್ನು ನಿಗ್ರಹಿಸಿ ಯಥಾಸ್ಥಿತಿಯನ್ನು ಕಾಪಾಡಿಕೊಳ್ಳಲು ಸಾಧ್ಯವೆಂಬ ಭರವಸೆಯನ್ನು ಭಗವಾನನು ನೀಡುತ್ತಾನೆ. ಗೀತೆಯ ಬಹುಮುಖೀ ಶ್ರೇಯಸ್ಸಿನಲ್ಲಿ ಇದೂ ಸೇರಿದೆ. ಆದರೆ ಅದಷ್ಟೇ ಗೀತೆಯ ಸರ್ವಸ್ವವಲ್ಲ. ಅದನ್ನು ಆ ಪಠ್ಯದ ಇತರ ಭಾಗಗಳಲ್ಲಿ ಗುರುತಿಸಲು ಸಾಧ್ಯವಿದೆ.

*(ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ ಮುಂದುವರಿಯುತ್ತದೆ.)*

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ
ಹಂತ ಬೆಂಗಳೂರು – ೫೬೦ ೦೮೫


ರಾವಣ ಬ್ರಿಗೇಡ್
ಯಡಿಯೂರಪ್ಪನವರೇ ನಮ್ಮ ಮುಂದಿನ CM
ರಾವಣ ಬ್ರಿಗೇಡ್‌ಗೆ ಯಾವುದೇ ಉದ್ದೇಶ ಇಲ್ಲಾ
BJP ಅಧಿಕಾರವೇ ನಮ್ಮ ಗುರಿ
ಯಾವುದೇ ರಾಜಕೀಯ ಉದ್ದೇಶವಿಲ್ಲ
ಯಡಿಯೂರಪ್ಪ ಸರ್ವಾಧಿಕಾರಿ

ಕ್ಷ–ಕಿರಣ

– ಸಾನ್ವಿ ಪಿ.




ನೋಟು ರದ್ದತಿ
ಇಲಿ ಹಠಾವ್ ಹೆಗ್ಗಣ ಬಚಾವ್
ಭಾರತ ವೀರ ಇಲಿ ಕೊಂದ ಧೀರ




ಡಾ॥ ಟಿ. ಆರ್. ಚಂದ್ರಶೇಖರ

# ಬರ ನಿರ್ವಹಣೆಯಲ್ಲಿ ಅನ್ನಭಾಗ್ಯದ ಪಾತ್ರ

ಪ್ರಸಿದ್ಧ ವಚನಕಾರ ಅಂಬಿಗರ ಚೌಡಯ್ಯ ಅವರು ಒಂದು ವಚನದಲ್ಲಿ ಆಹಾರ ಮತ್ತು ದೇಹಾರದ (ಪೂಜೆ) ಬಗ್ಗೆ ಚರ್ಚಿಸುತ್ತಾ ಬದುಕಿನಲ್ಲಿ ಆಹಾರ ಪ್ರಥಮ ಮತ್ತು ಪ್ರಾಥಮಿಕ ಎಂಬುದನ್ನು ಘೋಷಿಸಿದ್ದಾರೆ.

*ದೇಹಾರವ ಮಾಡುವ ಅಣ್ಣಗಳಿರಾ ಅಣ್ಣಗಳಿರಾ*
*ಒಂದು ತುತ್ತು ಆಹಾರವನ್ನಿಕ್ಕಿರಯ್ಯಾ*
*ದೇಹಾರಕ್ಕೆ ಆಹಾರವೇ ನಿಚ್ಚಣಿಕೆ*
*ದೇಹಾರವ ಮಾಡುತ್ತೆ*
*ಆಹಾರವನ್ನಿಕ್ಕದಿದ್ದರೆ*
*ಆ ಹರನಿಲ್ಲೆದನಂಬಿಗ ಚೌಡಯ್ಯ*

ಆಹಾರ, ಕೂಳು, ಹಸಿವು ಮುಂತಾದ ಬದುಕಿಗೆ ಸಂಬಂಧಿಸಿದ ಸಂಗತಿಗಳ ಮಹತ್ವವನ್ನು ಪ್ರಾಚೀನ ಕಾಲದಿಂದಲೂ ಜನರು ಗುರುತಿಸಿಕೊಂಡು ಬಂದಿದ್ದಾರೆ. ನಮ್ಮ ಸಂವಿಧಾನವು ತನ್ನ ಅನುಚ್ಛೇದ ೨೧ರಲ್ಲಿ ನಾಗರಿಕರಿಗೆ ಬದುಕುವ ಹಕ್ಕನ್ನು ನೀಡಿದೆ. ಈ ಬದುಕುವ ಹಕ್ಕು ಆಹಾರದ ಹಕ್ಕನ್ನು ಒಳಗೊಂಡಿದೆ. ನಮ್ಮ ಸರ್ವೋಚ್ಚ ನ್ಯಾಯಾಲಯವು ಅನುಚ್ಛೇದ ೨೧ರ ವ್ಯಾಖ್ಯಾನದ ಸಂದರ್ಭದಲ್ಲಿ ಬದುಕುವ ಹಕ್ಕು ಅನೇಕ ಇತರೆ ಹಕ್ಕುಗಳನ್ನು ಅಂತರ್ಗತ ಮಾಡಿಕೊಂಡಿರುವುದನ್ನು ಗುರುತಿಸುತ್ತಾ ಅದು ಆಹಾರದ ಹಕ್ಕನ್ನು ಒಳಗೊಂಡಿದೆ ಎಂಬುದನ್ನು ಘೋಷಿಸಿದೆ. ಆಹಾರವಿಲ್ಲದೆ ಜನರು ಬದುಕುವುದು ಸಾಧ್ಯವಿಲ್ಲ. ಅಂಬಿಗರ ಚೌಡಯ್ಯ ಅವರಿಗೆ ದೇಹಾರ ಮತ್ತು ಆಹಾರಗಳಲ್ಲಿ ಆಯ್ಕೆಯ ಪ್ರಶ್ನೆ ಬಂದರೆ ಅವರು ಆಹಾರವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ ವಿನಾ ದೇಹಾರವನ್ನಲ್ಲ. ಇದನ್ನೇ ಚೌಡಯ್ಯ ತನ್ನ ವಚನದಲ್ಲಿ ಹೇಳುತ್ತಿದ್ದಾನೆ. ಅವನ ಪ್ರಕಾರ ದೇಹಾರ ಮಾಡಲು ಶ್ರಮದ/ಕಾಯಕದ ಅಗತ್ಯವಿದೆ. ಈ ಶ್ರಮಕ್ಕೆ, ಕಾಯಕಕ್ಕೆ ಅಡಿಪಾಯ ಯಾವುದೆಂದರೆ ಆಹಾರ. ಅದು ಪ್ರಥಮ, ಪ್ರಾಥಮಿಕ. ಬಹಳ ವಿಚಿತ್ರವೆಂದರೆ ಇಂದು ಜನರು ಇವೆರಡರ ನಡುವೆ ಭಿನ್ನತೆಯನ್ನು ಗುರುತಿಸುವುದಕ್ಕೆ ಪ್ರತಿಯಾಗಿ ಎರಡನ್ನು ಅಭಿನ್ನವಾಗಿ ನೋಡುತ್ತಿದ್ದಾರೆ. ಅಕ್ಷಯ ಪಾತ್ರದ ಮೂಲಕ (ಕೆಲವೊಮ್ಮೆ ಸರ್ಕಾರವು ನೀಡುವ ಅನುದಾನದಿಂದ) ಶಾಲೆಗಳಲ್ಲಿ ಮಧ್ಯಾಹ್ನದ ಬಿಸಿಯೂಟವನ್ನು ಒದಗಿಸುವ ಸಂಸ್ಥೆಯೊಂದು ಅನೇಕ ನೂರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ದೇವಾಲಯವೊಂದನ್ನು ಬೆಂಗಳೂರಿನಲ್ಲಿ ಕಟ್ಟಿಸುತ್ತಿದೆ. ಇದು ಒಂದು ರೀತಿಯಲ್ಲಿ ಆಷಾಢಭೂತಿತನವಲ್ಲದೆ ಮತ್ತೇನೂ ಅಲ್ಲ! ಇಲ್ಲಿರುವ ಸರಳವಾದ ಸಂಗತಿಯೆಂದರೆ ಜನರ ಹಸಿವನ್ನು, ಜನರ ಆಹಾರದ ಅಗತ್ಯವನ್ನು ದೇವಾಲಯ ಕಟ್ಟಿಸುವುದರ ಮೂಲಕ ನಿವಾರಿಸಲು ಸಾಧ್ಯವಿಲ್ಲ. ಜನರಿಗೆ, ದುಡಿಮೆಗಾರರಿಗೆ, ಶ್ರಮಿಕರಿಗೆ ಏನು ಬೇಕು ಎಂಬುದರ ಅರಿವಿಲ್ಲದೆ ಹಸಿವನ್ನು ಮತ್ತು ದೇವಾಲಯ ನಿರ್ಮಾಣಗಳನ್ನು ಇಲ್ಲಿ ಒಂದೇ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಇದು ಇಂದಿನ ನಮ್ಮ ದುರಂತ. ಒಂದು ಕಡೆ ಬಡ ಮಕ್ಕಳಿಗೆ ಆಹಾರ ನೀಡುವುದು ಮತ್ತು ಮತ್ತೊಂದು ಕಡೆ ಶ್ರೀಮಂತ ಭಕ್ತರಿಗೆ ದೇವಾಲಯ ಕಟ್ಟಿಸುವುದು! ಈ ಕ್ರಮಗಳ ಮೂಲಕ ಸಾಮಾಜಿಕ ಅಸಮಾನತೆಯನ್ನು ಊರ್ಜಿತಗೊಳಿಸಲಾಗುತ್ತಿದೆ. ಬಡವರ ಕೋಪ–ತಾಪಗಳನ್ನು ಶಮನ ಮಾಡಲಾಗುತ್ತಿದೆ. ಇಲ್ಲಿ ಆದ್ಯತೆಯ ಪ್ರಶ್ನೆ ಇಲ್ಲದಿದ್ದರೆ ಹೇಗೆ? ಇಲ್ಲಿ ಸಾಮಾಜಿಕ ಪ್ರಜ್ಞೆ ಮಾಯವಾಗಿದೆ. ಈ ಬಗೆಯ ಗೊಂದಲದಿಂದಾಗಿ ಅನ್ನಭಾಗ್ಯದ ಬಗ್ಗೆ ಜನರು ವಿಚಿತ್ರವಾಗಿ ಮಾತನಾಡುತ್ತಿದ್ದಾರೆ. ಅನ್ನಭಾಗ್ಯ ಕಾರ್ಯಕ್ರಮ ಕುರಿತಂತೆ ಕೆಲವು ಸಂಗತಿಗಳನ್ನು ಇಲ್ಲಿ ಚರ್ಚೆ ಮಾಡಲಾಗಿದೆ.

ಅನ್ನಭಾಗ್ಯ ಅನ್ನುವುದು ಅನೇಕರು ತಿಳಿದುಕೊಂಡಿರುವಂತೆ ಉಚಿತವಾಗಿ ಅಥವಾ ಕಡಿಮೆ ಬೆಲೆಯಲ್ಲಿ, ಅಂದರೆ ಸಬ್ಸಿಡಿಯಲ್ಲಿ ಜನರಿಗೆ ಒದಗಿಸುತ್ತಿರುವ ಅನುಕೂಲವಲ್ಲ. ನಿಜ, ಇದನ್ನು ಸರ್ಕಾರವು ಸಹಾಯಧನದಲ್ಲಿ ನೀಡುತ್ತಿದೆ. ಇದನ್ನು ನಾವು ಬೇರೊಂದು ಆಯಾಮದಲ್ಲಿ ಚರ್ಚಿಸುವ ಅಗತ್ಯವಿದೆ. ಇದನ್ನು ಹಕ್ಕಿನ ಪರಿಭಾಷೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದೆ. ಇದು ಜನರನ್ನು ಸೋಮಾರಿಗಳನ್ನಾಗಿ ಮಾಡಿಬಿಡುತ್ತದೆ, ಜನರು ದುಡಿಯುವುದನ್ನು ಬಿಟ್ಟು ಅನ್ನಭಾಗ್ಯ, ಎನ್.ಆರ್.ಈ.ಜಿ.ಎ., ಮುಂತಾದ ಕ್ರಮಗಳಡಿಯಲ್ಲಿ ಕಾಲಕಳೆಯುವ ಕೆಲಸ ಮಾಡುತ್ತಿದ್ದಾರೆ ಎಂಬ ಆರೋಪವು ಕೇಳಿಬರುತ್ತಿದೆ. ಈ ಕ್ರಮದಿಂದ ಉಳಿದವರಿಗೆ ಎಲ್ಲಿಲ್ಲದ ಅನುಕೂಲ ಉಂಟಾಗುತ್ತಿದೆ ಎಂಬ ಭಾವನೆ ಉಳ್ಳವರಲ್ಲಿ ವ್ಯಾಪಕವಾಗಿದೆ. ಎಲ್ಲವನ್ನು ಸರ್ಕಾರ ಕೊಟ್ಟು ಬಿಟ್ಟರೆ ಅವರು ದುಡಿಯುವ ಅಗತ್ಯವೇ ಬರುವುದಿಲ್ಲ ಎಂಬ ಭಾವನೆಯೂ ಇದೆ. ಇದರಂತಹ ಅಸಂಗತ ಸಂಗತಿ ಮತ್ತೊಂದು ಇರುವುದು ಸಾಧ್ಯವಿಲ್ಲ.



ಉದಾಹರಣೆಗೆ ಪ್ರಸಿದ್ಧ ಉದ್ಯಮಿ ಟಿ. ವಿ. ಮೋಹನ್ ದಾಸ್ ಪೈ ಅವರು ಅನ್ನಭಾಗ್ಯವನ್ನು ಕೈಬಿಡಲು ಒತ್ತಾಯಿಸಿ ಇದು 'ಸರ್ಕಾರದ ಖಜಾನೆ ಮೇಲೆ ಅಗಾಧವಾದ ಹೊರೆ' ಎಂದು ಹೇಳಿ, ಮುಂದುವರಿದು 'ಇದು ತೆರಿಗೆದಾರರ ಹಣದ ಲೂಟಿಗೆ ಸಮ' ಎಂದು ಉಗ್ರವಾಗಿ ಟೀಕಿಸಿದ್ದಾರೆ. ಅನೇಕ ಯಥಾಸ್ಥಿತಿವಾದಿ ಅರ್ಥಶಾಸ್ತ್ರಜ್ಞರು ಇದನ್ನು 'ವಿತ್ತೀಯ ದುರಂತ' (ಫಿಸ್ಕಲ್ ಡಿಸಾಸ್ಟರ್) ಎಂದು ಕರೆದಿದ್ದಾರೆ. ಇವರಿಗೆ ದುಡಿಮೆಯ ಬಗ್ಗೆಯೇ ಪೂರ್ವಗ್ರಹಗಳಿದ್ದಂತೆ ಕಾಣುತ್ತದೆ. 'ಯಾರು ಹೆಚ್ಚು ಸಂಬಳದ ಉದ್ಯೋಗ ಪಡೆಯುತ್ತಾರೋ ಅವರೇ ಮಹಾ ಬುದ್ಧಿವಂತರು' ಎಂಬ ನಂಬಿಕೆಯನ್ನು ಇವರು ದೃಢೀಕರಿಸುತ್ತಿರುವಂತೆ ಕಾಣುತ್ತದೆ. ಇದು ಸಾಮಾಜಿಕ ಪ್ರಜ್ಞೆಯೇ ಇಲ್ಲದ ಬುದ್ಧಿವಂತಿಕೆ. ಆದರೆ ಇವರು ದೇಶದ ಸಾರ್ವಜನಿಕ ಬ್ಯಾಂಕುಗಳು ಉದ್ದಿಮೆಗಳಿಗೆ ಸಂಬಂಧಿಸಿದಂತೆ ಮನ್ನಾ ಮಾಡಿದ ಲಕ್ಷಾಂತರ ಕೋಟಿ ಸಾಲದ ಮೊತ್ತದ ಬಗ್ಗೆ, ಕೇಂದ್ರ ಸರ್ಕಾರವು ರಿಯಾಯಿತಿ, ವಿನಾಯಿತಿ ಹೆಸರಿನಲ್ಲಿ ಕೈಬಿಟ್ಟ ಲಕ್ಷಾಂತರ ಕೋಟಿ ತೆರಿಗೆ ಮೊತ್ತದ ಬಗ್ಗೆ ಮಾತನಾಡುವುದಿಲ್ಲ.

ಹಕ್ಕಿನ ಪರಿಭಾಷೆಯನ್ನು ಅನಕ್ಷರಸ್ಥರಾದವರು ದುಡಿಮೆಯ ಬಗ್ಗೆ, ನಮ್ಮ ಸಾಮಾಜಿಕ ರಚನೆಯ ಬಗ್ಗೆ, ಕೂಲಿ ವ್ಯವಸ್ಥೆಯ ಬಗ್ಗೆ, ನಮ್ಮಲ್ಲಿನ ಸಾಮಾಜಿಕ ಶ್ರೇಣೀಕರಣದ ಬಗ್ಗೆ ಬಳಸಬಲ್ಲರು. ನಮ್ಮ ಸಮಾಜದಲ್ಲಿ ದುಡಿಯುವ ವರ್ಗ ಹೇಗೆ ಬದುಕುತ್ತಿದೆ ಅನ್ನುವುದರ ಬಗ್ಗೆ ಪ್ರಾಂಜಲ ಮನಸ್ಸಿನಿಂದ ಯೋಚಿಸಿದರೆ ಅನ್ನಭಾಗ್ಯ ಏಕೆ ಬೇಕು ಎಂಬುದು ಗೊತ್ತಾಗುತ್ತದೆ. ನಮ್ಮ ಸಮಾಜದಲ್ಲಿ ರಸ್ತೆ ನಿರ್ಮಿಸುತ್ತಿರುವವರು ಯಾರು ? ರಸ್ತೆಗಳಲ್ಲಿ ಕಸ ಬಳಿಯುತ್ತಿರುವವರು ಯಾರು ? ವಿಧಾನಸೌಧ ಕಟ್ಟಿದವರಾರು ? ನಮ್ಮ ಮನೆ ಮನೆಗಳಲ್ಲಿ ಇಂಟರ್‌ನೆಟ್ ಪಡೆಯುವುದಕ್ಕೆ ಅಗತ್ಯವಾದ ಆಪ್ಟಿಕಲ್ ಫೈಬರ್ ಕೇಬಲ್‌ಗಳನ್ನು ಅರ್ಧ ಅಡಿ ಅಗಲದ ಎರಡು-ಮೂರು ಅಡಿ ಆಳದ ಗುಂಡಿಗಳಲ್ಲಿ ಹೂಳುತ್ತಿರುವವರು ಯಾರು? ಪ್ರತಿ ವರ್ಷ ರಾಜ್ಯದಲ್ಲಿ ಸುಮಾರು ೧೨೦-೧೩೦ ಲಕ್ಷ ಟನ್ ಆಹಾರ ಉತ್ಪಾದನೆಗೆ ಯಾರ ದುಡಿಮೆ ಸಂದಿದೆ ? ದುಡಿಯುವ ವರ್ಗ ಸೋಮಾರಿಗಳಾಗಿದ್ದರೆ ಇವುಗಳನ್ನೆಲ್ಲ ಮಾಡಿದವರಾರು ಸ್ವಾಮಿ ? ನಮ್ಮ ಹೊಲ-ಗದ್ದೆಗಳಲ್ಲಿ, ಕಟ್ಟಡ ನಿರ್ಮಾಣದಲ್ಲಿ, ಕಾರ್ಖಾನೆಗಳಲ್ಲಿ, ವಿದ್ಯುತ್-ನೀರಾವರಿ ಯೋಜನೆಗಳಲ್ಲಿ ಹಗಲು-ಇರುಳು ಅನ್ನದೆ, ಮಳೆ-ಬಿಸಿಲು ಲೆಕ್ಕಿಸದೆ ಬೆವರು, ಕಣ್ಣೀರು, ರಕ್ತ ಹರಿಸಿ ದುಡಿಯುತ್ತಿರುವವರು ಯಾರು ?

ಕರ್ನಾಟಕದಲ್ಲಿ ಆಹಾರ ಅಭದ್ರತೆಯನ್ನು ಎದುರಿಸುತ್ತಿರುವ ೭೨ ಲಕ್ಷ ದಿನಗೂಲಿ ದುಡಿಮೆಗಾರರಿದ್ದಾರೆ. ಸಾಮಾನ್ಯವಾಗಿ ಆಹಾರ ಅಭದ್ರತೆಯನ್ನು ಎದುರಿಸುತ್ತಿರುವವರಲ್ಲಿ ಹೆಚ್ಚು ಮಹಿಳೆಯರಿದ್ದಾರೆ, ತಳವರ್ಗದವರಿದ್ದಾರೆ, ವಂಚಿತರಿದ್ದಾರೆ.

**ಸಮಾಜದಲ್ಲಿ ಕೂಲಿಕಾರರು ಸದಾ ಕೂಲಿಕಾರರಾಗೇ ಇರಬೇಕೆ ?**

ಸಮಾಜದಲ್ಲಿ ದಟ್ಟವಾಗಿ ಆದರೆ ತಪ್ಪು ತಪ್ಪಾಗಿ ಹರಡಿರುವ ಒಂದು ಭಾವನೆಯೆಂದರೆ ಕೃಷಿಯಲ್ಲಿ ದುಡಿಮೆ ಮಾಡಲು ಯಾರೂ ಬರುವುದಿಲ್ಲ, ಎಂಬುದು. ದುಡಿಮೆಗಾರರ ಕೊರತೆಯಿದೆ, ಕಾರ್ಮಿಕರ ಅಭಾವವಿದೆ ಎನ್ನಲಾಗಿದೆ. ದುಡಿಯಲು ಜನರು ಸಿದ್ಧರಿಲ್ಲ. ಇದು ರಾಜ್ಯದ ಎಲ್ಲ ಭಾಗದಲ್ಲಿನ ಉಳ್ಳವರ ಕೂಗು-ಕೊರಗು. ಇದು ಸರಿಯಿರಲೂಬಹುದು. ಆದರೆ ಪ್ರಶ್ನೆಯೆಂದರೆ ನಾವೇಕೆ ಕೂಲಿಕಾರರು ಇರಬೇಕು ಎಂದು ಬಯಸುತ್ತಿದ್ದೇವೆ ? ಅಂದರೆ ಕೂಲಿಕಾರರು ಸಮಾಜದಲ್ಲಿ ಸದಾ ಇರಬೇಕು ಎಂಬುದು ಇಲ್ಲಿನ ಪ್ರತಿಪಾದನೆಯೆ ? ಇದು ಯಥಾಸ್ಥಿತಿವಾದ ಆಗುವುದಿಲ್ಲವೇ ? ನಮ್ಮ ಹಾಗೆ ಎಲ್ಲರೂ ಮೇಲುಸ್ತರಕ್ಕೇರುವುದು ಮತ್ತು ಅಭಿವೃದ್ಧಿ ಹೊಂದುವುದು ಬೇಡವೇ ? ಕೂಲಿಕಾರರು ಇಲ್ಲದ ಸಮಾಜವನ್ನು ನಾವೇಕೆ ಭಾವಿಸಿಕೊಳ್ಳಬಾರದು / ಊಹಿಸಿಕೊಳ್ಳಬಾರದು ? ಎಲ್ಲರೂ ಸಂಬಳದವರಾದರೆ ಸಮಸ್ಯೆಯೇನು ? ಇಲ್ಲಿದೆ ಮುಖ್ಯವಾದ ಪ್ರಶ್ನೆ. ಕೂಲಿಕಾರರಲ್ಲಿ ಸಾಮಾನ್ಯವಾಗಿ ಮಹಿಳೆಯರು ಅಧಿಕವಾಗಿರುತ್ತಾರೆ. ಉದಾಹರಣೆಗೆ ರಾಜ್ಯದಲ್ಲಿನ ಒಟ್ಟು ದಿನಗೂಲಿ ಕಾರ್ಮಿಕರಲ್ಲಿ (೭೧.೫೫ ಲಕ್ಷ) ಮಹಿಳೆಯರ ಸಂಖ್ಯೆ ೩೮.೭೨ ಲಕ್ಷ. ಅಂದರೆ ಮಹಿಳಾ ದಿನಗೂಲಿ ದುಡಿಮೆಗಾರರ ಪ್ರಮಾಣ ಶೇ. ೫೪.೧೨. ಈ ಕಾರಣಕ್ಕೆ ತೀವ್ರ ಬಡತನದಲ್ಲಿ ಅದರ ನಿರ್ವಹಣೆಯ ಹೊರೆ ಸಾಮಾನ್ಯವಾಗಿ ಮಹಿಳೆಯರ ಮೇಲಿರುತ್ತದೆ. ಅನ್ನಭಾಗ್ಯ ಅನ್ನುವುದು ದುಡಿಯುವ ವರ್ಗದ ಮಹಿಳೆಯರಿಗೆ ಆಶಾಕಿರಣವಾಗಿದೆ-ಜೀವದ್ರವ್ಯವಾಗಿದೆ. ಆಹಾರಕ್ಕೂ ಮತ್ತು ಮಹಿಳೆಯರಿಗೂ ನಡುವೆ ಅವಿನಾಭಾವ ಸಂಬಂಧ ಇರುವುದನ್ನು ನಾವು ಮರೆಯಬಾರದು. ಅದರ ಉತ್ಪಾದನೆಯಿಂದ ಹಿಡಿದು, ಒಕ್ಕಣೆ, ಸಂಗ್ರಹ, ಸಂಸ್ಕರಣೆ ಮತ್ತು ಅನುಭೋಗದವರೆಗೆ ಈ ಸಂಬಂಧ ಹರಡಿಕೊಂಡಿದೆ. ಇಷ್ಟಾದರೂ ಮಹಿಳೆಯರು ನಮ್ಮಲ್ಲಿ ತೀವ್ರ ಅಪೌಷ್ಟಿಕತೆ ಮತ್ತು ಅನಿಮಿಯ ಎದುರಿಸುತ್ತಿದ್ದಾರೆ.

**ಅಪೌಷ್ಟಿಕತೆಗೆ ಅನ್ನಭಾಗ್ಯ ಸಿದ್ಧೌಷಧ !**

ಅನ್ನಭಾಗ್ಯ ಏಕೆ ಬೇಕು ಎಂಬುದನ್ನು ರಾಜ್ಯದಲ್ಲಿರುವ ಅಪೌಷ್ಟಿಕತೆ ಹಿನ್ನೆಲೆಯಲ್ಲಿ ಚರ್ಚೆ ಮಾಡಬಹುದು. ಅಪೌಷ್ಟಿಕತೆಯನ್ನು 'ಬಚ್ಚಿಟ್ಟ ಹಸಿವು' ಎಂದು ಕರೆಯುತ್ತಾರೆ. ಕರ್ನಾಟಕ ರಾಜ್ಯದಲ್ಲಿನ ಮಹಿಳೆಯರ ಸಂಖ್ಯೆ ೩೦೧.೨೮ ಲಕ್ಷ. ಇವರಲ್ಲಿ ೧೫-೪೯ ವಯೋಮಾನದ ಮಹಿಳೆಯರ ಸಂಖ್ಯೆ ೧೬೫.೭೦ ಲಕ್ಷ. ದೇಶಾದ್ಯಂತ ಕಾಲಕಾಲಕ್ಕೆ ನಡೆಯುವ ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆಯ ಇತ್ತೀಚಿಗಿನ ವರದಿ ಪ್ರಕಾರ ೨೦೧೫-೧೬ರಲ್ಲಿ ರಾಜ್ಯದಲ್ಲಿ ಅನಿಮಿಯ ಎದುರಿಸುತ್ತಿರುವ ಮಹಿಳೆಯರ ಪ್ರಮಾಣ ಶೇ. ೫೨. ಅಂದರೆ ಅನಿಮಿಯ ಎದುರಿಸುತ್ತಿರುವ ಮಹಿಳೆಯರ ಸಂಖ್ಯೆ ೮೬ ಲಕ್ಷ. ಮಕ್ಕಳಲ್ಲಿನ ಅಪೌಷ್ಟಿಕತೆಯೂ ಆತಂಕಕಾರಿಯಾಗಿದೆ. ನಮ್ಮ ರಾಜ್ಯದಲ್ಲಿನ ೦-೬ ವರ್ಷ ವಯೋಮಾನದ ಮಕ್ಕಳ ಸಂಖ್ಯೆ ೨೦೧೧ರಲ್ಲಿ ೭೧ ಲಕ್ಷ. ರಾಜ್ಯದಲ್ಲಿ ಮಕ್ಕಳಲ್ಲಿನ ಅನಿಮಿಯ ಪ್ರಮಾಣ ಶೇ. ೬೦. ಅಂದರೆ ನಮ್ಮಲ್ಲಿ ಸುಮಾರು ೪೨.೬ ಲಕ್ಷ. ಒಟ್ಟಾರೆ ನಮ್ಮ ರಾಜ್ಯದಲ್ಲಿ ೧೨೮ ಲಕ್ಷ ಮಹಿಳೆಯರು ಮತ್ತು ಮಕ್ಕಳು ಅನಿಮಿಯ ಎದುರಿಸುತ್ತಿದ್ದಾರೆ.

### ಅಮೆರಿಕೆಯಲ್ಲಿ ಹಸಿವು ಮತ್ತು ಆಹಾರ ಭದ್ರತೆ ಕಾರ್ಯಕ್ರಮ

ಜಗತ್ತಿನ ಶ್ರೀಮಂತ ದೇಶವಾದ ಅಮೆರಿಕೆಯಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೫ರಷ್ಟು ಜನರು ಆಹಾರ ಅಭದ್ರತೆಯನ್ನು ಎದುರಿಸುತ್ತಿದ್ದಾರೆ ಮತ್ತು ಅವರಿಗೆ ಸರ್ಕಾರವು ಪೂರಕ ಪೌಷ್ಟಿಕ ನೆರವು ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಇದಕ್ಕೆ ೨೦೧೨ರಲ್ಲಿ ಸರ್ಕಾರವು ಸುಮಾರು ೭೪೦೦.೬೦ ಕೋಟಿ ಡಾಲರ್ ಹಣವನ್ನು ಖರ್ಚು ಮಾಡಿದೆ. ಅಮೆರಿಕೆಯು ತನ್ನ ಆಂತರಿಕ ಅನುಭೋಗಕ್ಕೆ ಅಗತ್ಯವಾದುದಕ್ಕಿಂತ ಅಧಿಕ ಆಹಾರವನ್ನು ಉತ್ಪಾದಿಸುತ್ತಿದೆ. ಆದರೆ ಅಲ್ಲಿ ಅನೇಕರಿಗೆ ಆಹಾರವನ್ನು ಕೊಳ್ಳುವ ಶಕ್ತಿಯಿಲ್ಲದೆ ಆಹಾರ ಅಭದ್ರತೆಯನ್ನು ಎದುರಿಸುತ್ತಿದ್ದಾರೆ. ಒಂದು ಅಂದಾಜಿನ ಪ್ರಕಾರ ೫೦೦ ಲಕ್ಷ ಜನರು ಅಲ್ಲಿ ಆಹಾರ ಭದ್ರತೆಯಡಿಯಲ್ಲಿ ನೆರವು ಪಡೆಯುತ್ತಿದ್ದಾರೆ.

ಹಸಿವು ಅನ್ನುವುದು ಜಾಗತಿಕ ಸಮಸ್ಯೆಯಾಗಿದೆ. ಇದು ಸಾರ್ವತ್ರಿಕ ಸಮಸ್ಯೆಯೂ ಹೌದು. ಇದು ಮನುಷ್ಯ ಜನಾಂಗವನ್ನು ಅನೂಚಾನವಾಗಿ ಕಾಡುತ್ತಾ ಬಂದಿರುವ ಸಮಸ್ಯೆಯಾಗಿದೆ. ಈ ವಿಷಯ ಕುರಿತಂತೆ ಅಮರ್ತ್ಯ ಸೇನ್ ಹೇಳಿದ ಮಾತುಗಳನ್ನು ನೆನಪಿಸಿಕೊಳ್ಳಬಹುದು.

ಅವರ ಪ್ರಸಿದ್ಧ ಕೃತಿ 'ಪಾವರ್ಟಿ ಆಂಡ್ ಫ್ಯಾಮಿನ್'ನಲ್ಲಿನ ಮೊದಲ ವಾಕ್ಯ ಹೀಗಿದೆ :

'ಸಮಾಜದಲ್ಲಿ ಕೆಲವರಿಗೆ ಆಹಾರವು ದೊರೆಯದಿರುವುದು ಹಸಿವಿನ ಪ್ರಧಾನ ಲಕ್ಷಣವೇ ವಿನಾ ಅದು ಇಲ್ಲದಿರುವುದು ಅದರ ಲಕ್ಷಣವಲ್ಲ.'

ಹಸಿವು ಅನ್ನುವುದು ಆಹಾರ ಎಷ್ಟು ಬೇಕೋ ಅಷ್ಟು ಇಲ್ಲದಿರುವುದರ ಸಮಸ್ಯೆಯಲ್ಲ. ಇದು ಆಹಾರ ಕೆಲವರಿಗೆ ಎಷ್ಟು ಬೇಕೋ ಅಷ್ಟು ದೊರೆಯದಿರುವುದರ ಸಮಸ್ಯೆ. ಅಂದರೆ ಇದು ಆಹಾರದ ಮೇಲಿನ ಮಾಲಿಕತ್ವದ ಪ್ರಶ್ನೆಯಾಗಿದೆ.

ಉದಾಹರಣೆಗೆ, ಕರ್ನಾಟಕದಲ್ಲಿ ವಾರ್ಷಿಕ ಆಹಾರ ಪದಾರ್ಥದ ಉತ್ಪಾದನೆ ೧೩೦ ಲಕ್ಷ ಟನ್‌ಗಳು. ಇದನ್ನು ಕರ್ನಾಟಕದ ಒಟ್ಟು ಜನಸಂಖ್ಯೆ ೬೧೦.೯೫ ಲಕ್ಷ ಜನರಿಗೆ ಹಂಚಿದರೆ ಲಭ್ಯವಿರುವ ತಲಾ ಆಹಾರದ ಪ್ರಮಾಣ ೧೯೬ ಕೆ.ಜಿ. ಮಾಸಿಕ ದೊರೆಯುವ ಆಹಾರ ೧೬.೩೯ ಕೆ.ಜಿ. ದಿನನಿತ್ಯ ದೊರೆಯುವ ತಲಾ ಆಹಾರ ೫೩೭ ಗ್ರಾಮ್. ಇದು ಜನರ ಒಂದು ಕುಟುಂಬಕ್ಕೆ ಪ್ರತಿ ದಿನ ದೊರೆಯುವ ಆಹಾರ ಸುಮಾರು ೨.೫ ಕೆ.ಜಿ.

ಅಪೌಷ್ಟಿಕತೆ ಮತ್ತು ಅನಿಮಿಯ ಎದುರಿಸುತ್ತಿರುವ ಮಹಿಳೆಯರಲ್ಲಿ ಬಹುಪಾಲು ದಿನಗೂಲಿ ದುಡಿಮೆಗಾರರಾಗಿರುತ್ತಾರೆ. ಅಪೌಷ್ಟಿಕತೆ ಅನ್ನುವುದು ಕೇವಲ ಒಂದು ಸಮಸ್ಯೆಯಲ್ಲ. ಇದು ಸಮಾಜದಲ್ಲಿ ಮಕ್ಕಳ ಶಿಕ್ಷಣದ ಮೇಲೆ, ದುಡಿಮೆಯ ಮೇಲೆ ಪರಿಣಾಮ ಬೀರುತ್ತದೆ. ಇದಕ್ಕಿಂತ ಮುಖ್ಯವಾಗಿ ಇದಕ್ಕೆ ಅಂತರ-ತಲೆಮಾರು(ಇಂಟರ್ ಜನರೇಶನಲ್) ಆಯಾಮವೂ ಇದೆ. ಅಪೌಷ್ಟಿಕ ತಾಯಿ ನಿರೀಕ್ಷಿತ ತೂಕಕ್ಕಿಂತ ಕಡಿಮೆ ತೂಕವಿರುವ ಅಪೌಷ್ಟಿಕ/ಅನಿಮಿಯ ಮಕ್ಕಳಿಗೆ ಜನ್ಮ ನೀಡುತ್ತಾಳೆ. ಹೀಗೆ ಅಪೌಷ್ಟಿಕತೆಯು ತಲೆಮಾರಿನಿಂದ ತಲೆಮಾರಿಗೆ ಹರಿದುಕೊಂಡು ಹೋಗುತ್ತದೆ.

ಈ ಎಲ್ಲ ಸಂಗತಿಗಳನ್ನು ಸಮಸ್ಯೆಗಳೆಂದು ಗುರುತಿಸಲು ನಾವು ಸಿದ್ಧರಿಲ್ಲ. ಇದರ ಬಗ್ಗೆ ನಮ್ಮ ಶಾಸನ ಸಭೆಗಳಲ್ಲಿ, ಜಿಲ್ಲಾ ಪಂಚಾಯತಿ ಸಭೆಗಳಲ್ಲಿ ಚರ್ಚೆಯಾಗುವುದಿಲ್ಲ. ಏಕೆ ? ಆದರೆ ಅನ್ನಭಾಗ್ಯದಿಂದ ಆಗಬಾರದ್ದು ನಡೆದುಹೋಗಿದೆ ಎಂದು ಅರಚಾಡುತ್ತೇವೆ, ಹಾಡು ಕಟ್ಟುತ್ತೇವೆ, ಅಣಕವಾಡುತ್ತೇವೆ. ಹೀಗೆ ಮಾಡುವುದರ ಮೂಲಕ ನಾವು ಬಡವರನ್ನು, ಸಮಾಜದಲ್ಲಿ ಅಂಚಿನಲ್ಲಿರುವವರನ್ನು, ವಂಚಿತರನ್ನು ಅವಮಾನ ಗೊಳಿಸುತ್ತಿಲ್ಲವೆ ? ದುಡಿಮೆಯ ಬಗ್ಗೆ, ದುಡಿಮೆಗಾರರ ಬಗ್ಗೆ ಅಸಹ್ಯವಾಗಿ ಮಾತನಾಡುವುದು ಸಲ್ಲ.

**ಕುಟುಂಬಗಳ ಅನುಭೋಗ ವೆಚ್ಚ ಮತ್ತು ವರಮಾನ ಗುಣಕ**

ಅರ್ಥಶಾಸ್ತ್ರದ ಸರಳವಾದ ಒಂದು ನಿಯಮವೆಂದರೆ ಕುಟುಂಬದ ವರಮಾನ ಕೆಳಮಟ್ಟದಲ್ಲಿದ್ದರೆ ಅದರಲ್ಲಿ ಅನುಭೋಗದ ವೆಚ್ಚದ ಪ್ರಮಾಣ ಶೇ. ೭೦ರಿಂದ ಶೇ. ೮೦ರಷ್ಟಿರುತ್ತದೆ. ವರಮಾನದಲ್ಲಿ ಏರಿಕೆಯಾದರೆ ಅದರಲ್ಲಿ ಅನುಭೋಗದ ಮೇಲಿನ ವೆಚ್ಚ ಕಡಿಮೆಯಾಗುತ್ತಾ ಹೋಗುತ್ತದೆ. ನಮ್ಮ ರಾಜ್ಯದಲ್ಲಿ ಬಡವರು ತಮ್ಮ ವರಮಾನದಲ್ಲಿ ಶೇ. ೭೦ರಿಂದ ಶೇ. ೮೦ರಷ್ಟನ್ನು ಆಹಾರದ ಮೇಲೆ ವ್ಯಯ ಮಾಡುತ್ತಾರೆ. ಆದರೆ ಶ್ರೀಮಂತರು ತಮ್ಮ ವರಮಾನದಲ್ಲಿ ಆಹಾರದ ಮೇಲೆ ವ್ಯಯಿಸುವ ಪ್ರಮಾಣ ಶೇ. ೩೦ಕ್ಕಿಂತ ಕಡಿಮೆ. ಅನ್ನಭಾಗ್ಯವು ಬಡ ಕುಟುಂಬಗಳಿಗೆ ವರಮಾನ ಉಳಿಸುವ ಕ್ರಮವಾಗಿದೆ. ಅನೇಕ ಅನ್ನಭಾಗ್ಯದ ಫಲಾನುಭವಿ ಕುಟುಂಬಗಳು ಅದರಿಂದ ಮಾಸಿಕ ರೂ. ೧೦೦ಕ್ಕಿಂತ ಅಧಿಕ ಉಳಿತಾಯವಾಗುತ್ತಿದೆ ಎಂದು ಹೇಳಿದ್ದಾರೆ. ಇದರಿಂದ ಅವರು ಆಹಾರವನ್ನು ಬಿಟ್ಟು ಇತರೆ ಸರಕುಗಳ ಮೇಲೆ ಖರ್ಚು ಮಾಡುವ ಮೊತ್ತ ಅಧಿಕವಾಗುತ್ತದೆ. ಅನ್ನಭಾಗ್ಯದಿಂದ ಆರ್ಥಿಕತೆಯ ಸಮಗ್ರ ಬೇಡಿಕೆಯಲ್ಲಿ ಏರಿಕೆಯಾಗುತ್ತದೆ. ಉದ್ಯೋಗದಲ್ಲಿ, ಬಂಡವಾಳ ಹೂಡಿಕೆಯಲ್ಲಿ ಏರಿಕೆಯಾಗುತ್ತದೆ. ಅನುಭೋಗದ ಪ್ರಮಾಣ ಉನ್ನತ ಮಟ್ಟದಲ್ಲಿದ್ದರೆ ಅಂತಿಮವಾಗಿ ವರಮಾನದ ಮೊತ್ತವು ಆರಂಭಿಕ ಹೂಡಿಕೆಯ ಅದೆಷ್ಟೋ ಪಟ್ಟು ಅಧಿಕವಿರುತ್ತದೆ. ಇದು ವರಮಾನ ಗುಣಕ. ಅನುಭೋಗ ಪ್ರವೃತ್ತಿಯು ಅಧಿಕವಾಗಿದ್ದರೆ ವರಮಾನದ ಏರಿಕೆಯ ಗುಣಕವು ಅಧಿಕವಾಗಿರುತ್ತದೆ. ಹೀಗೆ ಅನ್ನಭಾಗ್ಯವು ಒಂದು ವೇಳೆ ತೆರಿಗೆದಾರರ, ಅಂದರೆ ಉಳ್ಳವರ ಹಣದ ಮೂಲದಿಂದ ಬಂದಿದ್ದರೂ ಅದು ಸಮಾಜಕ್ಕೆ ಲೇಸನ್ನು ಮಾಡುತ್ತದೆ. ಅನ್ನಭಾಗ್ಯದ ಮೂಲದಲ್ಲಿರುವ ಸಾಮಾನ್ಯ ಅರ್ಥಶಾಸ್ತ್ರದ ನಿಯಮವನ್ನು ನಾವು ತಿಳಿದುಕೊಳ್ಳಬೇಕು.

**ಅನ್ನಭಾಗ್ಯ ಉಚಿತವಾಗಿ ಅಂದರೆ ಪುಕ್ಕಟ್ಟೆಯಾಗಿ ನೀಡುತ್ತಿರುವ ಸರಕಲ್ಲ !**

ಕೇಂದ್ರ ಸರ್ಕಾರವು ರಿಯಾಯಿತಿ, ವಿನಾಯಿತಿ, ಉತ್ತೇಜನ ಮುಂತಾದ ಕ್ರಮಗಳ ಹೆಸರಿನಲ್ಲಿ ತೆರಿಗೆಯಲ್ಲಿ ಅನುಕೂಲ ಮಾಡಿಕೊಡುತ್ತಿದೆ. ಹೀಗೆ ಕೇಂದ್ರ ಸರ್ಕಾರವು ಕೈಬಿಟ್ಟ ವಾರ್ಷಿಕ ತೆರಿಗೆ ಮೊತ್ತ ೨೦೧೩-೧೪ರಲ್ಲಿ ರೂ. ೫.೭೩ ಲಕ್ಷ ಕೋಟಿ. ಇದು ಕೈಬಿಟ್ಟ ತೆರಿಗೆಯಲ್ಲ. ಇದು ಉದ್ದಿಮೆರಂಗವನ್ನು ಉತ್ತೇಜಿಸುವ ಪರಿ ಎಂದು ಇದನ್ನು ಸಮರ್ಥಿಸಿಕೊಳ್ಳಲಾಗುತ್ತಿದೆ. ಇದೇ ರೀತಿಯಲ್ಲಿ ಕರ್ನಾಟಕ ಸರ್ಕಾರವು ವಿದ್ಯುಚ್ಛಕ್ತಿ ಬಳಕೆಗೆ ನೀಡುತ್ತಿರುವ ಸಬ್ಸಿಡಿ ರೂ. ೫೦೦೦ ಕೋಟಿ ಮೀರುತ್ತದೆ. ಸರ್ಕಾರಿ ಅಧಿಕಾರಿಗಳು, ಜನಪ್ರತಿನಿಧಿಗಳು, ಮಂತ್ರಿಗಳು ಬಳಸುತ್ತಿರುವ ವಾಹನ ಮತ್ತು ಇಂಧನದ ಖರ್ಚಿನ ಮೊತ್ತ ಅದೆಷ್ಟೋ ಅಂಕಿಗಳನ್ನು ಮೀರುತ್ತದೆ. ಇದಾವುದರ ಬಗ್ಗೆಯೂ ನಾವು ಪ್ರಶ್ನೆ ಮಾಡುತ್ತಿಲ್ಲ.

**ಕೋಷ್ಟಕ ೧. ಕೇಂದ್ರ ಸರ್ಕಾರವು ಉಳ್ಳವರಿಗೆ ಬಿಟ್ಟುಕೊಟ್ಟ ತೆರಿಗೆ ಮೊತ್ತ (ಕೋಟಿ ರೂಪಾಯಿಗಳಲ್ಲಿ)**

| ಕ್ರ. ಸಂ. | ವಿವರಗಳು | ೨೦೧೦-೧೧ | ೨೦೧೧-೧೨ | ೨೦೧೨-೧೩ | ೨೦೧೩-೧೪ |
|---|---|---|---|---|---|
| ೧. | ಕಾರ್ಪೊರೇಟ್ ತೆರಿಗೆ | ೫೭೯೧೨ | ೬೧೭೬೫ | ೬೮೭೨೦ | ೭೬೧೧೬ |
| ೨. | ವೈಯಕ್ತಿಕ ವರಮಾನ ತೆರಿಗೆ | ೩೬೮೬೨ | ೩೯೩೭೫ | ೩೩೪೫೩೬ | ೪೦೪೧೪ |
| ೩. | ಅಬಕಾರಿ ಸುಂಕ | ೧೯೨೨೨೭ | ೧೯೫೫೯೦ | ೨೦೯೯೪೦ | ೧೯೫೬೭೯ |
| ೪. | ಕಸ್ಟಮ್ಸ್ ಸುಂಕ | ೧೭೨೭೪೦ | ೨೩೬೮೫೨ | ೨೫೪೦೩೯ | ೨೬೦೭೧೪ |
| ೫. | ಒಟ್ಟು | ೪೫೯೭೪೧ | ೫೩೩೫೮೨ | ೫೬೬೨೩೫ | ೫೭೨೯೨೩ |

**ಮೂಲ :** ಕೇಂದ್ರ ಸರ್ಕಾರದ ಬಜೆಟ್ ದಾಖಲೆಗಳು.

ನಮ್ಮ ದೇಶದಲ್ಲಿ ೨೦೦೪ರಿಂದ ೨೦೧೫ರ ಅವಧಿಯಲ್ಲಿ ಉದ್ದಿಮೆಗಳು ಮಾಡಿದ ರೂ. ೨.೧೧ ಲಕ್ಷ ಕೋಟಿ ಸಾಲವನ್ನು ಸಾರ್ವಜನಿಕ ಬ್ಯಾಂಕುಗಳು ಮನ್ನ ಮಾಡಿವೆ. ನಮ್ಮ ದೇಶದಲ್ಲಿ ಬ್ಯಾಂಕುಗಳಿಂದ ಸಾಲ ಪಡೆದು ಅವುಗಳಿಗೆ ಅದನ್ನು ಹಿಂದಿರುಗಿಸದಿರುವ ಬೃಹತ್ ಕೈಗಾರಿಕಾ ಕುಟುಂಬಗಳ ಸಾಲದ ಒಟ್ಟು ಮೊತ್ತ ರೂ. ೫೭೩೬೮೨ ಕೋಟಿ ಎಂದು ಅಂದಾಜು ಮಾಡಲಾಗಿದೆ.  ಭಾರತೀಯ ರಿಸರ್ವ್ ಬ್ಯಾಂಕ್ ಪ್ರಕಾರ ೨೦೧೫-೧೬ರಲ್ಲಿ ಸಾರ್ವಜನಿಕ ವಲಯದ ಬ್ಯಾಂಕುಗಳು ಮನ್ನ ಮಾಡಿರುವ ಸಾಲದ ಮೊತ್ತ ರೂ. ೫೯೫೪೭ ಕೋಟಿ (ವಿವರಗಳಿಗೆ ನೋಡಿ ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್, ಏಪ್ರಿಲ್ ೧೨, ೨೦೧೬). ಬ್ಯಾಂಕುಗಳಿಗೆ ಸಾಲವನ್ನು ವಾಪಸ್ಸು ನೀಡದ ಕಂಪನಿಗಳ ಹೆಸರನ್ನು ಬಹಿರಂಗಪಡಿಸಿದರೆ ಅದು ಆರ್ಥಿಕತೆಯ ಮೇಲೆ ಹಾನಿಕಾರಕ ಪರಿಣಾಮ ಬೀರುತ್ತದೆ ಎಂದು ಹೇಳುತ್ತಾ ಆರ್‌ಬಿಐ ಇಂತಹ ಕಂಪನಿಗಳ ಹೆಸರನ್ನು ಗೋಪ್ಯವಾಗಿಡುವಂತೆ ಸರ್ವೋಚ್ಚ ನ್ಯಾಯಾಲಯಕ್ಕೆ ಅಫಿಡವಿಟ್ ನೀಡಿದೆ. ಈ ಸಂಗತಿಗಳ ಬಗ್ಗೆ ಅನ್ನಭಾಗ್ಯವನ್ನು ಉಗ್ರವಾಗಿ ವಿರೋಧಿಸುವ ಟಿ. ವಿ. ಮೋಹನ್ ದಾಸ್ ಪೈ ಮತ್ತು ಅವರಂತಹ ಘನ ಅರ್ಥಶಾಸ್ತ್ರಜ್ಞರು ಮಾತನಾಡುವುದಿಲ್ಲ.

ಏಕೆಂದರೆ ಇವೆಲ್ಲವೂ ಉಳ್ಳವರಿಗೆ ನೀಡುತ್ತಿರುವ ಅನುಕೂಲ. ಉಳ್ಳವರಿಗೆ ವೆಚ್ಚ ಮಾಡಿದರೆ ಅದು ಉತ್ಪಾದಕ ಕ್ರಿಯೆ. ಉಳಿದವರಿಗೆ ವೆಚ್ಚ ಮಾಡಿದರೆ ಅದು ಅನುತ್ಪಾದಕ ! ಬ್ಯಾಂಕುಗಳು ಉದ್ದಿಮೆದಾರರಿಂದ ಬರುವ ಸಾಲವನ್ನು ಮನ್ನಾ ಮಾಡುವುದು ಉತ್ಪಾದಕ, ಆದರೆ ವಂಚಿತರಿಗೆ, ದುಸ್ಥಿತಿಯಲ್ಲಿರುವವರಿಗೆ, ಪ್ರತ್ಯೇಕತೆಯನ್ನು ಅನುಭವಿಸುತ್ತಿರುವವರಿಗೆ ಅನ್ನಭಾಗ್ಯ ಯೋಜನೆ ನೀಡಿದರೆ ಅದು ಅನುತ್ಪಾದಕ. ಈ ಬಗೆಯ ಅಸಮಾನತೆಯನ್ನು ಊರ್ಜಿತಗೊಳಿಸುವ ಮತ್ತು ಗಟ್ಟಿಗೊಳಿಸುವ ಸಂಗತಿಗಳು ಇಂದಿಗೂ ಮುಂದುವರಿದಿವೆ. ಇದು ನಮ್ಮೆದುರಿಗಿರುವ ದುರಂತ. ಅರ್ಥಶಾಸ್ತ್ರದ ನಿಯಮದ ಪ್ರಕಾರ ಕೂಲಿಕಾರರು ಎಷ್ಟು ಉತ್ಪನ್ನವನ್ನು ಉತ್ಪಾದಿಸುತ್ತಾರೋ ಅದಕ್ಕೆ ಸಮನಾಗಿ ಕೂಲಿ ಪಡೆಯಬೇಕು. ಆದರೆ ನಮ್ಮಲ್ಲಿ ಕೂಲಿ ಅತ್ಯಂತ ಕೆಳಮಟ್ಟದಲ್ಲಿದೆ. ಉಳ್ಳವರಲ್ಲಿ ಅದು ಅಧಿಕಮಟ್ಟದಲ್ಲಿದೆ. ಉಳಿದವರಲ್ಲಿ ಅದು ಕೆಳಮಟ್ಟದಲ್ಲಿದೆ. ಉಳ್ಳವರಿಗಾದರೆ ವೇತನ ಆಯೋಗವಿರುತ್ತದೆ. ನಿವೃತ್ತಿ ವೇತನವಿರುತ್ತದೆ. ತುಟ್ಟಿಭತ್ಯವಿರುತ್ತದೆ. ಅನೇಕ ಬಗೆಯ ವಿಮೆಯ ಸೌಲಭ್ಯಗಳಿರುತ್ತವೆ. ಆದರೆ ಕೂಲಿಕಾರರಿಗೆ ಸಂಬಂಧಿಸಿದಂತೆ ಆಯೋಗಗಳಿಲ್ಲ. ಕಾರ್ಮಿಕ ಕಲ್ಯಾಣ ಅನ್ನುವುದಿಲ್ಲ. ಇಂದು ಏನಿದ್ದರೂ



ಕಾರ್ಮಿಕ ಕಾನೂನುಗಳ ಸುಧಾರಣೆ (ಲೇಬರ್ ರಿಫಾರಮ್ಸ್) ಮಾತುಗಳು ಮುಖ್ಯವಾಗಿಬಿಟ್ಟಿವೆ. ಕೂಲಿಗೆ ಸಂಬಂಧಿಸಿದಂತೆ ದುಡಿಮೆಗಾರರು ಕಳೆದುಕೊಳ್ಳುತ್ತಿರುವ ಹಣವನ್ನು ಸರ್ಕಾರ ಸಬ್ಸಿಡಿ ಮೂಲಕ, ಜನಕಲ್ಯಾಣ ಕಾರ್ಯಕ್ರಮಗಳ ಮೂಲಕ ತುಂಬಿಕೊಡುತ್ತಿದೆ. ಇದು ಪುಕ್ಕಟೆ ನೀಡುವ ಸಂಗತಿಯಲ್ಲ.

**ಅನ್ನಭಾಗ್ಯ ಮತ್ತು ಜನಸಂಖ್ಯೆಯ ಬೆಳವಣಿಗೆ ಪ್ರಮಾಣ**

ಅನ್ನಭಾಗ್ಯ ಅನ್ನುವುದು ತಾತ್ಕಾಲಿಕ ಕ್ರಮ. ಇದು ಖಾಯಂ ಆದ ಸಂಗತಿಯಲ್ಲ. ಅನ್ನಭಾಗ್ಯದ ಬೇಡಿಕೆ ಮತ್ತು / ಅಥವಾ ಅನ್ನಭಾಗ್ಯದಲ್ಲಿ ಸರಬರಾಜು ಮಾಡುವ ಅಕ್ಕಿಯ ಪ್ರಮಾಣ ವರ್ಷ ಕಳೆದಂತೆ ಕಡಿಮೆಯಾಗುತ್ತಾ ಹೋಗುತ್ತದೆ. ಉದಾಹರಣೆಗೆ ಕರ್ನಾಟಕದ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ೧೯೯೧ರಿಂದ ೨೦೦೧ರಲ್ಲಿ ಶೇ. ೧೭.೬೦ರಷ್ಟಿದ್ದುದು ೨೦೦೧-೨೦೧೧ರಲ್ಲಿ ಶೇ. ೧೫.೬೫ಕ್ಕಿಳಿದಿದೆ. ಜನಸಂಖ್ಯೆಯಲ್ಲಿ ಜನನ ಪ್ರಮಾಣ ಮತ್ತು ಮರಣ ಪ್ರಮಾಣ ಸಮವಾಗುವ ಕ್ರಮವನ್ನು ಸೂಚಿಸುವ ಒಂದು ಸೂಚಿ ಒಟ್ಟು ಸಂತಾನೋತ್ಪತ್ತಿ ಪ್ರಮಾಣ. ಕರ್ನಾಟಕದ ಒಟ್ಟು ಸಂತಾನೋತ್ಪತ್ತಿ ಪ್ರಮಾಣ ೨ಕ್ಕಿಂತ ಕಡಿಮೆಯಾಗಿದೆ. ನಮ್ಮ ರಾಜ್ಯವು ಜನಸಂಖ್ಯೆಯ ನಿವ್ವಳ ಏರಿಕೆಯು ಶೂನ್ಯವಾಗುವ ಕಡೆಗೆ ವೇಗವಾಗಿ ಸಾಗುತ್ತಿದೆ. ಆದರೆ ಇಂದಿಗೂ ನಮ್ಮಲ್ಲಿ ಅನೇಕರು ಜನಸಂಖ್ಯೆಯ ತೀವ್ರಗತಿ ಬೆಳವಣಿಗೆಯು ಆರ್ಥಿಕ ದುಸ್ಥಿತಿಗೆ ಕಾರಣ ಎಂದು ವಾದ ಮಾಡುತ್ತಿರುತ್ತಾರೆ. ಇದು ತಪ್ಪು ಎಂಬುದನ್ನು ಅಂಕಿಸಂಖ್ಯೆಗಳು ಹೇಳುತ್ತಿವೆ. ಇಂದು ಕರ್ನಾಟಕದಲ್ಲಿ ಜನಸಂಖ್ಯೆಯ ಬೆಳವಣಿಗೆಯು ಆತಂಕದ ಸಂಗತಿಯಾಗಿ ಉಳಿದಿಲ್ಲ. ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ೨೦೦೧ರಿಂದ ೨೦೧೧ರಲ್ಲಿ ವಾರ್ಷಿಕ ಶೇ. ೧ಕ್ಕಿಂತ ಕಡಿಮೆಯಾಗಿದೆ. ಜನಸಂಖ್ಯೆಯ ಬೆಳವಣಿಗೆ ಪ್ರಮಾಣದಲ್ಲಿ ತೀವ್ರ ಕಡಿತ ಉಂಟಾಗಿದೆ. ಮುಂದೆ ೨೦೨೧ರಲ್ಲಿ ಇದು ಇನ್ನೂ ಕಡಿಮೆಯಾಗುವ ಸಾಧ್ಯತೆಯಿದೆ. ಅಂದರೆ ಅನ್ನಭಾಗ್ಯದಲ್ಲಿ ವಿತರಿಸಬೇಕಾದ ಅಕ್ಕಿಯ ಪ್ರಮಾಣ ಕಡಿಮೆ ಯಾಗುತ್ತದೆ. ನಮ್ಮ ರಾಜ್ಯದಲ್ಲಿ ಆಹಾರ ಪದಾರ್ಥದ ಉತ್ಪಾದನೆಯನ್ನು ಅಧಿಕತಮವಾಗಿ ಏರಿಸಬೇಕಾದ ಅಗತ್ಯವೂ ಬರುವುದಿಲ್ಲ. ಒಂದು ರೀತಿಯಲ್ಲಿ ಇದು ಸುಸ್ಥಿರಗತಿಗೆ ಸಾಗುವ ಕ್ರಮ. ಈ ಹಿನ್ನೆಲೆಯಲ್ಲಿ ಅನ್ನಭಾಗ್ಯದ ಬಗ್ಗೆ ಅಣಕವಾಡುವುದು ಅಗತ್ಯವಿಲ್ಲ, ಇದನ್ನು ತೆರಿಗೆಗಾರರ ಹಣದ ಲೂಟಿ ಅನ್ನುವ ಉಗ್ರ ಟೀಕೆಯ ಅಗತ್ಯವೂ ಇಲ್ಲ. ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ ೨೦೦೧-೨೦೧೧ರಲ್ಲಿ ಗ್ರಾಮೀಣ ಜನಸಂಖ್ಯೆಯ ಏರಿಕೆ ಪ್ರಮಾಣ ಶೇ. ೭.೪೮ರಷ್ಟಿದ್ದರೆ ನಗರ ಪ್ರದೇಶದ ಜನಸಂಖ್ಯೆಯ ಏರಿಕೆ ಪ್ರಮಾಣ ಶೇ. ೩೧.೫೪ರಷ್ಟಿದೆ.

**ಬರ ಮತ್ತು ಅನ್ನಭಾಗ್ಯ**

ಕಳೆದ ಮೂರು ನಾಲ್ಕು ವರ್ಷಗಳಿಂದ ನಮ್ಮ ರಾಜ್ಯದಲ್ಲಿ ಜನರು ಅನಾವೃಷ್ಟಿಯನ್ನು ಎದುರಿಸುತ್ತಿದ್ದಾರೆ. ಯಾವ ಜಿಲ್ಲೆ-ತಾಲ್ಲೂಕು ಬರಪೀಡಿತ, ಯಾವುದು ಅಲ್ಲ ಅನ್ನುವ ಭಿನ್ನತೆ ಸಾಧ್ಯವಿಲ್ಲವೇನೋ ಅನ್ನುವ ರೀತಿಯಲ್ಲಿ ಇದು ರಾಜ್ಯ ವ್ಯಾಪಿಯಾಗಿದೆ. ಇಷ್ಟಾದರೂ ಈ ಬರದ ತೀವ್ರತೆಯು ರಾಜ್ಯದ ಎಲ್ಲ ಭಾಗಗಳಲ್ಲೂ ಒಂದೇ ರೀತಿಯಲ್ಲಿದೆ ಎಂದು ಹೇಳಲು ಬರುವುದಿಲ್ಲ. ಬರ ಬಂದಾಗ ಸಮಾಜದ ಎಲ್ಲ ವರ್ಗದ ಜನರಿಗೂ ಅದರ ಪರಿಣಾಮ ತಟ್ಟುವುದಿಲ್ಲ. ಆ ಸಮಯದಲ್ಲಿ ಅನೇಕರು ಲಾಭ ಮಾಡಿಕೊಳ್ಳುವ ಸಾಧ್ಯತೆಯೂ ಇದೆ. ಪಿ. ಸಾಯಿನಾಥ್ ಅನ್ನುವ ಪ್ರಸಿದ್ಧ ಪತ್ರಕರ್ತ ಭಾರತದ ಅನೇಕ ಹಿಂದುಳಿದ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಬರವು ಉಂಟುಮಾಡಿರುವ ದುಸ್ಥಿತಿಯನ್ನು ಕುರಿತು ನಡೆಸಿದ ಅಧ್ಯಯನ ಕೃತಿಯ ಶೀರ್ಷಿಕೆ 'ಎವ್ವೆರಿಬಡಿ ಲವ್ಸ್ ಎ ಗುಡ್ ಡ್ರಾಟ್' ಅಂತ. ರಾಜ್ಯದ ಕಲಬುರಗಿ ವಿಭಾಗದ ಜಿಲ್ಲೆಗಳಲ್ಲಿ, ವಿಜಯಪುರ, ಬಾಗಲಕೋಟೆ ಜಿಲ್ಲೆಯಲ್ಲಿ ತುಮಕೂರು, ಚಿತ್ರದುರ್ಗ, ಕೋಲಾರ, ಚಾಮರಾಜನಗರ ಜಿಲ್ಲೆಗಳಲ್ಲಿ ಇದರ ತೀವ್ರತೆ ಅಧಿಕ. ಇವೆಲ್ಲ ಒಣ ಭೂಮಿ (ಸೆಮಿ ಅರಿಡ್) ಪ್ರದೇಶಗಳು. ರಾಜ್ಯ ಹಿಂದೆಯೂ ಬರವನ್ನು ಎದುರಿಸಿತ್ತು. ಆದರೆ ೧೯೭೨ರ ಬರದಲ್ಲಿ ಮುಖ್ಯ ಸಮಸ್ಯೆ ಇದ್ದುದು ಆಹಾರದ ಕೊರತೆ. ಆಹಾರದ ಹಾಹಾಕಾರ ಅಂದು ದಟ್ಟವಾಗಿತ್ತು. ಕೂಳಿಗಾಗಿ ಕಾಳಗಗಳು ನಡೆದಿದ್ದವು. ಆದರೆ ಇಂದು ಬರದಲ್ಲಿ ಮುಖ್ಯ ಸಮಸ್ಯೆ-ಕೊರತೆ ಅಂದರೆ ಕುಡಿಯುವ ನೀರಿನದ್ದಾಗಿದೆ. ನಿತ್ಯಹರಿದ್ವರ್ಣ ಕಾಡುಗಳಿಂದ ಕೂಡಿದೆ ಎಂದು ಹೇಳಲಾಗುತ್ತಿರುವ ಕೊಡಗು ಜಿಲ್ಲೆಯಲ್ಲಿ, ಕಾವೇರಿಯ ಮಡಿಲಲ್ಲಿರುವ ಮಂಡ್ಯ ಜಿಲ್ಲೆಯಲ್ಲಿ ನೀರಿನ ಸಮಸ್ಯೆಯಿದೆ. ತುಮಕೂರು ಜಿಲ್ಲೆಯಲ್ಲಿ ನೀರಿನ ಅಭಾವ ತೀವ್ರವಾಗಿದೆ. ಸಾವಿರಾರು ಗ್ರಾಮಗಳಿಗೆ, ಸಣ್ಣ-ಪುಟ್ಟ ಪಟ್ಟಣಗಳಿಗೆ ನೀರನ್ನು ಟ್ಯಾಂಕರುಗಳಲ್ಲಿ ಸರಬರಾಜು ಮಾಡಲಾಗುತ್ತಿದೆ. ಇಂದು ಆಹಾರದ ಕೊರತೆಗೆ ಸಂಬಂಧಿಸಿದ ಹಾಹಾಕಾರ ಇಲ್ಲದಿದ್ದರೆ ಅಥವಾ ಕಡಿಮೆಯಾಗಿದ್ದರೆ ಅದಕ್ಕೆ ಒಂದು ಮುಖ್ಯ ಕಾರಣ ಅನ್ನಭಾಗ್ಯ. ಬರವನ್ನು ಎದುರಿಸುವಲ್ಲಿ ಅನ್ನಭಾಗ್ಯ ಯೋಜನೆಯ ನಿರ್ಣಾಯಕ ಪಾತ್ರವಿದೆ. ಬಡವರಿಗೆ, ವೃದ್ಧರಿಗೆ (ಹಿರಿಯ ನಾಗರಿಕರಿಗೆ), ಮಹಿಳೆಯರಿಗೆ, ದುಡಿಮೆಗಾರರಿಗೆ ಇದೊಂದು ಸಂಜೀವಿನಿಯಾಗಿದೆ.

ಜನರು ದುಡಿಮೆಯನ್ನು ಅರಸಿಕೊಂಡು ನಗರಗಳಿಗೆ ಗುಳೆ ಹೋಗುತ್ತಿದ್ದಾರೆ. ಇದನ್ನು ವಲಸೆ ಎಂದು ಕೆಲವರು ಕರೆಯುತ್ತಾರೆ. ವಲಸೆಗೂ ಮತ್ತು ಗುಳೆಗೂ ಭಿನ್ನತೆಯಿದೆ. ವಲಸೆಯು ಉಳ್ಳವರ ಸಂಗತಿಯಾದರೆ ಗುಳೆಯು ಉಳಿದವರ ಸಂಗತಿ. ವಲಸೆಯು ಸರ್ವೇಸಾಮಾನ್ಯವಾಗಿ ಖಾಯಮಾದ ಸಂಗತಿಯಾದರೆ ಗುಳೆ ಅನ್ನುವುದು ತಾತ್ಕಾಲಿಕ ಸಂಗತಿ. ಗುಳೆ ಅನ್ನುವುದು ಡಿಸ್ಟ್ರೆಸ್ ಮೈಗ್ರೇಶನ್. ಇಂದು ಮತ್ತೊಂದು ಬಗೆಯ ವಲಸೆ ನಮ್ಮಲ್ಲಿ ರೂಪುಗೊಳ್ಳುತ್ತಿದೆ. ಬೆಳಿಗ್ಗೆ ಎದ್ದು ಗ್ರಾಮಗಳಿಂದ ಜನರು ಹತ್ತಿರದ ನಗರಗಳಿಗೆ ಹೋಗುತ್ತಾರೆ. ಅಲ್ಲಿ ನಿರ್ದಿಷ್ಟ ಸ್ಥಳದಲ್ಲಿ ಸೇರುತ್ತಾರೆ. ಅಲ್ಲಿಗೆ ಗುತ್ತಿಗೆದಾರರು ಬಂದು ಇವರನ್ನು ಕೆಲಸಕ್ಕೆ ಕರೆದುಕೊಂಡು ಹೋಗುತ್ತಾರೆ. ಮತ್ತೆ ಸಂಜೆ ಊರಿಗೆ ವಾಪಸ್ಸಾಗುತ್ತಾರೆ. ಇದನ್ನು ತಜ್ಞರು ಕಮ್ಯೂಟಿಂಗ್ ಮೈಗ್ರೇಶನ್ ಎಂದು ಕರೆಯುತ್ತಾರೆ. ಇದನ್ನು ನಾವು ಸಂಚಾರಿ ವಲಸೆ ಎಂದು ಕರೆಯಬಹುದು. ಇದರಲ್ಲಿ ಹೆಚ್ಚಿನ

## ಅಭಿನಂದನೆ....

ಕನ್ನಡ ಸಾಹಿತ್ಯ ಪರಿಷತ್ತಿನವರು ಕೊಡಮಾಡುವ 'ಕುವೆಂಪು ಸಿರಿಗನ್ನಡ ದತ್ತಿ ಪ್ರಶಸ್ತಿ'ಯು ಡಾ॥ ಪ್ರಭುಶಂಕರ್ ಅವರಿಗೆ ಲಭಿಸಿದೆ. ಲೇಖಕರಿಗೆ 'ನವಕರ್ನಾಟಕ' ಪ್ರಕಾಶನದ ಮತ್ತು 'ಹೊಸತು' ಬಳಗದ ಅಭಿನಂದನೆಗಳು.



# ಗಝಲ್




**ಹ**ಣೆಯ ತಿಲಕದಲಿ ಹರಿಯಬಿಟ್ಟ ಪಹರೆ

ಹಣೆಯ ತಿಲಕದಲಿ ಹರಿಯಬಿಟ್ಟ ಪಹರೆಯ ದಾಸ್ಯ ತೊಳೆಯಬೇಕು ಈ ಗಳಿಗೆ
ಆಳ ನಿಲುಕದ ನೀರ ತೇವ ಖಾಲಿಯಾಗಿಸಿ ಬದುಕ ತೇಲಿಸಬೇಕು ಈ ಗಳಿಗೆ

ಹಗಲ ನೊರೆಯಲಿ ನಮ್ಮ ಪಾಲಿನ ಬೆವರ ಮಿನುಗು ಹೊರತೆಗೆದು ಆಕಾಶದ
ನೀಲಿಯಲಿ ಚಂದ್ರ ತಾರೆಯರ ಒಡಲೊಳಗೆ ಕನಸ ತೇಲಿಸಬೇಕು ಈ ಗಳಿಗೆ

ಕಾಲ ಪರದೆಯ ಕಾವು ತಗ್ಗಿಸಿ ದೆಸೆಗೆಟ್ಟ ಮನದ ಮೂಲೆಯ ನುಡಿಯು
ಕಾವ್ಯವಾಗಿಸಿ ಜೀವರಸ ತುಂಬಿ ಮಕರಂದ ಹೀರಬೇಕು ಈ ಗಳಿಗೆ

ನೆಲದ ನುಡಿಗೆ ಎದೆಯ ಕಿವಿಯಾಗಿಸಿ ಹೃದಯ ನಾಡಿಗಳ ಜೋಕಾಲಿಗೆ
ವಸಂತದ ತೇರಕಟ್ಟಿ ಪರದೆಯ ಪಾತ್ರಗಳ ಮೈತುಂಬಿಸಬೇಕು ಈ ಗಳಿಗೆ

ಖಾಲಿಯಾದ ಬಿಂದುಗಳ ಬಂಧನದ ಕಿವಿಗಳೊಳಗೆ ಅರಿವಿನ ಹರಿಗೋಲನು
ಗಿರಿಯ ಎದೆಕವಚಗಳಲಿ ಬಿತ್ತಿ ಮನವ ತಣಿಸಬೇಕು ಈ ಗಳಿಗೆ

**ಕಿರಸೂರ ಗಿರಿಯಪ್ಪ**
ಕಿರಸೂರ (ಪೋಸ್ಟ್/ಗ್ರಾ)
ಬಾಗಲಕೋಟೆ ತಾಲೂಕ ಮತ್ತು ಜಿಲ್ಲೆ – ೫೮೭ ೧೧೧

ಸಂಖ್ಯೆಯಲ್ಲಿ ಮಹಿಳೆಯರೂ ಇದ್ದಾರೆ. ಕೆಲವೊಮ್ಮೆ ಮಕ್ಕಳೂ, ಅಂದರೆ ಬಾಲ ಕಾರ್ಮಿಕರೂ ಇರುತ್ತಾರೆ.

ಈ ಎಲ್ಲ ಬವಣೆ, ಕಷ್ಟಗಳಲ್ಲಿ ದುಡಿಮೆಗಾರರಿಗೆ ಒಂದು ರೀತಿಯ ರಕ್ಷಣೆಯನ್ನು ಅನ್ನಭಾಗ್ಯ ನೀಡುತ್ತದೆ. ಬರದ ಬವಣೆಯಲ್ಲಿರುವ ಕಾರ್ಮಿಕ ವರ್ಗಕ್ಕೆ ಅನ್ನಭಾಗ್ಯ ತಂಪನ್ನು ಎರೆಯುತ್ತಿದೆ. ಇದರ ಬಗ್ಗೆ ನಾವು ಅಸೂಯೆಪಡುವ, ಅಸಹ್ಯಪಡುವ, ಅನ್ಯಾಯ ಎಂದು ಕೂಗಾಡುವ ಅಗತ್ಯವಿಲ್ಲ. ಆಹಾರ ಭದ್ರತೆ ಅನ್ನುವುದು ಸಮಾಜದ ಜವಾಬ್ದಾರಿ. ಇದು ಸಂವಿಧಾನಾತ್ಮಕ ಹೊಣೆಗಾರಿಕೆ.

ಅನ್ನಭಾಗ್ಯವು ಜನರ ಹಕ್ಕೇ ವಿನಾ ದತ್ತಿ–ದಾನ ಅಥವಾ ಹಂಗಿನ ಸಂಗತಿಯಲ್ಲ. ಹಸಿವಿನಿಂದ ಮುಕ್ತರಾಗಿರುವುದು ಮಾನವ ಹಕ್ಕು. ಹಸಿವು ಅನ್ನುವುದು ಮಾನವ ಹಕ್ಕಿನ ಉಲ್ಲಂಘನೆ. ನಮ್ಮ ಸಂವಿಧಾನದ ಅನುಚ್ಛೇದ ೨೧ರಲ್ಲಿ ದೇಶದ ಪ್ರತಿಯೊಬ್ಬ ನಾಗರಿಕರಿಗೂ 'ಬದುಕುವ ಹಕ್ಕ'ನ್ನು ನೀಡಲಾಗಿದೆ. ಬದುಕುವ ಹಕ್ಕನ್ನು ವಿಸ್ತೃತವಾಗಿ ಪರಿಭಾವಿಸಿಕೊಳ್ಳುವ ಅಗತ್ಯವಿದೆ. ನಮ್ಮ ನ್ಯಾಯಾಂಗವೂ ಅನೇಕ ಸಂದರ್ಭಗಳಲ್ಲಿ ಬದುಕುವ ಹಕ್ಕಿನ ವ್ಯಾಪ್ತಿಯನ್ನು ವಿಸ್ತೃತಗೊಳಿಸಿದೆ. ಬದುಕುವ ಹಕ್ಕು ಅನ್ನುವುದು ಕೇವಲ ಭೌತಿಕವಾಗಿ ಬದುಕುವ ಸಂಗತಿಗೆ ಸಂಬಂಧಿಸಿದುದಲ್ಲ. ಬದುಕು ಅನ್ನುವುದು ಘನತೆಯಿಂದಿರಬೇಕು, ಅರ್ಥಪೂರ್ಣವಾಗಿರಬೇಕು, ಪರಿಪೂರ್ಣವಾಗಿರಬೇಕು, ಸಮಾನತೆಯಿಂದ ಕೂಡಿರಬೇಕು. ಬದುಕುವ ಹಕ್ಕು ಅನ್ನುವುದು ಜೀವನಾಧಾರ ಹಕ್ಕನ್ನು, ಆಹಾರದ ಹಕ್ಕನ್ನು, ಆರೋಗ್ಯದ ಹಕ್ಕನ್ನು ಒಳಗೊಂಡಿದೆ. ಇದೊಂದು ಸಂಯುಕ್ತ ಹಕ್ಕು. ಎಲ್ಲಕ್ಕಿಂತ ಮುಖ್ಯವಾಗಿ ಇದು ಇತ್ಯಾತ್ಮಕ (ಪಾಸಿಟಿವ್) ಹಕ್ಕು. ಹಸಿವು ಮುಕ್ತ ಕರ್ನಾಟಕವನ್ನು ಸಾಧಿಸಿಕೊಳ್ಳಲು ಮತ್ತು ಹಸಿವಿನಿಂದ ತಮ್ಮನ್ನು ತಾವು ಬಿಡುಗಡೆಗೊಳಿಸಿಕೊಳ್ಳಲು ಅಗತ್ಯವಾದ ಸಾಮರ್ಥ್ಯವನ್ನು ಜನರಿಗೆ ಒದಗಿಸಿ ಕೊಡಬೇಕಾಗುತ್ತದೆ. ಬದುಕುಳಿಯುವುದು ಸಾಧ್ಯವಾಗುವ ವಾತಾವರಣವನ್ನು ರೂಪಿಸುವುದು ಸರ್ಕಾರದ ಕರ್ತವ್ಯ. ಆಹಾರದ ಹಕ್ಕನ್ನು ನೀಡದಿದ್ದರೆ ಬದುಕುವ ಹಕ್ಕಿಗೆ ಅರ್ಥವೇ ಇರುವುದಿಲ್ಲ. ಈ ಕಾರಣದಿಂದ ಆಹಾರದ ಹಕ್ಕು ಬದುಕುವ ಹಕ್ಕಿನ ಅಂತರ್ಗತ ಭಾಗವೇ ಆಗಿದೆ.

ಹೊಟ್ಟೆ ತುಂಬಿದವರು ಮತ್ತು ಹೊಟ್ಟೆ ತುಂಬದಿರುವವರು ಎಂಬುದು ಅಮಾನವೀಯ ಅಸಮಾನತೆ. ಈ ಬಗೆಯ ಅಸಮಾನತೆಯನ್ನು ತಡೆಯುವ ಒಂದು ಕ್ರಮ ಅನ್ನಭಾಗ್ಯ. ಇಂದು ನಮ್ಮ ಸಮಾಜದಲ್ಲಿ ಅನೇಕರಿಗೆ ಹೊಟ್ಟೆ ಕರಗಿಸಿಕೊಳ್ಳುವುದೆ ಒಂದು ಸಮಸ್ಯೆಯಾಗಿದೆ. ಅದಕ್ಕಾಗಿ ಉಸಿರು ತಗೋ, ಉಸಿರು ಬಿಡು, ದಿನವೂ ಇಷ್ಟು ದೂರ ಓಡು, ಇಷ್ಟು ಹಣ ನೀಡಿ ಇಂತಿಂತಹ ಪೂಜೆ ಮಾಡು, ಇಂತಹ ಹಣ್ಣು ತಿನ್ನು, ಇಂತಹ ಹಣ್ಣು ತಿನ್ನಬೇಡ ಮುಂತಾದ ಕ್ರಮಗಳ ಮೂಲಕ ಹೊಟ್ಟೆ ಕರಗಿಸಿಕೊಳ್ಳಲು ಪರಿಹಾರ ನೀಡುವ ಸಂಸ್ಥೆಗಳು ನಾಯಿಕೊಡೆಗಳಂತೆ ನಮ್ಮ ನಗರಗಳಲ್ಲಿ ಹುಟ್ಟಿಕೊಳ್ಳುತ್ತಿವೆ. ಕಾರ್ಪೊರೇಟ್ ಸಂಸ್ಥೆಗಳಾಗಿ ಅವು ಬೆಳೆಯುತ್ತಿವೆ. ಇವೆಲ್ಲ ಇಂದು ಹಣ ಮಾಡುವ ಸಂಗತಿಗಳಾಗಿಬಿಟ್ಟಿವೆ. ಬಡವರಿಗೆ, ಕೂಲಿಕಾರರಿಗೆ, ದುಡಿಮೆಗಾರರಿಗೆ, ವಂಚಿತರಿಗೆ, ಅಂಚಿನಲ್ಲಿರುವವರಿಗೆ ಹೊಟ್ಟೆ ಹೊರೆಯುವುದು–ತುಂಬಿಸಿಕೊಳ್ಳುವುದು ಸಮಸ್ಯೆಯಾಗಿದ್ದರೆ ಉಳ್ಳವರಿಗೆ ಹೊಟ್ಟೆ ಕರಗಿಸಿಕೊಳ್ಳುವುದು ಸಮಸ್ಯೆಯಾಗಿದೆ. ಹೊಟ್ಟೆ ಹೊರೆಯುವವರಿಗೆ ದುಡಿಮೆಯೇ ಯೋಗ, ದುಡಿಮೆಯೇ ಧ್ಯಾನ. ಇವರಿಗೆ ಯಜ್ಞ–ಯಾಗಗಳು ಬೇಕಾಗಿಲ್ಲ. ಇವು ಉಳ್ಳವರ ಖಯಾಲಿಗಳು. ಇಂತಹ ಚಟುವಟಿಕೆಗಳಲ್ಲಿ ಹೆಚ್ಚಾಗಿ ಉಳ್ಳವರು ನಿರತರಾಗಿರುವುದು ಅಚ್ಚರಿಯ ಸಂಗತಿಯೇನಲ್ಲ.

ನಮ್ಮದು ಮೂಲತಃ ಅಸಮಾನತೆಯ, ಶ್ರೇಣೀಕೃತ ಸಮಾಜ. ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಅಭಿವೃದ್ಧಿ ನೀತಿ–ಕಾರ್ಯಕ್ರಮಗಳು ಸಮಾನತೆಯಿಂದ ಕೂಡಿದ್ದರೆ ಅಲ್ಲಿ ಅಸಮಾನತೆಯು ಮತ್ತಷ್ಟು ಉಲ್ಬಣಗೊಳ್ಳುತ್ತದೆಯೇ ವಿನಾ ಕಡಿಮೆಯಾಗುವುದಿಲ್ಲ. ಈ ಕಾರಣಕ್ಕೆ ಇಲ್ಲಿ ಸಾಮಾಜಿಕ ನ್ಯಾಯದ ಅಗತ್ಯವಿದೆ.

ಈ ಎಲ್ಲ ಹಿನ್ನೆಲೆಯಲ್ಲಿ ಅನ್ನಭಾಗ್ಯ ಯೋಜನೆಯನ್ನು ನೋಡಬೇಕು. ಕೇವಲ ಬರ ಪರಿಹಾರಕ್ಕೆ ಮಾತ್ರವಲ್ಲ. ಅಸಮಾನತೆಯನ್ನು ತೊಡೆಯಲು, ಅಪೌಷ್ಟಿಕತೆಯನ್ನು ನಿವಾರಿಸಲು, ಹಸಿವನ್ನು ಹೊಡೆದೋಡಿಸಲು ಅನ್ನಭಾಗ್ಯ ಬೇಕು. ಈ ಯೋಜನೆಯು ಎಲ್ಲ ಬಗೆಯ ದೋಷಗಳಿಂದ ಮುಕ್ತವಾಗಿದೆ ಎಂದು ತಿಳಿಯಬೇಕಾಗಿಲ್ಲ. ಆಹಾರ ಭದ್ರತೆ ಅನ್ನುವುದು ಕೇವಲ ಆಹಾರ ಬೆಳೆಗಳಿಗೆ ಮಾತ್ರ ಸೀಮಿತವಾಗ ಬೇಕಾಗಿಲ್ಲ. ಹೈನು, ಮಾಂಸ (ಕುರಿ, ಕೋಳಿ ಮತ್ತು ಹಂದಿ ಸಾಕಣೆ), ಮೀನು, ಹಣ್ಣು, ತರಕಾರಿಗಳು ಮುಂತಾದ ಪೂರಕ ಆಹಾರ ಸಂಗತಿಗಳ ಅಭಿವೃದ್ಧಿಯ ಬಗ್ಗೆಯೂ ಗಮನ ಹರಿಸಬೇಕು. ಇದು ಎರಡು ದೃಷ್ಟಿಯಿಂದ ಮಹತ್ವವಾದುದು. ಮೊದಲನೆಯದಾಗಿ ಹಸಿವನ್ನು ನೀಗಿಸುವುದು, ಎರಡನೆಯದಾಗಿ ಅಪೌಷ್ಟಿಕತೆಯನ್ನು ಎದುರಿಸುವುದು. ಅನ್ನಭಾಗ್ಯ ಯೋಜನೆಯಲ್ಲಿ ಅಕ್ಕಿಯ ಸೋರಿಕೆಯನ್ನು ತಡೆಯುವ ಬಗ್ಗೆ ಕ್ರಮಗಳನ್ನು ತೆಗೆದುಕೊಳ್ಳಬೇಕಾಗಿದೆ. ಅಪೌಷ್ಟಿಕತೆ ಅನ್ನುವುದು ಆರೋಗ್ಯ ಮತ್ತು ಶಿಕ್ಷಣಗಳನ್ನು ಒಳಗೊಂಡಿದೆ. ಈ ಸಂಗತಿಗಳ ಬಗ್ಗೆಯೂ ಗಮನ ಹರಿಸಬೇಕಾಗಿದೆ. ಕೇವಲ ಆಹಾರ ಭದ್ರತೆ ಸಾಕಾಗುವುದಿಲ್ಲ. ನಮಗೆ ಅಗತ್ಯವಾಗಿರುವುದು ಆರೋಗ್ಯ, ಶಿಕ್ಷಣ, ಸಮಾನತೆ, ಸಾಮಾಜಿಕ ನ್ಯಾಯ – ಹೀಗೆ ಎಲ್ಲವನ್ನು ಒಳಗೊಂಡ ಸಮಗ್ರ ಆಹಾರ ಭದ್ರತೆ. ಹಸಿವು ಮುಕ್ತ ಕರ್ನಾಟಕಕ್ಕೆ ಅನ್ನಭಾಗ್ಯ ಬೇಕು. ಅಸಮಾನತೆಯನ್ನು ತೊಲಗಿಸಲು ಅನ್ನಭಾಗ್ಯ ಅಗತ್ಯ. ಅಪೌಷ್ಟಿಕತೆಯನ್ನು ನಿವಾರಿಸಲು ಅನ್ನಭಾಗ್ಯ ಬೇಕು.

**ಡಾ|| ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ಸಮಾಲೋಚಕ, ನಾಲ್ಕನೆಯ ರಾಜ್ಯ ಹಣಕಾಸು ಆಯೋಗ, ಮೂರನೆಯ ಮಹಡಿ, ದಕ್ಷಿಣ ಭಾಗ ಖನಿಜ ಭವನ, ರೇಸ್‌ಕೋರ್ಸ್ ರೋಡ್
ಬೆಂಗಳೂರು – ೫೬೦ ೦೦೧







**ದಲಿತ ರಾಜಕೀಯ**

**(ಒಂದು ಸಚಿತ್ರ ದರ್ಶನ)**

*ಮೂಲ : ರಾಮ್ ಪುನಿಯಾನಿ*

*ಕನ್ನಡಕ್ಕೆ : ಸುಜ್ಞಾನಮೂರ್ತಿ*

**ಪುಟ : ೧೪೨**

**ಬೆಲೆ : ರೂ. ೧೨೦**

**ಲಡಾಯಿ ಪ್ರಕಾಶನ,** ಗದಗ – ೫೮೨ ೧೦೧

*ದಲಿತರ ಮೇಲೆ ದೌರ್ಜನ್ಯ, ಅಸ್ಪೃಶ್ಯತೆ, ವರ್ಣವ್ಯವಸ್ಥೆ : ಚಾರಿತ್ರಿಕ ಮೂಲ, ದಲಿತರು ಹಿಂದೂಧರ್ಮ ಹಿಂದುತ್ವ ವಾದ, ಸಾಮಾಜಿಕ ಬದಲಾವಣೆಗಾಗಿ ಹೋರಾಟಗಳು, ದಲಿತರಿಗೆ ಮೀಸಲಾತಿ, ಭಾರತದ ಸಂವಿಧಾನ ರಚನೆ ಮತ್ತು ದಲಿತ ಚಳವಳಿ: ಸವಾಲುಗಳು–ಹೋರಾಟ ಮಾರ್ಗಗಳು ಇವು ಕೃತಿಯ ಒಳಗಿನ ಶೀರ್ಷಿಕೆಗಳು. ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವ ದೇಶವೆಂದು ಹೇಳಿಕೊಳ್ಳುತ್ತಿರುವ ಭಾರತ ದೇಶದಲ್ಲಿ ಇಂದಿಗೂ ಜಾತಿಯ ಹೆಸರಿನಲ್ಲಿ ಅಪಮಾನ, ಅತ್ಯಾಚಾರ, ದೌರ್ಜನ್ಯಗಳು ನಿರಂತರವಾಗಿ ನಡೆಯುತ್ತಲೇ ಇವೆ. ಇದಕ್ಕೆ ಇತ್ತೀಚೆಗೆ ಗುಜರಾತಿನಲ್ಲಿ ದಲಿತರ ವಿರುದ್ಧ ನಡೆದ ಅತ್ಯಂತ ಹೇಯ ದೌರ್ಜನ್ಯದ ದಾಳಿಯೇ ಸಾಕ್ಷಿಯಾಗಿದೆ. 'ದೇಶ ಹೊಳೆಯುತ್ತಿದೆ' ಎನ್ನುವ ಮಾತನ್ನು ಹೇಳಿ ಜನರನ್ನು ಮೋಸಗೊಳಿಸಲಾಗುತ್ತಿದೆ. ದೇಶದ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಶೇಕಡ ೯೫ರಷ್ಟು ದೇವಾಲಯಗಳಲ್ಲಿ ದಲಿತರನ್ನು ಒಳಗೆ ಬಿಡುವುದಿಲ್ಲ. ದಲಿತರ ಹಕ್ಕುಗಳಿಗಾಗಿ ಹೋರಾಡಿದ ಶಾಹು ಮಹರಾಜ್, ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ, ಅಂಬೇಡ್ಕರ್, ಪೆರಿಯಾರ್ ರಾಮಸ್ವಾಮಿ ಮುಂತಾದವರ ಹೋರಾಟದ ಚಿತ್ರಣಗಳು ಸಹ ಇಲ್ಲಿ ಸೇರಿವೆ. ಲಡಾಯಿ ಪ್ರಕಾಶನ ಅನೇಕ ಉತ್ಕೃಷ್ಟ ಪುಸ್ತಕಗಳನ್ನು ಕನ್ನಡದ ಜನರಿಗೆ ಹಲವು ವರ್ಷಗಳಿಂದಲೂ ತಲುಪಿಸುತ್ತಾ ಬಂದಿದೆ. ಇದೂ ಕೂಡ ದಲಿತರ ಬಗೆಗಿನ ಒಂದು ಸಂಕ್ಷಿಪ್ತ ಮಾಹಿತಿ/ಅಥವಾ ದೇಶದಲ್ಲಿ ನಡೆಯುತ್ತಿರುವ ದೌರ್ಜನ್ಯಗಳ ಪಟ್ಟಿಯನ್ನು ಒಳಗೊಂಡಿದೆ.*

**ಲೇಖ ಲೋಕ – ೫** (ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ)

*ಪ್ರಧಾನ ಸಂಪಾದಕರು : ಡಾ॥ ವಸುಂಧರಾ ಭೂಪತಿ*

*ಸಂಪಾದಕರು / ಸಹ ಸಂಪಾದಕರು : ಡಾ॥ ಸಬಿಹಾ ಭೂಮೀಗೌಡ / ಆಶಾ ಹೆಗಡೆ*

**ಪುಟ : ೧೨೬** **ಬೆಲೆ : ರೂ. ೧೫೦**

**ಕರ್ನಾಟಕ ಲೇಖಕಿಯರ ಸಂಘ,** ಬೆಂಗಳೂರು

*'ಲೇಖ–ಲೋಕ, ಲೇಖಕಿಯರ ಜೀವನ ವೃತ್ತಾಂತ ಸಂಕ್ಷಿಪ್ತ ರೂಪದಲ್ಲಿ ಪರಿಚಯಿಸುವ ಲೇಖನ ಮಾಲೆ. ಲೇಖಕಿಯರೇ ಬರೆದು ಪ್ರಸ್ತುತಪಡಿಸಿರುವ ಅನುಭವ ಲೋಕ', ಎಂಬುದಾಗಿ ಪ್ರಧಾನ ಸಂಪಾದಕಿ ಡಾ॥ ವಸುಂಧರಾ ಭೂಪತಿಯವರು ತಮ್ಮ ಸಂಪಾದಕರ ನುಡಿಯಲ್ಲಿ ಹೇಳಿದ್ದಾರೆ. ಕೃತಿಯಲ್ಲಿ ೧೫ ಖ್ಯಾತ ಲೇಖಕಿಯರು ತಮ್ಮ ಜೀವನ ವೃತ್ತಾಂತವನ್ನು ೫ರಿಂದ ೧೫ ಪುಟಗಳ ಒಳಗೆ ಬರೆದಿದ್ದಾರೆ. ಕೆಲವರು ತಮ್ಮ ಬದುಕಿನ ಒಂದೆರಡು ಅಧ್ಯಾಯಗಳನ್ನು ಮಾತ್ರ ಬರೆದಂತೆ ತೋರಿದರೆ ಇನ್ನು ಕೆಲವರು ಸಂಪೂರ್ಣ ಆತ್ಮಕಥೆಯನ್ನು ಸಂಕ್ಷಿಪ್ತವಾಗಿ ಬರೆಯಲು ಪ್ರಯತ್ನಿಸಿದಂತೆ ತೋರುತ್ತದೆ. ಕೆಲವರ ಲೇಖನಗಳು ವ್ಯಕ್ತಿ ಪರಿಚಯಕ್ಕೆ ಸೀಮಿತಗೊಂಡಂತೆ ಕಾಣಿಸುತ್ತವೆ. ಮೀನಾ ಮೈಸೂರು, ಬಿ. ಎಂ. ರೋಹಿಣಿ, ಶ್ಯಾಮಲಾ ಮಾಧವ, ಕೆ. ನೀಲಾ, ಭಾರತಿ ಕಾಸರಗೋಡು ಮತ್ತು ಶಾಂತಾದೇವಿ ಕಣವಿ ಅವರು ಮಾತ್ರ ಸ್ವಲ್ಪ ಹೆಚ್ಚಾಗಿ ತಮ್ಮ ವೃತ್ತಾಂತಗಳನ್ನು ಬರೆದಿದ್ದಾರೆ. ಡಾ॥ ಎನ್. ಎಸ್. ಲೀಲಾ ಅವರ ೫ ಪುಟಗಳ ವೃತ್ತಾಂತವನ್ನು ಜಿ. ವಿ. ನಿರ್ಮಲಾ ನಿರೂಪಣೆ ಮಾಡಿದ್ದಾರೆ.*




**ಲೇಖ ಲೋಕ – ೬** (ಮಹಿಳಾ ಸಾಹಿತ್ಯ : ಒಂದು ಆತ್ಮ ಕಥಾನಕ)

*ಪ್ರಧಾನ ಸಂಪಾದಕರು : ಡಾ॥ ವಸುಂಧರಾ ಭೂಪತಿ*

*ಸಂಪಾದಕರು / ಸಹ ಸಂಪಾದಕರು : ಡಾ॥ ಬಿ. ಎನ್. ಸುಮಿತ್ರಾಬಾಯಿ / ಆಶಾ ಹೆಗಡೆ*

**ಪುಟ : ೧೫೦** **ಬೆಲೆ : ರೂ. ೧೫೦**

**ಕರ್ನಾಟಕ ಲೇಖಕಿಯರ ಸಂಘ,** ಬೆಂಗಳೂರು

*'ಲೇಖ–ಲೋಕ' ಲೇಖಕಿಯರ ಜೀವನ ವೃತ್ತಾಂತ ಸಂಕ್ಷಿಪ್ತ ರೂಪದಲ್ಲಿ ಪರಿಚಯಿಸುವ ಲೇಖನ ಮಾಲೆಯ ೬ನೇ ಮಾಲೆಯಲ್ಲಿ ೭ ಲೇಖಕಿಯರ ವೃತ್ತಾಂತಗಳು ಮಾತ್ರ ಪ್ರಕಟಗೊಂಡಿವೆ. ಡಾ॥ ವಿಜಯಾ (ನಿರೂಪಣೆ ಆಶಾ ಹೆಗಡೆ), ಹೇಮಲತಾ ಮಹಿಷಿ, ನಾಗಮಣಿ ಎಸ್. ರಾವ್, ಡಾ॥ ಮಲ್ಲಿಕಾ ಘಂಟಿ, ಡಾ॥ ಸಬಿಹಾ ಭೂಮೀಗೌಡ, ವಿಜಯಾ ಶ್ರೀಧರ್ ಮತ್ತು ಡಾ॥ ಎನ್. ಗಾಯತ್ರಿ ಅವರ ಬದುಕಿನ ವೃತ್ತಾಂತಗಳು ಇದರಲ್ಲಿ ಸೇರಿವೆ. ಡಾ॥ ಮಲ್ಲಿಕಾ ಘಂಟಿಯವರದು ೪೦ ಪುಟಗಳ ವೃತ್ತಾಂತ ಇದೆ. ಡಾ॥ ವಿಜಯಾ ಅವರು ಮಕ್ಕಳ ಸಮೇತ ಮನೆ ತೊರೆದು ಬಂದು ಪುರುಷಪ್ರಧಾನ ಸಮಾಜದಲ್ಲಿ ಎದ್ದು ನಿಲ್ಲುವಂತಹ ಸಾಧನೆ ಮಾಡಿರುವ ಸಂಕ್ಷಿಪ್ತ ಚಿತ್ರಣವಿದೆ. ಡಾ॥ ಮಲ್ಲಿಕಾ ಘಂಟಿ ಅವರು 'ಮರಾಠಿಯಲ್ಲಿ ಆತ್ಮಕಥೆಗಳು ಉಂಟುಮಾಡಿದ ತಲ್ಲಣಗಳಂತೆ ಕನ್ನಡದ ಆತ್ಮಕಥೆಗಳು ಮಾಡಿಲ್ಲ' ಎನ್ನುವ ಮಾತನ್ನು ಹೇಳುತ್ತಾರೆ. ಡಾ॥ ಎನ್. ಗಾಯತ್ರಿ ಅವರ 'ನನ್ನ ಬಹು ಪಾಲು ಬರವಣಿಗೆ ಕಮಿಷನ್ಡ್' ಎನ್ನುವ ಮಾತು ಎಲ್ಲಾ ಮಹಿಳಾ ಲೇಖಕಿಯರಿಗೆ ಅನ್ವಯಿಸುತ್ತದೆ ಎನ್ನಬಹುದೇನೊ?*

**ವೃತ್ತಿರಂಗಭೂಮಿಗೆ ಉತ್ತರಕರ್ನಾಟಕದ ಮಹಿಳೆಯರ ಕೊಡುಗೆ**

*ಡಾ॥ ದೇವಕನ್ನಿಕಾ ಡಿ. ನಗರಕರ*

**ಪುಟ : ೨೪೨** **ಬೆಲೆ : ರೂ. ೨೫೦**

**ಅಜೀತ ಪ್ರಕಾಶನ,** ವಿಜಯಪುರ




*ಡಾ॥ ದೇವಕನ್ನಿಕಾ ಡಿ. ನಗರಕರ ಅವರು ಕೈಗೊಂಡ ಕ್ಷೇತ್ರಕಾರ್ಯದ ಪಿಎಚ್.ಡಿ. ಮಹಾಪ್ರಬಂಧ ಇದಾಗಿದ್ದು 'ವೃತ್ತಿರಂಗ ಭೂಮಿಗೆ ಉತ್ತರ ಕರ್ನಾಟಕದ ಮಹಿಳೆಯರ ಕೊಡುಗೆ'ಯ ಶೀರ್ಷಿಕೆಯ ಕೆಳಗೆ ಮುಖ್ಯವಾಗಿ ಕಲಾವಿದೆಯರ ಸಂದರ್ಶನ, ವಿದ್ವಾಂಸರೊಡನೆ ಸಂವಾದ, ರಂಗಕರ್ಮಿಗಳೊಡನೆ ಮಾಡಿದ ಚರ್ಚೆ ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ. ಒಂದು ಮಹಾಪ್ರಬಂಧದ ಮೂಲ ಸ್ವರೂಪದಂತೆ ಇಲ್ಲಿಯೂ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನದೊಂದಿಗೆ ಪ್ರಾರಂಭವಾಗುತ್ತದೆ. ಉತ್ತರ ಕರ್ನಾಟಕದ ಭಾಗಗಳಲ್ಲಿ ರಂಗಭೂಮಿಯ ಉಗಮ ಮತ್ತು ವಿಕಾಸ ಹಾಗೂ ಉತ್ತರ ಕರ್ನಾಟಕದ ರಂಗಭೂಮಿಯ ಚರಿತ್ರೆಯ ಎರಡು ಅಧ್ಯಾಯಗಳು ಇವೆ. 'ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ ಮಹಿಳೆಯರ ಹಾಗೂ ಅವರ ಕೊಡುಗೆ' ಅಧ್ಯಾಯ ವಿಶೇಷವಾಗಿದ್ದು ೧೧೦ ಪುಟಗಳನ್ನು ಒಳಗೊಂಡಿದೆ. ಇದರಲ್ಲಿ ಹೆಚ್ಚು ಮಹಿಳೆಯರನ್ನು ನೀಡಿದ ಹಳ್ಳಿಗಳು ಮತ್ತು ಅವರು ನಾಟಕಕ್ಕೆ ನೀಡಿದ ಒಟ್ಟಾರೆ ಕೊಡುಗೆಯನ್ನು ವಿವರಿಸಲಾಗಿದೆ. ಈ ಎಲ್ಲಾ ಮಹಿಳೆಯರು ಮೂಲವಾಗಿ ದೇವದಾಸಿಯರು ಮತ್ತು ದಲಿತರಾಗಿರುವುದು ವಿಶೇಷ. ಅಂದರೆ ಕಲೆ, ಸಾಹಿತ್ಯವನ್ನು ಬೆಳೆಸಿ ಉಳಿಸಿಕೊಂಡು ಬಂದಿರುವವರು ಇವರೇ. ತಮ್ಮ ಬದುಕಿಗೆ ಯಾವುದೇ ಆಧಾರ ಇಲ್ಲದ ಕಾಲದಲ್ಲಿ ಇವರು ಅಂಗಭೋಗದ, ರಂಗಭೋಗದ ವೇಶ್ಯೆಯರಾಗಿ ಬದುಕುವ ದಾರಿಯನ್ನು ಕಂಡುಕೊಂಡವರು ಎನ್ನುವ ಲೇಖಕಿಯ ಮಾತು ಓದುಗರನ್ನು ಕಾಡುತ್ತದೆ.*

*– ಡಾ॥ ಎಂ. ವೆಂಕಟಸ್ವಾಮಿ*

*ಕಸವನಹಳ್ಳಿ ರಸ್ತೆ, ಬೆಂಗಳೂರು – ೫೬೦ ೦೩೫*

ಸಾಂಪ್ರದಾಯಿಕ ಸಮಾಜದ ಎಲ್ಲ ಪ್ರತಿರೋಧಗಳ ನಡುವೆಯೂ ಮಹಿಳಾ ಶಿಕ್ಷಣದ ಚಳುವಳಿಯನ್ನು ಎತ್ತಿ ಹಿಡಿದ ಸಾವಿತ್ರಿಬಾಯಿ ಫುಲೆ 'ಶಿಕ್ಷಣವೊಂದೇ ಮನುಷ್ಯನ ಅಜ್ಞಾನ ಮತ್ತು ಅಮಾನವೀಯ ವರ್ತನೆಯನ್ನು ಹೋಗಲಾಡಿಸಲು ಸಾಧ್ಯ' ಎಂದು ಪ್ರತಿಪಾದಿಸಿದರು. ಅದಕ್ಕಾಗಿ ಅವರು ಬಹಳ ಕಷ್ಟಪಡಬೇಕಾಯಿತು. ಮೊದಲಿಗೆ ಇದಕ್ಕೆ ವಿರೋಧ ಕುಟುಂಬದೊಳಗೇ ಹುಟ್ಟಿತು. ಮಹಿಳಾ ಶಿಕ್ಷಣದ ವಿಚಾರವನ್ನು ಸ್ವಲ್ಪವೂ ಸಮ್ಮತಿಸದ ಜ್ಯೋತಿಬಾ ಫುಲೆಯವರ ತಂದೆಯವರು ಮಗ ಮತ್ತು ಸೊಸೆಯನ್ನು ಕುಟುಂಬದಿಂದ ಹೊರಹಾಕಿದರು. ಸಾವಿತ್ರಿಬಾಯಿಯವರ ತವರಿನಲ್ಲೂ ಇದಕ್ಕೆ ವಿರೋಧ ವ್ಯಕ್ತವಾಯಿತು. ಇದಾವುದೂ ಫುಲೆ ದಂಪತಿಗಳ ಹೋರಾಟದ ಕಿಚ್ಚನ್ನು ನಂದಿಸಲಿಲ್ಲ.

"೧೮೪೮ – ಎರಡು ಕಾರಣಗಳಿಗಾಗಿ ಕ್ರಾಂತಿಕಾರಿ ವರ್ಷ ಎಂದು ನಾವು ಗುರುತಿಸುತ್ತೇವೆ. ಒಂದು, ಇಡೀ ಜಗತ್ತನ್ನೇ ಅಲುಗಾಡಿಸಿದ, ಸಹಸ್ರಾರು ದೀನದಲಿತರ ಬದುಕನ್ನು ಪ್ರಭಾವಿಸಿದ ಮತ್ತು ಬದಲಾಯಿಸಿದ 'ಕಮ್ಯುನಿಸ್ಟ್ ಪ್ರಣಾಳಿಕೆ'ಯನ್ನು ಮಾರ್ಕ್ಸ್ ಮತ್ತು ಏಂಗೆಲ್ಸ್ ಪ್ರಕಟಿಸಿದ ವರ್ಷವಾದರೆ, ಮತ್ತೊಂದು ಮಹಾರಾಷ್ಟ್ರದ ಪುಣೆಯಲ್ಲಿ ಕರ್ಮಠ ಬ್ರಾಹ್ಮಣಶಾಹಿಯ ವಿರೋಧ ಮತ್ತು ಅವರ ಪ್ರತಿಭಟನೆಯನ್ನು ಲೆಕ್ಕಿಸದೆ ಬಾಲಕಿಯರ ಶಾಲೆಯನ್ನು ಆರಂಭಿಸುವ ಮೂಲಕ ಸಾವಿತ್ರಿಬಾಯಿ ಫುಲೆಯವರು ಭಾರತದಲ್ಲಿ ಸಾಮಾಜಿಕ ಕ್ರಾಂತಿಗೆ ನಾಂದಿ ಹಾಡಿದ ಚರಿತ್ರಾರ್ಹ ವರ್ಷ." ಹೀಗೆಂದು ನುಡಿದವರು ಸಮಾಜವಾದಿ ಚಿಂತಕ ಪ್ರೊ॥ ಮಧು ದಂಡವತೆ.

೧೮೫೨ರಲ್ಲಿ ಬ್ರಿಟಿಷ್ ಸರ್ಕಾರದ ಶಿಕ್ಷಣ ಇಲಾಖೆ ಸಾವಿತ್ರಿಬಾಯಿಯವರನ್ನು 'ಮಾದರಿ ಶಿಕ್ಷಕಿ' ಎಂದು ಸನ್ಮಾನಿಸಿತು. ನಂತರ, ಸಾವಿತ್ರಿಬಾಯಿಯವರ ಶಾಲೆಗಳಲ್ಲಿ ಕಲಿತ ೨೩೭ ಮಂದಿ ವಿದ್ಯಾರ್ಥಿನಿಯರು ೧೮೫೩ರಲ್ಲಿ ಪುಣೆಯ ಕಾಲೇಜಿನಲ್ಲಿ ಪರೀಕ್ಷೆ ಬರೆಯುತ್ತಾರೆ. ಹೀಗೆ ಪರೀಕ್ಷೆ ಬರೆಯಲು ಹೋದ ಹೆಣ್ಣುಮಕ್ಕಳ ಬಗ್ಗೆ ಸಾರ್ವಜನಿಕವಾಗಿ ಅದೆಷ್ಟು ಕುತೂಹಲ, ಆಸಕ್ತಿ ಇತ್ತೆಂದರೆ, ಈ ದೃಶ್ಯವನ್ನು ನೋಡಲು ಪುಣೆಯ ಕಾಲೇಜಿನ ಕಾಂಪೌಂಡಿನಲ್ಲಿ ೩೦೦೦ಕ್ಕೂ ಹೆಚ್ಚು ಜನ



# ಕ್ರಾಂತಿಯ ನಂದಾದೀಪ ಸಾವಿತ್ರಿಬಾಯಿ ಫುಲೆ

**ಡಾ॥ ಎನ್. ಗಾಯತ್ರಿ**

ನೆರೆದಿದ್ದರಂತೆ ! ಹೀಗೆ ಒಂದೂವರೆ ದಶಕದ ಹಿಂದೆಯೇ ಮಹಿಳಾ ಶಿಕ್ಷಣದಲ್ಲಿ ಕ್ರಾಂತಿಯ ಅಲೆಯನ್ನು ಎಬ್ಬಿಸಿದ ಸಾವಿತ್ರಿಬಾಯಿ ಭಾರತದ ಮೊದಲ ಆದರ್ಶ ಶಿಕ್ಷಕಿ, ಸ್ತ್ರೀವಾದಿ ಲೇಖಕಿ ಮತ್ತು ಚಿಂತಕಿ.

ಹತ್ತೊಂಭತ್ತನೆಯ ಶತಮಾನದ ಈ ಅವಧಿಯ ಮಹಾರಾಷ್ಟ್ರದಲ್ಲಿದ್ದ ಪೇಶ್ವೆಯವರ ಆಡಳಿತ ಒಂದು ಅಂಧಕಾರ ಯುಗವನ್ನೇ ಸೃಷ್ಟಿಸಿತ್ತು. ಹೆಂಗಸರು ಗಂಡಿನ ಭೋಗಲಾಲಸೆಯ ಸರಕಾಗಿದ್ದರು. ಕೆಳಜಾತಿಯ ಹೆಣ್ಣುಗಳನ್ನು ಮೇಲುಡುಗೆ ಧರಿಸದೆ ನಗ್ನವಾಗಿ ನೃತ್ಯ ಮಾಡಲು ಒತ್ತಾಯಿಸಲಾಗುತ್ತಿತ್ತು. ಅಸ್ಪೃಶ್ಯರನ್ನು ಅತ್ಯಂತ ಕೀಳಾಗಿ ನಡೆಸಿಕೊಳ್ಳಲಾಗುತ್ತಿತ್ತು. ಬೆಳಗ್ಗೆ ಮತ್ತು ಸಂಜೆ ಅವರು ಮೇಲುಜಾತಿಯವರು ನಡೆಯುವ ರಸ್ತೆಯಲ್ಲಿ ಓಡಾಡುವಂತಿರಲಿಲ್ಲ. ಅವರ ಉದ್ದದ ನೆರಳು ಮೇಲುಜಾತಿಯವರ ಮೇಲೆ ಬಿದ್ದರೆ ಅವರಿಗೆ ಮೈಲಿಗೆಯಾಗಿಬಿಡಬಹುದೆಂಬ ನಂಬಿಕೆ ! ಅವರ ಸೊಂಟದ ಸುತ್ತ ಎಲೆಗಳ ಕೊಂಬೆಯನ್ನು ಸುತ್ತಿಕೊಂಡು ಓಡಾಡಬೇಕಿತ್ತು. ಅದರಿಂದ ಬೀದಿ ಸ್ವಚ್ಛವಾಗುತ್ತದೆಂಬ ಜಾಣತನ ! ಕುತ್ತಿಗೆಯ ಸುತ್ತ ಬಟ್ಟೆಯನ್ನು ಕಟ್ಟಿಕೊಳ್ಳಬೇಕು. ಅದರಿಂದ ಅವರ ಎಂಜಲು ನೆಲದ ಮೇಲೆ ಬೀಳುವುದಿಲ್ಲ. ರಸ್ತೆಯಲ್ಲಿ ಹೋಗುವಾಗ ಗಂಟೆಯನ್ನು ಅಲ್ಲಾಡಿಸುತ್ತ ಹೋಗಬೇಕಿತ್ತು. ಈ ಸದ್ದು ಕೇಳಿ ಅದೇ ರಸ್ತೆಯಲ್ಲಿ ಯಾರಾದರೂ ಮೇಲುಜಾತಿಯವರು ಬರುತ್ತಿದ್ದರೆ, ಅವರು ತಮ್ಮ ದಿಕ್ಕನ್ನೇ ಬದಲಿಸುತ್ತಿದ್ದರು. ಅಸ್ಪೃಶ್ಯರು ಮತ್ತು ಹೆಂಗಸರು ಮಂತ್ರಪಠಣವನ್ನು ಕಿವಿಯ ಮೇಲೆ ಬೀಳಿಸಿಕೊಳ್ಳುವಂತಿಲ್ಲ. ಸಮಾಜದ ಸಹಜೀವಿಯನ್ನು ಇದಕ್ಕಿಂತ ಹೆಚ್ಚು ಅವಮಾನಿಸುವುದಕ್ಕೆ ಸಾಧ್ಯವೇ ಇಲ್ಲವೆನ್ನುವಂತಿದ್ದ ಈ ಅಂಧಕಾರ ಕೂಪದಲ್ಲಿ ಬೆಳಕಿನ ಪಂಜು ಹಿಡಿದು ಬಂದವರು ಜ್ಯೋತಿಬಾ ಫುಲೆ. ದೇಶವನ್ನು ಆಳುತ್ತಿದ್ದ ಬ್ರಿಟಿಷರಿಗಿಂತ, ಸಮಾಜದಲ್ಲಿ ದಬ್ಬಾಳಿಕೆ ನಡೆಸುತ್ತಿದ್ದ ಹತ್ತಿರದ ಪೇಶ್ವೆಗಳೇ ಅವರಿಗೆ ದೊಡ್ಡ ಶತ್ರುಗಳಂತೆ ಕಂಡರು. ಅವರ ಸುತ್ತಮುತ್ತಲಿನ ಸನಾತನಿಗಳು ಸೃಷ್ಟಿಸಿದ್ದ ದೌರ್ಜನ್ಯದ, ಅಸಮಾನತೆಯ ವಿರುದ್ಧದ ಹೋರಾಟದ ಸಮರದಲ್ಲಿ ಅವರಿಗೆ ಶಿಕ್ಷಣವೇ ಅಸ್ತ್ರವಾಯಿತು. ಈ ಹೋರಾಟಕ್ಕೆ ಸಮಸಮವಾಗಿ ಸಾಥ್ ನೀಡಿದವರು ಅವರ ಬಾಳ ಸಂಗಾತಿ ಸಾವಿತ್ರಿಬಾಯಿ ಫುಲೆ.

ಕ್ರಾಂತಿಜ್ಯೋತಿ ಸಾವಿತ್ರಿಬಾಯಿ ಫುಲೆಯವರು ಈ ದೇಶದ ಆಧುನಿಕ ಶಿಕ್ಷಣದ ತಾಯಿ ಮತ್ತು ಸ್ತ್ರೀವಾದದ ಬೀಜ ಬಿತ್ತಿದವರು. ಈ ಮಹಾನ್ ಕಾಯಕಕ್ಕೆ ಸ್ಫೂರ್ತಿಯ ಸೆಲೆಯಾದವರು ಅವರನ್ನು ಸ್ವತಃ ತಾಯಿಯಂತೆ ಮಾರ್ಗದರ್ಶನ ನೀಡಿದ ಸುಗುಣಬಾಯಿ ಮತ್ತು ಸಾಂಗತ್ಯ ನೀಡಿದ ಗೆಳತಿ ಫಾತಿಮಾ ಶೇಕ್. ಸಣ್ಣ ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡಿದ್ದ ಜ್ಯೋತಿ ಬಾ ಫುಲೆಯವರನ್ನು ಬೆಳೆಸಿ ಜೋಪಾನ ಮಾಡಿದ್ದ ಅವರ ಸಂಬಂಧಿ ವಿಧವೆ ಸುಗುಣಬಾಯಿ ಕ್ಷೀರಸಾಗರ ಫುಲೆ ದಂಪತಿಗಳ ಬದುಕಿನಲ್ಲಿ ನಂದಾದೀಪವಾಗುತ್ತಾರೆ. ತಮ್ಮ ಮನೆಯಲ್ಲಿ ಅನಾಥ ಮಕ್ಕಳನ್ನು ಸಾಕುತ್ತಿದ್ದ ಮಿಸ್ಟರ್ ಜಾನ್ ಎಂಬ ಮಿಷನರಿಯ ಮನೆಯಲ್ಲಿ ಜೀವನೋಪಾಯಕ್ಕಾಗಿ ಕೆಲಸ ಮಾಡುತ್ತಿದ್ದ ಸುಗುಣಬಾಯಿ ಆ ಮಕ್ಕಳ ಪಾಲನೆ, ಪೋಷಣೆ ಮಾಡುತ್ತಲೇ ಮಾತನಾಡುವಷ್ಟು ಮಟ್ಟಿನ ಸ್ವಲ್ಪ ಇಂಗ್ಲಿಷ್ ಕಲಿಯುತ್ತಾರೆ. ಇದೇ ಮಿಷನರಿಯಲ್ಲಿ ಶಿಕ್ಷಣ ಪಡೆಯುವ ಜ್ಯೋತಿಬಾ ಫುಲೆ ಜ್ಞಾನದ ವಿಶಾಲ ವಿಶ್ವಕ್ಕೆ ತೆರೆದುಕೊಳ್ಳುವುದಲ್ಲದೆ, ನಿಸ್ವಾರ್ಥವಾದ ಮಾನವ ಪ್ರೀತಿಯನ್ನು ಮೈಗೂಡಿಸಿಕೊಳ್ಳುತ್ತಾರೆ. ಒಂಭತ್ತು ವರ್ಷದ ಸಾವಿತ್ರಿಬಾಯಿಯವರನ್ನು ತಮ್ಮ ಹದಿಮೂರನೇ ವಯಸ್ಸಿನಲ್ಲಿ



ಮದುವೆಯಾದ ಜ್ಯೋತಿಬಾ, ತನ್ನ ಸಾಕುತಾಯಿ ತನಗೆ ನೀಡಿದ ಅಕ್ಷರದ ಬೆಳಕನ್ನು ಮಡದಿ ಸಾವಿತ್ರಿಗೂ ಹಂಚುವ ಮೂಲಕ ಮಹಿಳಾ ಶಿಕ್ಷಣದ ಜ್ಞಾನಜ್ಯೋತಿಯ ಆರಂಭಕ್ಕೆ ಕಾರಣವಾಗುತ್ತಾರೆ.

ಸಾಂಪ್ರದಾಯಿಕ ಸಮಾಜದ ಎಲ್ಲ ಪ್ರತಿರೋಧಗಳ ನಡುವೆಯೂ ಮಹಿಳಾ ಶಿಕ್ಷಣದ ಚಳುವಳಿಯನ್ನು ಎತ್ತಿ ಹಿಡಿದ ಸಾವಿತ್ರಿಬಾಯಿ ಫುಲೆ 'ಶಿಕ್ಷಣವೊಂದೇ ಮನುಷ್ಯನ ಅಜ್ಞಾನ ಮತ್ತು ಅಮಾನವೀಯ ವರ್ತನೆಯನ್ನು ಹೋಗಲಾಡಿಸಲು ಸಾಧ್ಯ' ಎಂದು ಪ್ರತಿಪಾದಿಸಿದರು. ಅದಕ್ಕಾಗಿ ಅವರು ಬಹಳ ಕಷ್ಟಪಡಬೇಕಾಯಿತು. ಮೊದಲಿಗೆ ಇದಕ್ಕೆ ವಿರೋಧ ಕುಟುಂಬದೊಳಗೇ ಹುಟ್ಟಿತು. ಮಹಿಳಾ ಶಿಕ್ಷಣದ ವಿಚಾರವನ್ನು ಸ್ವಲ್ಪವೂ ಸಮ್ಮತಿಸದ ಜ್ಯೋತಿಬಾ ಫುಲೆಯವರ ತಂದೆಯವರು ಮಗ ಮತ್ತು ಸೊಸೆಯನ್ನು ಕುಟುಂಬದಿಂದ ಹೊರಹಾಕಿದರು. ಸಾವಿತ್ರಿಬಾಯಿಯವರ ತವರಿನಲ್ಲೂ ಇದಕ್ಕೆ ವಿರೋಧ ವ್ಯಕ್ತವಾಯಿತು. ಇದಾವುದೂ ಫುಲೆ ದಂಪತಿಗಳ ಹೋರಾಟದ ಕಿಚ್ಚನ್ನು ನಂದಿಸಲಿಲ್ಲ.

೧೮೪೮ರಲ್ಲಿ ಪುಣೆಯ ನಾರಾಯಣಪೇಟೆಯ ಬಿಂದೇವಾಡದಲ್ಲಿ ಪತಿ ಜ್ಯೋತಿಬಾ ಅವರೊಂದಿಗೆ ಸಾವಿತ್ರಿಬಾಯಿ ಫುಲೆ ಕೈಜೋಡಿಸಿ ಮೊದಲ ಬಾರಿಗೆ ಬಾಲಕಿಯರ ಶಾಲೆಯನ್ನು ಪ್ರಾರಂಭಿಸುತ್ತಾರೆ. ಅಕ್ಷರದ ಗುತ್ತಿಗೆ ತಮ್ಮದೆಂದುಕೊಂಡಿದ್ದ ಬ್ರಾಹ್ಮಣ ಜಾತಿಯ ಪ್ರಭೃತಿಗಳಿಗೆ ಈ ಶಾಲೆಯ ಆರಂಭ ಅವರ ಅಸ್ತಿತ್ವಕ್ಕೆ ಕೊಟ್ಟ ದೊಡ್ಡ ಪೆಟ್ಟು! ಅವರ ಆಲೋಚನೆಯನ್ನೇ ಹೊದ್ದ ಕೆಲ ಮಹಿಳೆಯರೂ ಶಿಕ್ಷಣ ಪಡೆಯುವುದು ಹೆಣ್ಣು ಕುಲಕ್ಕೇ ಮಾಡಿದ ಅಪಚಾರ ಎಂತಲೂ ಭಾವಿಸಿರಲೂ ಸಾಕು. ಒಟ್ಟಾರೆ ಎಲ್ಲರೂ ಸೇರಿ ಈ ಶಾಲೆಯ ಮಕ್ಕಳಿಗೆ ಪಾಠ ಕಲಿಸಲೆಂದು ಮನೆಯಿಂದ ನಡೆದುಹೋಗುತ್ತಿದ್ದ ಸಾವಿತ್ರಿಬಾಯಿಯವರಿಗೆ ಅಸಾಧ್ಯ ಕಿರುಕುಳ ನೀಡುತ್ತಾರೆ. ಮನ ನೋಯಿಸುವಂತಹ ಬೈಗಳಿಂದ ಹಿಡಿದು ಅವರ ಮೇಲೆ ಸಗಣಿ ಎರಚುವುದು, ಕಲ್ಲು ಎಸೆಯುವುದು ನಡೆದಿರುತ್ತದೆ. ಇದಾವುದೂ ಸಾವಿತ್ರಿಯವರ ದೃಢಸಂಕಲ್ಪವನ್ನು ಅಲುಗಾಡಿಸುವುದಿಲ್ಲ. ಬದಲಿಗೆ ಬದಲಿಸಲು ಬಗಲಿನಲ್ಲಿ ಬೇರೆ ಸೀರೆಯೊಂದನ್ನು ಹೊತ್ತು ಶಾಲೆಗೆ ಹೋಗಿ ತಮ್ಮ ಕಾಯಕವನ್ನು ಮುಂದುವರಿಸುತ್ತಾರೆ.

ಶಿಕ್ಷಣವೇ ಸಮಾಜದ ಅನಿಷ್ಟವನ್ನು ಹೋಗಲಾಡಿಸಲು ಇರುವ ಪ್ರಮುಖ ಅಸ್ತ್ರ ಎಂದು ನಂಬಿದ್ದ ಫುಲೆ ದಂಪತಿಗಳು ಸರಣಿ ಶಾಲೆಗಳನ್ನು ಆರಂಭಿಸುತ್ತಾರೆ. ಹೆಣ್ಣುಮಕ್ಕಳಿಗಾಗಿ 'ನೇಟಿವ್ ಫೀಮೇಲ್ ಶಾಲೆ' ಮತ್ತು ಅಸ್ಪೃಶ್ಯ ಜಾತಿಯ ಮಕ್ಕಳಿಗಾಗಿ 'ಸೊಸೈಟಿ ಫಾರ್ ಪ್ರಮೋಟಿಂಗ್ ಎಜುಕೇಷನ್ ಆಫ್ ಮಹಾರ್ಸ್ ಅಂಡ್ ಮಾಂಗ್ಸ್' ಶಾಲೆಗಳನ್ನು ಆರಂಭಿಸಿದ ಈ ದಂಪತಿಗಳು ಶಿಕ್ಷಣವನ್ನು ಎಂದೂ ಉದ್ಯಮವಾಗಿ ನೋಡಲಿಲ್ಲ. ಜ್ಯೋತಿಬಾ ಕುಟುಂಬ ನಿರ್ವಹಣೆಗಾಗಿ ಮಿಷನರಿ ಶಾಲೆಗಳಲ್ಲಿ ಅರೆಕಾಲಿಕ ಶಿಕ್ಷಕರಾಗಿ ಬೋಧಿಸಿದರೆ, ಸಾವಿತ್ರಿಬಾಯಿ ಯಾವ ಸಂಬಳವನ್ನೂ ಪಡೆಯದೆ, ಉಚಿತವಾಗಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಾರೆ.

ಮಹಿಳಾ ಶಿಕ್ಷಣವೆನ್ನುವುದು ಮಹಿಳೆಯರಿಗೆ ಅಸ್ಪೃಶ್ಯತೆಯ ವಿಷಯವಾಗಿದ್ದ ಆ ಕಾಲಘಟ್ಟದಲ್ಲಿ ಆಗಿನ ಸಮಾಜ ಸುಧಾರಕರು ಮಹಿಳಾ ಶಿಕ್ಷಣದ ಬಗ್ಗೆ ದನಿಯೆತ್ತಿದಾಗಲೂ, ಶಿಕ್ಷಣವು ಮಹಿಳೆಯರು ತಮ್ಮ ಸಾಮಾಜಿಕ, ಕೌಟುಂಬಿಕ ಪಾತ್ರಗಳನ್ನು ಇನ್ನೂ ಹೆಚ್ಚಿನ ದಕ್ಷತೆಯಿಂದ ನಿರ್ವಹಿಸುವಲ್ಲಿ ಸಹಕಾರಿಯಾಗುವುದೆಂಬ ವಿಷಯಕ್ಕೆ ಸೀಮಿತಗೊಳಿಸಿದ್ದರು. ಅದರಲ್ಲೂ ರಾಷ್ಟ್ರೀಯತಾವಾದಿಗಳು ಪ್ರಾಚೀನ ಕಾಲದ ಮಹಿಳೆಯ 'ಉನ್ನತ ಮಹಿಳಾ ಮಾದರಿ'ಯನ್ನು ಸೃಷ್ಟಿಸಿ ಬ್ರಿಟಿಷರ ಮುಂದೆ ತಮ್ಮ ಆರ್ಯ ಸಂಸ್ಕೃತಿಯ ಗರಿಮೆಯನ್ನು ವೈಭವಿಸುವುದರಲ್ಲೇ ಮುಂದಾಗಿದ್ದರು. ಈ ಉತ್ಸಾಹದಲ್ಲಿ ಮುಳುಗಿ ಹೋಗಿದ್ದ ಆರಂಭದ ರಾಷ್ಟ್ರೀಯತಾವಾದಿಗಳ ವಿಚಾರದ ಒಂದು ತುಣುಕನ್ನು ಲೋಕಮಾನ್ಯ ತಿಲಕರ ಈ ಮಾತುಗಳಲ್ಲಿ ಗಮನಿಸಬಹುದು : "ಹೆಣ್ಣುಮಕ್ಕಳ ಶಾಲೆಯ ಪಠ್ಯಕ್ರಮ ಸ್ವಚ್ಛತೆ ಮತ್ತು ಕಸೂತಿಗೆ ಸೀಮಿತವಾಗಿರಬೇಕು ಮತ್ತು ಸ್ಥಳೀಯ ಭಾಷೆಯಲ್ಲೇ ಇರಬೇಕು. ಹೆಣ್ಣುಮಕ್ಕಳು ಬೇರೆ ಪಠ್ಯಕ್ರಮವನ್ನು ಕಲಿತರೆ ರಾಷ್ಟ್ರೀಯತೆ ನಾಶವಾಗುತ್ತದೆ. ಇಂಗ್ಲಿಷ್ ಶಿಕ್ಷಣದಿಂದ ಮಹಿಳೆಯರ ಸ್ತ್ರೀತ್ವವೇ ನಾಶವಾಗಿ ಅವರ ಪ್ರಾಪಂಚಿಕ ಬದುಕು ನಾಶವಾಗುತ್ತದೆ. ಅದಲ್ಲದೇ, ಹಿಂದೂಗಳ ಧಾರ್ಮಿಕ ಭಾವನೆಗಳಿಗೂ ನೋವುಂಟಾಗುತ್ತದೆ. ಸ್ತ್ರೀಯರಿಗೆ ಇಂಗ್ಲಿಷ್ ಓದಲು ಕಲಿಸಿದರೆ ನಮ್ಮ ಅಮೂಲ್ಯ ಸಾಂಸ್ಕೃತಿಕ ಮೌಲ್ಯಗಳು ನಾಶವಾಗಿಹೋಗುತ್ತವೆ. ಇಂಗ್ಲಿಷ್ ಕಲಿಕೆಯಿಂದ ಮಹಿಳೆಯರಲ್ಲಿ ಅನೈತಿಕತೆ ಮತ್ತು ಅವಿಧೇಯತೆ ನೆಲೆಸುತ್ತದೆ." ಹೀಗೆಂದು ೧೮೮೭ರ ಸೆಪ್ಟೆಂಬರ್ ೦೨ರಂದು ಪ್ರಕಟವಾದ 'ಮರಾಠ' ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ ಬರೆದಿದ್ದಾರೆ. ಅವರು ೧೮೮೦ರಲ್ಲಿ ಆರಂಭವಾದ ಪುಣೆಯ ನ್ಯೂ ಇಂಗ್ಲಿಷ್ ಸ್ಕೂಲ್‌ನ ಸಹ ಸ್ಥಾಪಕರು, ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಇದಕ್ಕೆ ಭಿನ್ನವಾಗಿ ಸಾಗಿತ್ತು ಫುಲೆ ದಂಪತಿಗಳ ವಿಚಾರ ಸರಣಿ. ಮಹಿಳಾಶಿಕ್ಷಣವನ್ನೇ ತಮ್ಮ ಬದುಕಿನ ಹೋರಾಟದ ಮುಖ್ಯ ಸೂತ್ರವನ್ನಾಗಿ ಮಾಡಿಕೊಂಡ ಫುಲೆ ದಂಪತಿಗಳು ಮಹಿಳಾ ಶಿಕ್ಷಣವನ್ನು ನೀಡುವುದು ಸಾಮಾಜಿಕ ನ್ಯಾಯವೆಂದು ಬಗೆದರು. ಹೆಂಗಸರಿಗೆ ಮತ್ತು ಕೆಳಜಾತಿ ವರ್ಗಗಳಿಗೆ ವಿದ್ಯೆಯನ್ನು ನಿರಾಕರಿಸಿದ ಸನಾತನ ಹಿಂದೂ ಧರ್ಮಕ್ಕೆ ಪ್ರತಿಯಾಗಿ ಅವರಿಗೆ ಬ್ರಿಟಿಷರು ದೊಡ್ಡ ಜ್ಞಾನ ದಾನಿಗಳಾಗಿ ಕಾಣಿಸುತ್ತಾರೆ. "ಇಂಗ್ಲಿಷಮ್ಮ ನಮ್ಮಂಥೋರನ್ನ ಅಪ್ಪಿ ಹಿಡೀತಾಳೆ, ಕೆಳಬಿದ್ದೋರ್ನ ಮೇಲೆತ್ತಿ ಮೈದಡವಿ ಸಲಹುತ್ತಾಳೆ" ಎಂದು ತಮ್ಮ ಕವನದಲ್ಲಿ ಹೇಳುವ ಸಾವಿತ್ರಿಯವರ ವಿಚಾರ ಅಂದಿನ ರಾಷ್ಟ್ರೀಯತಾವಾದಿಗಳ ವಿಚಾರಕ್ಕಿಂತ ಭಿನ್ನವಾಗಿತ್ತು. ಅವರು ಶಾಲೆಗಳ ಪಠ್ಯಗಳಲ್ಲಿ ರೂಪಿಸಿದ ಶಿಕ್ಷಣ ನೀತಿಯಲ್ಲಿ ಜಾಗತಿಕ ಲಭ್ಯವಿರುವ ಆಧುನಿಕ ಶಿಕ್ಷಣವನ್ನು, ಪಠ್ಯವನ್ನು ಅಳವಡಿಸಿಕೊಳ್ಳುವುದೇ ಆಗಿತ್ತು. ಬೌದ್ಧಿಕವಾಗಿ ಮಕ್ಕಳಲ್ಲಿ ವಿಚಾರವನ್ನು ಹುಟ್ಟುಹಾಕುವ ಮತ್ತು ಪ್ರಶ್ನಿಸುವ ಮನೋಧರ್ಮವನ್ನು ಬೆಳೆಸುವಂತಹ ಕಲಿಕೆಯನ್ನು ಶಾಲಾ ಪಠ್ಯ ಒಳಗೊಂಡಿರಬೇಕೆಂಬುದು ಅವರ ಆಶಯವಾಗಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ಪಠ್ಯದಲ್ಲಿ ಸಾಮಾಜಿಕ ಸುಧಾರಣೆ ಮತ್ತು ಸಾಮಾಜಿಕ ನ್ಯಾಯವೆನ್ನುವುದು ಆದ್ಯತೆಯ ವಿಷಯವಾಗಬೇಕೆಂಬುದು ಅವರ ನಿಲುವಾಗಿತ್ತು. ಇಪ್ಪತ್ತೊಂದನೇ ಶತಮಾನದ ಇಂದಿನ ಶಾಲಾ ಪಠ್ಯಗಳಲ್ಲೂ ಈ ವಿಷಯಗಳು ಸಾಕಾರವಾಗಿಲ್ಲವೆನ್ನುವುದು ಮತ್ತು





ಅದಕ್ಕೆ ವ್ಯವಸ್ಥಿತ ಅಡೆತಡೆಗಳು ಒದಗಿಬರುತ್ತಿರುವುದನ್ನು ಗಮನಿಸಿದರೆ ಫುಲೆ ದಂಪತಿಗಳು ನೂರಿಪ್ಪತ್ತು ವರ್ಷಗಳ ಹಿಂದೆಯೇ ಅದೆಷ್ಟು ಪ್ರಗತಿಪರರಾಗಿ ಚಿಂತಿಸಿದ್ದರು ಎಂಬುದು ವ್ಯಕ್ತವಾಗುತ್ತದೆ.

ಹೆಣ್ಣಿನ ಬದುಕಿನಲ್ಲಿ ವಿವಾಹವೆನ್ನುವುದು ಮಹತ್ತರ ಬದಲಾವಣೆಯನ್ನು ತರುವ ಘಟನೆ. ಅವಳು ಬಯಸಲಿ, ಬಯಸದಿರಲಿ ಅದು ಬಂಧನವಾಗಿರುವ ಸಂದರ್ಭಗಳೇ ಹೆಚ್ಚು. ಹೆಣ್ಣಿನ ಆಸೆ, ಆಕಾಂಕ್ಷೆಗಳು, ಕಲಿಕೆ, ಸಾಮರ್ಥ್ಯಗಳು ಒಟ್ಟಾರೆಯಾಗಿ ಅವಳೆಲ್ಲ ಸೃಜನಶೀಲತೆಯನ್ನು ನಿರ್ಧರಿಸುವುದು ವಿವಾಹ ಸಂಸ್ಥೆಯಾಗಿರುತ್ತದೆ. ವರವೂ ಶಾಪವೂ ಆಗಬಹುದಾದ ವಿವಾಹ ಸಾವಿತ್ರಿಬಾಯಿ ಫುಲೆಯ ಬದುಕಿನಲ್ಲಿ ಜೀವನದ ದಾರಿ ತೋರಿದ ಭರವಸೆಯ ಬೆಳಕಾಯಿತು. ಅವರದು ಅನುರೂಪ ದಾಂಪತ್ಯವಾಯಿತು. ವಿವಾಹದಲ್ಲಿ ಸಾಮರಸ್ಯದ ಸಂಬಂಧಕ್ಕೆ ಅಗತ್ಯವೆನಿಸುವ ತಾತ್ವಿಕ ತಳಹದಿಯನ್ನು ಈ ದಂಪತಿಗಳು ಕೂಡಿ ರಚಿಸಿರುವ ಮಂಗಳಾಷ್ಟಕದಲ್ಲಿ ನೋಡಬಹುದು. ವರದಕ್ಷಿಣೆ ಪಿಡುಗಿನ ವಿರುದ್ಧ ಹೋರಾಡಲು ಸರಳ ಹಾಗೂ ಅಂತರ್‌ಜಾತಿಯ ವಿವಾಹವನ್ನು ಬೆಂಬಲಿಸಿದ ಫುಲೆ ದಂಪತಿಗಳ ಮಂಗಳಾಷ್ಟಕದ ಕೆಲವು ಸಾಲುಗಳನ್ನು ಗಮನಿಸಬಹುದು :

**ಮದುಮಗ :** ದೇವರ ಕಾನೂನಿನಂತೆ ನಿಮ್ಮ ಮನೆಯ ವಿಧಿವಿಧಾನಗಳನ್ನು ಅನುಸರಿಸು. ಸತ್ಯ ಎಲ್ಲಕ್ಕಿಂತ ದೊಡ್ಡದು. ಅದನ್ನು ಗೌರವಿಸು. ಅನಕ್ಷರಸ್ಥರಿಗೆ ಪಾಠ ಕಲಿಸು. ಬೋಧಿಸು. ಅವರಿಗೆ ಜ್ಞಾನವನ್ನು ಕೊಡು. ನಿನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ, ಎಂದು ವಚನ ನೀಡುತ್ತೇನೆ.

**ಮದುಮಗಳು :** ನಿನ್ನ ಮಾತುಗಳು ಚೆನ್ನಾಗಿವೆ. ನಿನ್ನ ವರ್ತನೆ ನನಗೆ ಹಿಡಿಸಿದೆ. ಮಹಿಳೆಯರಾದ ನಾವೆಲ್ಲಾ ಶೋಷಿತರು. ನನ್ನನ್ನು ಹೇಗೆ ಜೊತೆಯಾಗಿ ಕರೆದೊಯ್ಯುವೆ? ನಮಗೆ ಸ್ವಾತಂತ್ರ್ಯದ ಅನುಭವ ದೊರಕಿದೆ. ನಾವು ಆತ್ಮಗೌರವದಿಂದ ಬದುಕಲು ಇಚ್ಛಿಸುತ್ತೇವೆ. ಇದಕ್ಕಾಗಿ ಮಹಿಳೆಯರಿಗೆ ನೀವು ಹಕ್ಕನ್ನು ನೀಡುತ್ತೀರಾ ? ವಚನ ಕೊಡಿ.

**ಮದುಮಗ :** ನಾನು ಮಹಿಳೆಯರ ಹಕ್ಕಿಗಾಗಿ ಹೋರಾಡುತ್ತೇನೆ. ಯಾವುದೇ ಬೆಲೆ ತೆತ್ತಾದರೂ ಸರಿಯೇ ಎಲ್ಲಾ ಮಹಿಳೆಯರನ್ನು ಗೌರವಿಸುತ್ತೇನೆ. ನನ್ನ ಕರ್ತವ್ಯದ ಭಾಗವಾಗಿ ಇದನ್ನು ಮಾಡುತ್ತೇನೆ.

**ಮದುಮಗಳು :** ನಿಮ್ಮ ಮಾತುಗಳ ಮೇಲೆ ಭರವಸೆಯನ್ನು ಇಟ್ಟು ನಾನು ನಿಮ್ಮನ್ನು ಪತಿಯೆಂದು ಸ್ವೀಕರಿಸುತ್ತೇನೆ. ನಾವಿಬ್ಬರೂ ಒಟ್ಟಾಗಿ ಮಹಿಳೆಯರ ಹಕ್ಕಿಗಾಗಿ, ಸಬಲೀಕರಣಕ್ಕಾಗಿ ಹೋರಾಡೋಣ.

ಸುಲಗ್ನಾ ಸಾವಧಾನ

*(ಅನುವಾದ : ಶ್ರೀಪಾದ ಭಟ್)*

ಹೆಣ್ಣನ್ನು ಗೃಹಕೃತ್ಯಕ್ಕೆ ಮಾತ್ರ ಸೀಮಿತಗೊಳಿಸದೆ ಅವಳಿಗೊಂದು ಸ್ವತಂತ್ರ ವ್ಯಕ್ತಿತ್ವವನ್ನು ಕಲ್ಪಿಸುವ, ಅವಳಿಗೂ ಸಾಮಾಜಿಕ ವಲಯದಲ್ಲೊಂದು ಪಾತ್ರವನ್ನು ಗುರುತಿಸುವ ಈ ವಿವಾಹ ವಿಧಿ ಸಾಂಪ್ರದಾಯಿಕ ವಿವಾಹ ಆಚರಣೆಗಿಂತ ಭಿನ್ನವಷ್ಟೇ ಅಲ್ಲ, ಹೆಚ್ಚು ಅರ್ಥಪೂರ್ಣವಾಗಿದೆ. ಸಮಾಜದ ಒಳಿತೆಂಬುದರಲ್ಲಿ ವಿಶೇಷವಾಗಿ ದಮನಿತರಾದ ಮಹಿಳೆಯರ ಏಳಿಗೆಯೂ ಸೇರಿದೆ, ಎಂಬುದನ್ನು ಗುರುತಿಸುವ ಈ ವಿವಾಹದ ಮಂತ್ರಗಳು ಅತ್ಯಂತ ಉಚ್ಚಮಟ್ಟದ ಬೌದ್ಧಿಕ ಪ್ರಜ್ಞೆಯಿಂದ ಕೂಡಿದ್ದಾಗಿದ್ದು, ಫುಲೆ ದಂಪತಿಗಳು ಸಮಾಜಕ್ಕೆ ಕೊಟ್ಟ ಅಮೂಲ್ಯ ಕೊಡುಗೆಗಳ ಹಿಂದಿನ ತಾತ್ವಿಕ ನೆಲೆಯೂ ಆಗಿವೆ. ಬ್ರಾಹ್ಮಣ ಪುರೋಹಿತರ ನೆರವಿಲ್ಲದೆ ನಡೆಸಲಾದ ಈ ಮದುವೆ ಕ್ರಾಂತಿಕಾರಕ ಹೆಜ್ಜೆಯಾಗಿದ್ದವು. ಸತ್ಯಶೋಧಕ ಸಮಾಜದ ಮಹಿಳಾ ಘಟಕದ ಅಧ್ಯಕ್ಷೆಯಾಗಿದ್ದ ಸಾವಿತ್ರಿಬಾಯಿಯವರು ಯಾವುದೇ ಪೂಜಾರಿಗಳ ಮಧ್ಯವರ್ತಿಯಿಲ್ಲದ ಹಲವಾರು ಮದುವೆಗಳನ್ನು ಅನೇಕ ವಿರೋಧಗಳ ನಡುವೆಯೂ ಸಂಘಟಿಸಿದರು.

ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡುವುದರಿಂದ ಕುಟುಂಬ ನಾಶವಾಗುತ್ತದೆ ಎಂಬ ಮೂಢನಂಬಿಕೆಯನ್ನು ಹೋಗಲಾಡಿಸಲು ಕೇವಲ ಮೇಲ್ಮೈಯ ಸಮಾಜ ಸುಧಾರಣೆಯಿಂದ ಮಾತ್ರ ಸಾಧ್ಯವಿಲ್ಲ. ಅದಕ್ಕೆ ಸಮಾಜದ ಕ್ರಾಂತಿಕಾರಕ ಬದಲಾವಣೆಯ ಅಗತ್ಯವಿದೆಯೆಂದು ನಂಬಿದವರು ಫುಲೆ. ಅದಕ್ಕಾಗಿ ಸಮಾಜವನ್ನು ಸನಾತನಿಗಳ ಕಪಿಮುಷ್ಠಿಯಿಂದ, ವರ್ಣಾಶ್ರಮ ವ್ಯವಸ್ಥೆಯಿಂದ ಸಂಪೂರ್ಣವಾಗಿ ಮುಕ್ತಗೊಳಿಸಬೇಕೆಂದು ಬಯಸಿದರು; ಅದಕ್ಕಾಗಿ ಶ್ರಮಿಸಿದರು. ಈ ಕುರಿತು ವಿಮರ್ಶಾತ್ಮಕ ಲೇಖನಗಳನ್ನು ಬರೆದರು. ಸಮುದಾಯ ಶಿಕ್ಷಣಕ್ಕಾಗಿ ಶಾಲೆಗಳನ್ನು ಸ್ಥಾಪಿಸಿದರು. ಸಮಾಜದ ಕೆಳವರ್ಗದವರ ಸಮಸ್ಯೆಗಳನ್ನೇ ಕೇಂದ್ರೀಕರಿಸಿಕೊಂಡು ಅವರ ವಿಮೋಚನೆಗಾಗಿ ಸ್ಥಾಪಿಸಿದ ವೇದಿಕೆ 'ಸ್ತ್ರೀ–ಶೂದ್ರ–ಅತಿಶೂದ್ರ.' ನಂತರ ಸತ್ಯಶೋಧಕ ಸಮಾಜ ಮತ್ತು ಸಾರ್ವಜನಿಕ ಧರ್ಮ ಸಮಾಜವನ್ನು ಸ್ಥಾಪಿಸಿದರು. ವಿಧವೆಯರಿಗೆ ಮತ್ತು ವಿವಾಹದ ಹೊರಗೆ ಮಕ್ಕಳಾದ ಮಹಿಳೆಯರಿಗೆಂದೇ ಪುನರ್ವಸತಿ ಕೇಂದ್ರಗಳನ್ನು ಪ್ರಾರಂಭಿಸಿದರು. ವಿವಾಹ ಬಾಹಿರ ಸಂಬಂಧದಿಂದ ಹುಟ್ಟುವ ಮಕ್ಕಳನ್ನು ನೋಡಿಕೊಳ್ಳಲೆಂದೇ ಶಿಶುಕೇಂದ್ರಗಳನ್ನು ಸ್ಥಾಪಿಸಿದ್ದರು. ಬ್ರಾಹ್ಮಣ ವಿಧವೆಯರು ಎದುರಿಸುತ್ತಿದ್ದ ಕೇಶಮುಂಡನದ ಕೆಟ್ಟ ಪದ್ಧತಿಯನ್ನು ಪ್ರತಿಭಟಿಸಲು ವಿನೂತನ ಮಾರ್ಗವನ್ನು ಕಂಡುಕೊಂಡ ಸಾವಿತ್ರಿಬಾಯಿಯವರು ಕ್ಷೌರಿಕರನ್ನು ಸಂಘಟಿಸಿ ಅವರಿಂದ ಕೇಶಮುಂಡನ ವಿರೋಧಿ ಚಳುವಳಿಯನ್ನು ಹಮ್ಮಿಕೊಂಡದ್ದು ಅತ್ಯಂತ ಕ್ರಾಂತಿಕಾರಕವಾಗಿತ್ತು. ಅಷ್ಟೇ ಅಲ್ಲ, ಗರ್ಭಿಣಿಯಾಗಿದ್ದ ಬ್ರಾಹ್ಮಣ ವಿಧವೆಯೊಬ್ಬಳು ಸಮಾಜವನ್ನು ಎದುರಿಸುವ ಧೈರ್ಯವಿಲ್ಲದೆ ಆತ್ಮಹತ್ಯೆಗೆ ಮುಂದಾದಾಗ, ಅವಳನ್ನು ಉಳಿಸಿ, ಅವಳ ಮಗುವನ್ನು ತಾವೇ ದತ್ತು ತೆಗೆದುಕೊಂಡು ಸಾಕಿದರು. ಎಲ್ಲಕ್ಕಿಂತ ಮಿಗಿಲಾದ್ದು ಅವರ ಪತಿ ಜ್ಯೋತಿಬಾ ತೀರಿಕೊಂಡಾಗ, ಕೊನೆಯ ಅಂತ್ಯಕ್ರಿಯೆಯ ವಿಧಿಗಳನ್ನು ತಾವೇ ನೆರವೇರಿಸಿದರು.

೧೮೭೦ರ ದಶಕದಲ್ಲಿ ಆಗ ಮಹಾರಾಷ್ಟ್ರದಲ್ಲಿ ಉಂಟಾಗಿದ್ದ ಬರಗಾಲವನ್ನು ಈ ದಂಪತಿಗಳು ಎದುರಿಸಿದ ರೀತಿ ಹಲವು ಮಂದಿಯ ಮೆಚ್ಚುಗೆಗೆ ಪಾತ್ರವಾಗಿದೆ. ಈ ಸಂದರ್ಭದಲ್ಲಿ ಕ್ಷಾಮದ ಬೇಗೆಗೆ ಸಿಕ್ಕಿ ಬೀದಿಗೆ ಬಿದ್ದ ಮಕ್ಕಳಿಗೆಂದೇ ೫೨ ಬೋರ್ಡಿಂಗ್ ಶಾಲೆಗಳನ್ನು ತೆರೆದರು. ಹಾಗೆಯೇ ೧೮೯೬ರ ಬರಗಾಲದಲ್ಲೂ ಬರ ಪರಿಹಾರದ ನೇತೃತ್ವ ವಹಿಸುತ್ತಾ ಸಾವಿತ್ರಿಬಾಯಿಯವರು ಸತ್ಯಶೋಧಕ ಸಮಾಜದ ಕಾರ್ಯಕರ್ತರ ನೆರವಿನಿಂದ ಹಲವಾರು ಜೀವಗಳನ್ನು ಉಳಿಸಿದರು. ಪ್ಲೇಗ್ ಪೀಡಿತ ಜನಸಮುದಾಯದ ಆರೈಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಕೊನೆಗೆ ಪ್ಲೇಗ್ ಕಾಯಿಲೆಯ ಸೋಂಕು ತಗುಲಿ ೧೮೯೭ರಲ್ಲಿ ನಿಧನರಾದರು.

ತನ್ನ ಕಾಲದ ಚಿಂತನೆ, ಸಂವೇದನೆಗಿಂತ ಅತ್ಯಂತ ಮುಂದಿದ್ದ ಸಾವಿತ್ರಿಬಾಯಿ ಫುಲೆ ಭಾರತದ ಹೆಮ್ಮೆಯ ಮಗಳು, ಶಿಕ್ಷಕಿ, ತಾಯಿ ಹಾಗೂ ನಾಯಕಿ. ಕವಿಯಾಗಿದ್ದ ಸಾವಿತ್ರಿಬಾಯಿಯವರ ಲೇಖನಿ ಆ ಯುಗದ ಹೆಣ್ಣುಮಕ್ಕಳ ದುಃಖ, ದುಮ್ಮಾನವನ್ನು ಮತ್ತು ಅವರನ್ನು ಎಚ್ಚರಿಸುವ ಉತ್ತೇಜಕ ಅಂಶಗಳನ್ನು ಚಿತ್ರಿಸಿದ್ದರೆ, ಅವರ ಸಾಮಾಜಿಕ ಸಂಘಟನೆಯ ಚಟುವಟಿಕೆಗಳು ಒಂದು ದೀರ್ಘ ಮುನ್ನೋಟದ ನೀಲಿನಕ್ಷೆಯನ್ನು ನಮ್ಮ ಮುಂದಿಟ್ಟಿವೆ. ನಮ್ಮ ಕಾಲದ ಸಾಂಸ್ಕೃತಿಕ ರಾಜಕಾರಣದ ಬೂದಿ ಮುಚ್ಚಿ ಈ ದಿವ್ಯಚೇತನದ ಉಜ್ವಲ ಪ್ರಭೆ ಹೆಚ್ಚು ಪ್ರಕಟವಾಗದೇ ಹೋಗಿದ್ದು ಒಂದು ವಿಪರ್ಯಾಸ. ರಾಷ್ಟ್ರೀಯತೆಯ ದರ್ಶನ, ಬ್ರಾಹ್ಮಣಿಕೆಯ ಶ್ರೇಷ್ಠತೆಯ ವ್ಯಸನ ಮತ್ತು ಲಿಂಗ ರಾಜಕಾರಣದ ಒಳಸುಳಿಗೆ ಸಿಕ್ಕಿ ಈಕೆಯ ಪ್ರಭೆ ಪ್ರಜ್ವಲಿಸದೆ ಮಂಕಾಗಿದ್ದುದು ಒಂದು ಕ್ರೂರ ವಾಸ್ತವ. ಇಂದಿನ ಅತ್ಯಂತ ತಲ್ಲಣಮಯ ಬದುಕಿನ ವಾಸ್ತವತೆ ಮತ್ತು ಬದಲಾಗುತ್ತಿರುವ ಚಿಂತನೆಯ ಮಾರ್ಗಗಳು ಪರಿಹಾರಕ್ಕಾಗಿ ಸಾವಿತ್ರಿಬಾಯಿಯವರ ಹೋರಾಟದ ಬದುಕಿನ ತಾತ್ವಿಕತೆ ಮತ್ತು ಕಾರ್ಯತಂತ್ರಗಳನ್ನು ಇಂದು ಮಹಿಳಾ ಚಳುವಳಿ ಗಂಭೀರವಾಗಿ ಅಳವಡಿಸಿಕೊಳ್ಳಬೇಕಾದ್ದು ಬಹುಮುಖ್ಯವಾಗಿದೆ. ಸಾವಿತ್ರಿಬಾಯಿಯವರ ಬದುಕು ಮತ್ತು ಅವರ ಕ್ರಿಯಾಶೀಲ ನಡೆಗಳು ಭಾರತೀಯ ಮಹಿಳೆಯರ ಹೋರಾಟದ ಹಾದಿಗೆ ಒಂದು ಉಜ್ವಲ ಪರಂಪರೆಯ ಚಿಮ್ಮು ಹಲಗೆಯಾಗಿ ಎಂದೆಂದಿಗೂ ನಂದದ ನಂದಾದೀವಿಗೆಯ ಬೆಳಕಿನ ಮಾರ್ಗದರ್ಶನವನ್ನು ನೀಡುತ್ತಿರುತ್ತವೆ.

**ಡಾ|| ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

# ಪರಂಪರೆಯ ತಿಳುವಳಿಕೆ ಮೂಲೆಗುಂಪಾದಾಗ...

ಜ್ಞಾನದ ಸಂವಹನವು ಹಿರಿಯರಿಂದ ಕಿರಿಯರಿಗೆ ಅನುಭವದ ಮೂಲಕವೂ ಒದಗಿಬರುತ್ತದೆ. ಒಂದು ಜನಾಂಗದ ತಿಳುವಳಿಕೆಯು ಮೂಲೆಗುಂಪಾದಾಗ ಅದು ಮುಂದಿನ ಜನಾಂಗಕ್ಕೆ ತಲುಪುವುದಾದರೂ ಹೇಗೆ? ನಮ್ಮ ತಲೆಮಾರನ್ನೇ ತೆಗೆದುಕೊಳ್ಳೋಣ. ನಮಗೆ ಯಾವುದಕ್ಕೂ ಸಮಯವೇ ಇಲ್ಲ. ನಗರ ಜೀವನದಲ್ಲಿ ಇರುವಂತಹ ಒತ್ತಡಗಳನ್ನು ಸಹಿಸಲಸಾಧ್ಯ ಎಂದು ವರ್ಷಕ್ಕೆ ನಾಲ್ಕು ಬಾರಿ ಕಾಡಿನಲ್ಲಿ ಅಲೆದು ಬರುವುದು ಸಹಜ ವರ್ತನೆಯಾಗುತ್ತಿದೆ. ಭಾನುವಾರವೂ ಪಾರ್ಟ್ ಟೈಂ ಕೆಲಸ ಹುಡುಕುವುದು, ಹೆಚ್ಚಿನ ಆದಾಯ ಬೇಕೆಂದು ರಾತ್ರಿ ಹೆಚ್ಚುವರಿ ಪಾಳಿಯಲ್ಲೂ ದುಡಿಯುವ ಹಂಬಲ ಯೌವನದಲ್ಲಿ. ನಂತರ ಒಂದು ಹಂತಕ್ಕೆ ಬಂದ ಮೇಲೆ ಇನ್ನೊಂದು ರೀತಿಯ ಸಮಸ್ಯೆ, ಬೇಕುತನಗಳು ಹುಟ್ಟಿಕೊಳ್ಳುತ್ತವೆ. ಓದು, ಪರೀಕ್ಷೆ, ದುಡಿಮೆ, ಕುಟುಂಬದ ಪಾಲನೆ ಇವುಗಳ ನೆಪದಲ್ಲಿ ನಾವು ನಮ್ಮತನವನ್ನು ಮರೆತಿದ್ದೇವೆ, ಮರೆಯುತ್ತಲೇ ಇದ್ದೇವೆ.

ಮಾರುಕಟ್ಟೆಯನ್ನೇ ನಂಬಿಕೊಂಡು ಕೊಂಡು ಮನೆಗೆ ತಂದು ಬದುಕುವುದು ಒಂದು ಪರಿ, ಕೊಳ್ಳುವ ಕೆಲವು ಪದಾರ್ಥಗಳನ್ನು ಮಾತ್ರ ಕೊಂಡು ತಂದು ಉಳಿದವನ್ನು ಮನೆಯ ಸುತ್ತಲಿನ ಒಂದು ತುಂಡು ಜಮೀನಿನಲ್ಲಿ ಬೆಳೆದು, ಇನ್ನೊಂದಿಷ್ಟು ದವಸಧಾನ್ಯಗಳನ್ನು ಮಾರಿ ಜೀವನ ಮಾಡುವುದು ಇನ್ನೊಂದು ಪರಿ. ಕುಟುಂಬದ ಪಾಲನೆಯೊಂದಿಗೆ ಆರೋಗ್ಯ ನಿರ್ವಹಣೆ, ಉಳಿತಾಯದ ಸೂಕ್ಷ್ಮತೆಗಳು ಇವೆಲ್ಲವೂ ನಮ್ಮ ಅಜ್ಜನ ತಲೆಮಾರು ಚೆನ್ನಾಗಿ ಅರಿತಿತ್ತು. ಆಸ್ಪತ್ರೆಯೆಂದರೆ ದೂರ ಸರಿಯುತ್ತಿದ್ದ ಆ ಹಿರಿಯರ ತಲೆಯಲ್ಲಿ ಮನೆಮದ್ದಿನ ಅರಿವಿತ್ತು, ಜೀವನದ ಗತಿಯನ್ನು ಹೇಗೆ ನಡೆಸಬೇಕೆಂಬ ರೀತಿ-ನೀತಿ ಗೊತ್ತಿತ್ತು. ರೈತಾಪಿ ಜನರ ಅನುಭವಗಳು, ಕುಟುಂಬ, ಹೊಲ, ಗದ್ದೆ, ಹಸು-ಎತ್ತು, ಕೋಳಿ-ಕೊಕ್ಕರೆ ಎಲ್ಲದರ ನಿರ್ವಹಣೆ ಸುಲಭವಾಗಿತ್ತು. ಮನೆಯ ನಾಲ್ಕು ಜನರೂ ಒಂದೇ ದಿಕ್ಕಿನಲ್ಲಿ ಬದುಕುತ್ತಿದ್ದರು. ಸುಮ್ಮನೊಂದು ಮನೆ, ಮಳೆಗೆ ನೆನೆಯದ ಮನೆ, ಗಾಳಿಗೆ ಗಡಗಡ ಅನ್ನದ ಮನೆ, ಒಟ್ಟಿನಲ್ಲಿ ಒಂದು ಮನೆ, ಸುತ್ತಲೂ ಹಸಿರು, ಮನೆಯ ಮುಂದೊಂದು ಹೂದೋಟ. ಅಕಸ್ಮಾತ್ ಜಮೀನು ಬಿತ್ತದಿದ್ದರೂ ದನಗಳಿಗೆ ಗೋಮಾಳವಾಗಿರಲಿ ಎನ್ನುವಂತೆ ಹಾಳು ಬಿಟ್ಟಿರುತ್ತಿದ್ದರು. ಎಲ್ಲರ ಕಸುವು ಅರ್ಥಪೂರ್ಣವಾದ ಹೊಂದಾಣಿಕೆಯಿಂದ ಬಾಳು ಬಂಗಾರವಾದ ಅನುಭವ! ಹಣವೇ ಬದುಕಿನ ಮೂಲಾಧಾರವಲ್ಲವೆಂಬ ಸ್ಪಷ್ಟ ತಿಳುವಳಿಕೆಯಿಂದ ಬದುಕಿನ ಮೌಲ್ಯಗಳನ್ನು ಸಾಧಿಸುವ ಕಡೆಗೆ ಹೊರಟಿದ್ದ ಹಿರಿಯರ ಆಯಸ್ಸು ಗಟ್ಟಿ, ಅನುಭವವೂ ಗಟ್ಟಿ.

ದುಡ್ಡು ದುಡಿಯುವ ಹಂಬಲದಲ್ಲಿ ನಮಗೆ ಎಲ್ಲವೂ ನಗಣ್ಯ. ದುಡಿಯಬೇಕು, ಕೊಳ್ಳಬೇಕು, ತನ್ನ ನೆಂಟರೆಲ್ಲರ ಮನೆಗಿಂತ ದೊಡ್ಡದಾದ ಡ್ಯುಪ್ಲೆಕ್ಸ್ ಮನೆ ಕಟ್ಟಬೇಕು, ಇರುವ ಕೆಲಸಕ್ಕಿಂತ ದೊಡ್ಡ ಸಂಬಳದ ಕೆಲಸ ಹುಡುಕಬೇಕು, ಏನನ್ನಾದರೂ ಮಾಡಿ ಬಡ್ತಿ ಪಡೆದು ಎಲ್ಲರಿಗಿಂತ ಮುಂದೆ ಇರಬೇಕು... ಆಸೆ ಅಧಿಕವಾದಷ್ಟೂ ಹತ್ತಾರು ವ್ಯವಹಾರಗಳಲ್ಲಿ ಕೈಹಾಕಿ, ವಿಷಯಾಸಕ್ತಿಗಳಲ್ಲಿ ಮುಳುಗಿ, ಆರೋಗ್ಯ ಕಳೆದುಕೊಂಡು (ಅದಕ್ಕೆ ಮೊದಲೇ ವಿಮೆ ಭರಿಸಿ ದುಡಿದದ್ದನ್ನು ಖರ್ಚು ಮಾಡಿರಬೇಕು) ಐಷಾರಾಮಿ ಆಸ್ಪತ್ರೆ ಸೇರುವುದು, ನಂತರ ಆಸ್ಪತ್ರೆಯ ದುಬಾರಿ ಹಾಸಿಗೆಯ ಮೇಲೆ ಮಲಗಿ ಚಿಕಿತ್ಸೆ ಪಡೆಯುವುದು, ಬರೀ ಈ ದುಬಾರಿ ಹಾಸಿಗೆಗಾಗಿ ದುಡಿದೆನೇ ಎಂದು ತಳಮಳಿಸುತ್ತಾ ಕೊನೆಯುಸಿರೆಳೆಯುವುದಲ್ಲ ಜೀವನ.

ಏನೀ ಜೀವನ? - ಎಂಬ ಪ್ರಶ್ನೆಗೆ ಸಮರ್ಪಕ ಉತ್ತರಗಳೆಲ್ಲಿಯೂ ಇಲ್ಲ. ಈ ಭೂಮಿ ಮತ್ತು ಸಾವು-ಹುಟ್ಟಿನಾಚೆಗೂ ಚರ್ಚೆಗಳು ಇಲ್ಲದಿಲ್ಲ. ಆದರೆ ಪ್ರಜ್ಞಾಪೂರ್ವಕವಾಗಿ ಬದುಕುವಾಗ ಕಳ್ಳತನ, ಸುಲಿಗೆ, ವಂಚನೆ ಹೀಗೆ ಆತ್ಮದ ಪ್ರಜ್ಞೆ ಮರೆತು ಬದುಕುವುದಾದರೂ ಏಕೆ?

ಒಂದು ವಿಪರೀತದ ಸ್ಥಿತಿಯೆಂದರೆ ತನ್ನ ಬೇರನ್ನೇ ತಾನು ಮರೆಯುವುದು. ಇದಕ್ಕೆ ಸ್ಪಷ್ಟವಾದ ಉದಾಹರಣೆಯೆಂದರೆ ನಮ್ಮ ಹಿರಿಯ ಜನಾಂಗವು ಏಕಾಕಿತನದಲ್ಲಿ ಓಲ್ಡ್ ಏಜ್ ಕೇರ್ ಸೆಂಟರ್‌ಗಳಲ್ಲಿ ಸೇರಿರುವುದು. ಕುಟುಂಬ ಮೌಲ್ಯಗಳು ಕೊಚ್ಚಿಹೋಗಿ ನೂರಾರು ಹೆಣ್ಣುಮಕ್ಕಳು ತಮ್ಮ ಕಂದಮ್ಮಗಳ ಜೊತೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು, ಪತಿ ಅಥವಾ ಪತ್ನಿಯೇ ಸಂಗಾತಿಯ ಜೀವಕ್ಕೆ ಕಂಟಕರಾಗಿ ಕೊಲೆ ಮಾಡಿಸುತ್ತಿರುವುದು, ಕೂಡಿ ಬಾಳಬೇಕಾದ ಜೋಡಿ ಜೀವಗಳು ಕಚ್ಚಾಡಿ ಬಾಂಧವ್ಯ ಕಡಿದುಕೊಂಡು ವಿಚ್ಛೇದನ ಪಡೆಯುತ್ತಿರುವುದು, ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಪ್ರತಿಷ್ಠಿತ ವಸತಿಶಾಲೆಗಳಲ್ಲಿ ಬೆಳೆಯುತ್ತಿರುವುದು...

ಬೇರು ಕಡಿದ ಮರ ಉರುಳುವಂತೆ ಪರಂಪರೆಯ ಮೌಲ್ಯಗಳನ್ನು ನಿರ್ಲಕ್ಷಿಸುತ್ತಾ, ಎಲ್ಲೋ ಒಂದುಕಡೆ ನಮ್ಮತನವನ್ನು ನಾವೇ ಮರೆಯುತ್ತಾ, ಕಡೆಗೆ ನಮ್ಮ ಅಸ್ತಿತ್ವವನ್ನು ಇಲ್ಲವಾಗಿಸಿಕೊಳ್ಳುತ್ತಿದ್ದೇವೆ. ನಮಗೆ ಎಲ್ಲವೂ ಅಲ್ಟ್ರಾಮಾಡರ್ನ್ ಆಗಿರಬೇಕೆಂಬ ಆಸೆ, ಮಾಡರ್ನ್ ಆಗಬೇಕು, ಮನೆಗೆ ಅತ್ಯಾಧುನಿಕ ಗೃಹೋಪಕರಣಗಳು ಬರಬೇಕು, ಮೈಗಂಟುವ ಬಟ್ಟೆ ತೊಡಬೇಕು, ಮೇಕಪ್ ಮಾಡಿಕೊಳ್ಳಬೇಕು, ಏಸಿ, ಗ್ಯಾಡ್ಜೆಟ್, ದುಬಾರಿ ಟಚ್ ಸ್ಕ್ರೀನ್ ಫೋನ್ ಎಲ್ಲವೂ ಬೇಕು. ಆದರೆ ನಮಗೆ ಅಜ್ಜಿ ಮಾಡಿಕೊಡುತ್ತಿದ್ದ ಕಷಾಯದ ತಿಳುವಳಿಕೆ ಬೇಡ, ನಮ್ಮ ಆರೋಗ್ಯ ಕಾಪಾಡುವಂತಹ ಆಹಾರ ಪದಾರ್ಥಗಳು ಬೇಡ, ಆರೋಗ್ಯಪೂರ್ಣ ಚಿಂತನೆಗಳು ಬೇಡ, ಮೈಬೆವರು ಸುರಿಸುವ ಯೋಗ-ಪ್ರಾಣಾಯಾಮ ಬೇಡ, ವಿದೇಶೀ ಫುಡ್ ಜಾಯಿಂಟ್ಸ್, ಕೊಳ್ಳುಬಾಕ ಸಂಸ್ಕೃತಿಯ ಮಾಲ್‌ಗಳು ಬೇಕು, ತಿಂದು ಕುಡಿದು ಆರೋಗ್ಯ ಹಾಳುಮಾಡಿಕೊಳ್ಳಬೇಕು. ಹೀಗೆ ನಮ್ಮ ಬೇಕು-ಬೇಡಗಳೇ ನಮಗೆ ಸರಿಯಾಗಿ ಅರ್ಥವಾಗುತ್ತಿಲ್ಲ. ನಾಲ್ಕು ಜನ ವಿದೇಶೀಯರು ಸಿಕ್ಕರೆ ಕಂಗ್ಲಿಷ್ ಮಾತನಾಡುವಾಗ ನಮ್ಮ ಭಾಷೆಯೇ ನಮಗೆ ಬೇಡ. ಹೀಗೆ ನಮ್ಮ ಕಾವೇರಿ ನೀರು ಬೇಕಾದರೂ ಅದರ ಸಮರ್ಪಕ ಹಂಚಿಕೆ ರಾಜ್ಯದೊಳಗೆ ಆಗುವಂತಹ ಯೋಜನೆಗಳು ನಮಗೆ ಬೇಡ. ರಾಜ್ಯದಿಂದ ಹೊರಗೆ ಹೋಗಿ ದುಡಿಯುವ ಹಂಬಲ ಬೇಕು, ನಮ್ಮ ರಾಜ್ಯವೇ ಲಕ್ಷಾಂತರ ನಿರಾಶ್ರಿತರಿಗೆ, ಬೇರೆ ಭಾಷಿಗರಿಗೆ, ಅನ್ಯದೇಶೀಯರಿಗೆ ಆಸರೆಯಾಗಿದೆ. ಹೀಗಿರುವಾಗ ಇಲ್ಲಿನ ಸಂಪನ್ಮೂಲ ಬಳಸಿ ಹೇಗೆ ಬೆಳೆಯುವುದು ಅನ್ನುವ ಕಿಂಚಿತ್ ಆಲೋಚನೆ ನಮಗೆ ಬೇಕಾಗಿಲ್ಲ.

ಲಾಭಕೋರತನದಿಂದ ದೇಶಕ್ಕೆ ಆಗಮಿಸುತ್ತಿರುವ ಮಲ್ಟಿನ್ಯಾಶನಲ್ ಕಂಪನಿಗಳ ಹುನ್ನಾರಕ್ಕೆ ಪ್ರತಿಯೊಬ್ಬರೂ ತಕ್ಕ ಪಾಠ ಕಲಿಸಬೇಕು. ದೇಶೀಯ ಉತ್ಪನ್ನಗಳನ್ನು ಕಡಿಮೆ ಬೆಲೆಯಲ್ಲಿ ಮಾರುವ ಪರಿಪಾಠವೂ ಆರಂಭವಾಗಬೇಕು. ಗುಣಮಟ್ಟಕ್ಕೆ ಆದ್ಯತೆ ನೀಡಿದಾಗ ಎಲ್ಲವೂ ಸಾಧ್ಯವಿದೆ. ಮಾನವನ ನವದ್ವಾರಗಳ ಮೇಲೂ ವಿದೇಶಿ ಕಂಪನಿಗಳು ಹೂಡಿಕೆ ಮಾಡಿವೆ, ಅದರ ಪರಿಣಾಮವೇ ಇಂದು ಕಣ್ಣಿನ ಅಂದಕ್ಕೆ ನೂರಾರು ವಸ್ತುಗಳು ಮಾರುಕಟ್ಟೆಯಲ್ಲಿ ಲಭ್ಯವಿವೆ. ಕಣ್ಣಿಗೆ ಏನಾದರೂ ತೊಂದರೆಯಾಗಿದೆ ಎಂದರೆ ಸಾವಿರಾರು ಔಷಧಿ ಕಂಪನಿಗಳು ನಿಮ್ಮ ಸುತ್ತ ಗಿರಕಿ ಹೊಡೆಯುತ್ತವೆ. ಹತ್ತಾರು ವೈದ್ಯರ ಬಳಿ ನೀವೂ ಅಲೆಯುತ್ತೀರಿ. ಮುಂದೆ ಐಷಾರಾಮಿ ಆಸ್ಪತ್ರೆಗಳು ನಿಮ್ಮ ಹಣವನ್ನು ಬರಿದುಮಾಡುತ್ತವೆ. ಇದೊಂದು ಉದಾಹರಣೆಯಾಗಿ ಮಾತ್ರ ಹೇಳುತ್ತಿದ್ದೇನೆ. ಹೀಗೆ ನವದ್ವಾರಗಳ ಮೇಲೂ ಕೋಟ್ಯಂತರ ರೂಪಾಯಿ ಹೂಡಿಕೆ ಮಾಡಿ ಕಾಯುತ್ತಾ ಕುಳಿತಿರುವ ಕಂಪನಿಗಳ ಎದುರು ಭಾರತೀಯ ಓರ್ವ ಮೂರ್ಖ ಖರೀದಿಗಾರ ಹಾಗೂ ಕಳಪೆ ಆರೋಗ್ಯ ಹೊಂದಿರುವ ರೋಗಿ ಆಗಲೇಬಾರದು.

ನಮ್ಮ ಹಿನ್ನೆಲೆ, ಪರಂಪರೆಯ ಬಗ್ಗೆ ಸತ್ಯಾಸತ್ಯತೆಗಳನ್ನು ಪರಿಶೀಲಿಸಲು ಸಂಶೋಧನೆ ಕೈಗೊಳ್ಳಬಹುದು, ಅನುಭವವೇದ್ಯ ಸತ್ಯಗಳನ್ನು ಒಪ್ಪಿಕೊಳ್ಳಬಹುದು, ಇದರ ಸಹಾಯದಿಂದ ನಮ್ಮ ಬೇರುಗಳು ಇನ್ನಷ್ಟು ಸ್ಪಷ್ಟವಾಗುತ್ತವೆ. ಭಾರತೀಯ ತಂತ್ರಜ್ಞಾನ, ಜ್ಞಾನವು ಬಹಳ ಮುಂಚಿನ ಕಾಲಮಾನದಲ್ಲೂ ಉತ್ತಮ ಸ್ಥಿತಿಯಲ್ಲಿತ್ತು ಎಂಬುದಕ್ಕೆ ಎಲ್ಲೋರದ ಗುಹಾಂತರ ದೇವಾಲಯಗಳು ಸಾಕ್ಷಿಯಾಗಿವೆ ಎನ್ನಬಹುದು. ಆದರೂ ನಮ್ಮ ಮೇಲೆ ನಮಗಿರುವ ಕೀಳರಿಮೆ, ಯುವಜನತೆ ಮತ್ತು ಪರಂಪರೆ ನಡುವಿನ ಕಳಚಿಕೊಳ್ಳುತ್ತಿರುವ ಕೊಂಡಿಗಳ ಸಮರ್ಪಕ ಜೋಡಣೆಯನ್ನು ಇಂದು ನಿಭಾಯಿಸಬೇಕಾದ ಜವಾಬ್ದಾರಿ ಪಾಲಕರ ಹೆಗಲ ಮೇಲಿದೆ.

**ನಳಿನ ಡಿ.**
'ಜನನಿ ನಿಲಯ', ಬೋಜೇಗೌಡ ಲೇಔಟ್, ಐ.ಐ.ಟಿ. ಇಂಜಿನಿಯರಿಂಗ್ ಕಾಲೇಜ್ ರಸ್ತೆ
ಜ್ಯೋತಿನಗರ ಪೋಸ್ಟ್, ಚಿಕ್ಕಮಗಳೂರು - ೫೭೭ ೧೦೨



ಯತಿನ್ ಓಝ ಗುಜರಾತಿನ ಮಾಜಿ ವಿಧಾನಸಭಾ ಸದಸ್ಯರು. ಪ್ರಧಾನಿ ಮೋದಿಯವರು ಆ ರಾಜ್ಯದ ಮುಖ್ಯಮಂತ್ರಿಯಾಗಿದ್ದಾಗ ಓಝ ಅವರ ಆಪ್ತವಲಯದಲ್ಲಿದ್ದವರು. ಮೋದಿಯವರಿಗೆ ನೆಚ್ಚಿನವರಾಗಿದ್ದ ಈತ ನವಂಬರ್ ೯, ೨೦೧೬ರಂದು ಮೋದಿಯವರಿಗೆ ಬರೆದ ಬಹಿರಂಗ ಪತ್ರದಲ್ಲಿ ಅವರು ಕೈಗೊಂಡಿರುವ ನೋಟು ರದ್ದತಿ ಕ್ರಮದ ವಿರುದ್ಧ ಸಿಡಿದೆದ್ದಿದ್ದಾರೆ. ನೋಟು ರದ್ದತಿ ದೇಶದ ಜನತೆಗೆ ಮಂಕುಬೂದಿ ಎರಚುವ, ವಂಚನೆಯಿಂದ ಕೂಡಿದ ನಡೆಯಲ್ಲದೆ ಬೇರೇನೂ ಅಲ್ಲ ಎಂದು ತೀವ್ರವಾಗಿ ಖಂಡಿಸಿದ್ದಾರೆ.

ಅಷ್ಟೇ ಅಲ್ಲ, ಭಾರತೀಯ ಜನತಾ ಪಕ್ಷಕ್ಕೆ ಆಪ್ತರಾಗಿರುವವರ ಹಿಡಿತದಲ್ಲಿರುವ ಗುಜರಾತಿನ ಸಹಕಾರಿ ಬ್ಯಾಂಕುಗಳು ೨೦೧೬ರ ನವೆಂಬರ್ ೮ರ ಬೆಳಗ್ಗೆ ೯ ಗಂಟೆಯಿಂದ ಮರುದಿನ ಬೆಳಗ್ಗೆ ೯ರ ಅವಧಿಯೊಳಗೆ ರೂ. ೫೦೦ ಮತ್ತು ರೂ. ೧೦೦೦ ಮುಖಬೆಲೆಯ ನೋಟುಗಳನ್ನು ಪಾವತಿಸಿ ಕಡಿಮೆ ಮುಖಬೆಲೆಯ ನೋಟುಗಳನ್ನು ಪಡೆದುಕೊಂಡಿದ್ದಾರೆ ಎಂದು ದೂರಿದ್ದಾರೆ.

ಮುಂದುವರಿದು, ಬಿಜೆಪಿಯ ರಾಷ್ಟ್ರೀಯ ಅಧ್ಯಕ್ಷರಾದ ಅಮಿತ್ ಶಾ ಅವರ ನೆಚ್ಚಿನ ಬಂಟರು ನವೆಂಬರ್ ೮ರ ರಾತ್ರಿಯಿಂದಲೇ ನೋಟು ವಿನಿಮಯದಂತಹ ಅಕ್ರಮ ವ್ಯವಹಾರಗಳಲ್ಲಿ ತೊಡಗಿದ್ದರು ಎಂಬ ವಾಸ್ತವಾಂಶಗಳನ್ನೂ ಹೊರಗೆಡವಿದ್ದಾರೆ. ಇವೆಲ್ಲದರ ಕುರಿತ ವಿಡಿಯೊ ರಿಕಾರ್ಡಿಂಗ್ ಸಹ ತಮ್ಮ ಬಳಿ ಇದೆ ಎಂದು ಘೋಷಿಸಿದ್ದಾರೆ. ಈ ಬಹಿರಂಗ ಪತ್ರದಲ್ಲಿರುವ ವಿವರಗಳು ಜಾಲತಾಣ ಮತ್ತಿತರ ಮಾಧ್ಯಮಗಳಲ್ಲಿ ಹರಿದಾಡುತ್ತಿವೆ. ಇಂಡಿಯ ಸಂವಾದ್ ಎಂಬ ಸಂಸ್ಥೆ ಫೇಸ್‌ಬುಕ್‌ನಿಂದ ಓಝ ಬರೆದಿದ್ದ ಬಹಿರಂಗ ಪತ್ರವನ್ನು ಬಿಡುಗಡೆ ಮಾಡಿದೆ. ಈ ಸಂಸ್ಥೆಗೆ ಕೃತಜ್ಞತೆ ಸಲ್ಲಿಸುತ್ತ ಆ ಬಹಿರಂಗ ಪತ್ರವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

# ಪ್ರಧಾನಿ ನರೇಂದ್ರ ಮೋದಿಯವರಿಗೊಂದು ಬಹಿರಂಗ ಪತ್ರ

**ಯತಿನ್ ಓಝ ಕನ್ನಡಕ್ಕೆ : ಎಸ್. ಸುರೇಂದ್ರ**

**ಬಹಿರಂಗ ಪತ್ರ**

**ಆತ್ಮೀಯ ನರೇಂದ್ರ ಭಾಯ್ ಅವರಿಗೆ,**

ನಿಮ್ಮ ಆರೋಗ್ಯ ಚೆನ್ನಾಗಿದೆ ಮತ್ತು ಕ್ಷೇಮವಾಗಿದ್ದೀರಿ ಎಂದು ಭಾವಿಸುತ್ತೇನೆ.

ನವೆಂಬರ್ ೮, ೨೦೧೬ರಂದು ನೋಟು ರದ್ದತಿ ಕುರಿತ ನಿಮ್ಮ ಭಾಷಣ ಕೇಳಿದ ನಂತರ ನಿಜಕ್ಕೂ ಸಂತೋಷದಿಂದ ಒಂದು ಕ್ಷಣ ಉಬ್ಬಿಹೋದೆ. ಮಾತ್ರವಲ್ಲ, ಅಂತಹ ದಿಟ್ಟ ಮತ್ತು ಐತಿಹಾಸಿಕ ಕ್ರಮ ತೆಗೆದುಕೊಂಡಿದ್ದಕ್ಕೆ ನಿಮಗೆ ಅಭಿನಂದನೆಗಳನ್ನು ಸಲ್ಲಿಸಬೇಕೆಂದೆನ್ನಿಸಿತು. ದುರದೃಷ್ಟಕರ ಸಂಗತಿಯೆಂದರೆ, ನನ್ನಲ್ಲುಂಟಾದ ಆ ಭಾವನೆ ಅಳಿಸಿಹೋಗಲು ಹೆಚ್ಚಿನ ಸಮಯವೇನೂ ಬೇಕಾಗಲಿಲ್ಲ. ನವೆಂಬರ್ ೯ರ ಬೆಳಿಗ್ಗೆ ನನ್ನ ಆತ್ಮೀಯ ಪರಿಚಿತರೊಬ್ಬರು ನಿನ್ನೆ, ಎಂದರೆ ೮ನೇಯ ತಾರೀಖಿನ ಮಧ್ಯಾಹ್ನ ಸುಮಾರು ೧೨ ಗಂಟೆ ಹೊತ್ತಿಗೆ ತಾನು ಇರುವಾಗಲೇ ಅಹಮದಾಬಾದಿನ ಭಾರಿ ಕೈಗಾರಿಕೋದ್ಯಮಿಗಳಲ್ಲೊಬ್ಬರ ಪತ್ನಿ ಪ್ರಖ್ಯಾತ ಚಿನ್ನಾಭರಣಗಳ ಮಳಿಗೆಗೆ ಬಂದು ಆ ಮೊದಲೇ ಅವರು ಇತ್ತಿದ್ದ ಸೂಚನೆಯಂತೆ ೨೦ ಕೋಟಿ ರೂ.ಗಳ ಮೌಲ್ಯದ ಚಿನ್ನವನ್ನು ಖರೀದಿಸಿದರೆಂದು ತಿಳಿಸಿದರು.

ಆಕೆ ಇತ್ತಿದ್ದ ಪೂರ್ವಭಾವಿ ಸೂಚನೆಯನುಸಾರ ಆದಾಗಲೇ ಎಲ್ಲ ಆಭರಣಗಳನ್ನು ಒಪ್ಪವಾಗಿ ಜೋಡಿಸಿ ಸಿದ್ಧಪಡಿಸಿಟ್ಟಿದ್ದ ಪ್ಯಾಕೆಟ್‌ಗಳನ್ನು ಆಕೆಗೆ ಹಸ್ತಾಂತರಿಸಿ ಮಳಿಗೆಯವರು ಹಣ ಪಡೆದ ಇಡೀ ವ್ಯವಹಾರ ಕೇವಲ ಎರಡು ನಿಮಿಷಗಳಲ್ಲಿ ಮುಗಿದುಹೋಯಿತಂತೆ. ಅಂದಹಾಗೆ ನನಗೆ ಈ ಘಟನೆಯನ್ನು ತಿಳಿಸಿದಾಕೆ ಅದೇ ವೇಳೆಗೆ ಆ ಮಳಿಗೆಗೆ ಭೇಟಿ ನೀಡಿದ್ದು ತಾನು ಆ ಮುಂಚೆಯೇ ನೀಡಿದ್ದ ೫ ಲಕ್ಷ ರೂ.ಗಳ ಮೌಲ್ಯದ ಆಭರಣಗಳನ್ನು ಕೊಳ್ಳಲು. ಈಕೆ ಪ್ರಖ್ಯಾತ ವೈದ್ಯೆ.

ಒಂದು ಕಾಲಕ್ಕೆ ನಿಮ್ಮ ಸಮೀಪವರ್ತಿ ಮಾತ್ರವಲ್ಲದೆ, ನಿಮ್ಮ ಕಿಚನ್ ಕ್ಯಾಬಿನೆಟ್‌ನ ಸದಸ್ಯರಲ್ಲೊಬ್ಬನಾಗಿ ಕೆಲಸ ಮಾಡಿರುವ ನನಗೆ, ಈ ದೇಶದಲ್ಲಿ ಚಲಾವಣೆಯಲ್ಲಿರುವ ಕಪ್ಪುಹಣದ ಶೇ. ೫೦ರಷ್ಟು ಮೊತ್ತವನ್ನು ತನ್ನ ಸಂಪೂರ್ಣ ಹಿಡಿತದಲ್ಲಿಟ್ಟುಕೊಂಡಿರುವ ನಿಮ್ಮ ನೆಚ್ಚಿನ ಕೈಗಾರಿಕೋದ್ಯಮಿಯೊಬ್ಬರಿಗೆ ನೋಟು ರದ್ದತಿ ಕ್ರಮವನ್ನು ಘೋಷಿಸುವ ಸಾಕಷ್ಟು ಮೊದಲೇ ಆ ಕುರಿತು ಮಾಹಿತಿ ನೀಡಲಾಗಿತ್ತು ಎಂದು ಒಂದೆರಡು ಕ್ಷಣದಲ್ಲೇ ನನ್ನ ಮನಸ್ಸಿನಲ್ಲಿ ಮಿಂಚಿನಂತೆ ಹೊಳೆಯಿತೆಂದರೆ ನೀವು ನಂಬಲೇಬೇಕು. ಕೂಡಲೇ ಇಡೀ ದಿನ ಆ ಕುರಿತು ಇನ್ನಷ್ಟು ಮಾಹಿತಿ ಕಲೆಹಾಕಲು ನಂಬಲರ್ಹ ವಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳನ್ನು ಸಂಪರ್ಕಿಸಿದೆ. ನನ್ನ ಅನ್ನಿಸಿಕೆ ನೂರಕ್ಕೆ ನೂರರಷ್ಟು ನಿಜ ಎಂಬುದನ್ನು ಖಚಿತಪಡಿಸಿಕೊಂಡೆ. ಅದಿರಲಿ, ಜನಸಾಮಾನ್ಯರ ಕಣ್ಣಿಗೆ ಮಣ್ಣೆರಚಿ ಕೀಳುಮಟ್ಟದ ಪ್ರಚಾರ ಪಡೆಯಲು ನೀವು ಇಂತಹ ನೀಚ ಕ್ರಮ ತೆಗೆದುಕೊಂಡಿದ್ದರಿಂದ ಉಂಟಾದ ಆಘಾತಕ್ಕೀಡಾದ ನಾನು ಇನ್ನೂ ಚೇತರಿಸಿಕೊಳ್ಳಲು ಸಾಧ್ಯವಾಗಿಲ್ಲ.

ರಾಷ್ಟ್ರದ ಒಳಿತಿಗಾಗಿ ಜನರ ಹಿತಾಸಕ್ತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಟು ರದ್ದತಿಯಂತಹ ದಿಟ್ಟ ಕ್ರಮವನ್ನು ತೆಗೆದುಕೊಳ್ಳಲಾಗಿದೆ ಎಂಬೆಲ್ಲ ಬೊಗಳೆ ಮಾತುಗಳ ಹಿಂದಿರುವ ನಿಜವಾದ ಉದ್ದೇಶ ನಿಮ್ಮ ಸಮೀಪವರ್ತಿಗಳನ್ನು, ನಿಮ್ಮ ಆತ್ಮೀಯ ಬಳಗದವರನ್ನು, ನಿಮ್ಮ ಪಕ್ಷವನ್ನು ಮತ್ತು ನಿಮ್ಮ ಪಕ್ಷದ ಕಾರ್ಯಕರ್ತರನ್ನು ಮತ್ತಷ್ಟು ಶ್ರೀಮಂತರನ್ನಾಗಿಸುವುದಷ್ಟೇ ಹೊರತು ಬೇರೇನೂ ಅಲ್ಲ. ನಾನು ಸುಖಾಸುಮ್ಮನೆ ಅಥವಾ ಯಾವುದೇ ಆಧಾರವಿಲ್ಲದೆ ಈ ಮಾತುಗಳನ್ನು ಹೇಳುತ್ತಿಲ್ಲ. ನನ್ನ ಬಳಿ ಒಂದು ವಿಡಿಯೊ ರಿಕಾರ್ಡಿಂಗ್ ಇದೆ. ಈ ವಿಡಿಯೊ ರಿಕಾರ್ಡಿಂಗ್ ಶ್ರೀ ಅಮಿತ್ ಶಾ ಅವರ ಸಹಚರರು, ಒಡನಾಡಿಗಳು ನವೆಂಬರ್ ೮ರಿಂದ ಹಿಡಿದು ಇಂದಿನವರೆಗೂ ನೋಟುಗಳ ವಿನಿಮಯದ ವ್ಯವಹಾರಗಳಲ್ಲಿ ಎಡಬಿಡದೆ ನಿರತರಾಗಿದ್ದಾರೆ ಎಂಬ ವಾಸ್ತವಾಂಶವನ್ನು ಯಾವುದೇ ಸಂದೇಹವಿಲ್ಲದ ರೀತಿಯಲ್ಲಿ ನಿಚ್ಚಳವಾಗಿ ಸಾಬೀತುಪಡಿಸುತ್ತದೆ. ಶೇ. ೩೦ರಷ್ಟು ರಿಯಾಯಿತಿ ದರದಲ್ಲಿ ಕಪ್ಪುಹಣವನ್ನು ಬಿಳಿಹಣವನ್ನಾಗಿ ಪರಿವರ್ತಿಸಿಕೊಳ್ಳುವ ಸಲುವಾಗಿ ಅವರ ಕಛೇರಿ ಮತ್ತು ಅವರ ಮನೆಯ ಮುಂದೆ ಕೊನೆಯಿಲ್ಲದಂತಿರುವ ಕ್ಯೂಗಳಲ್ಲಿ ಜನರು ನಿಂತು ತಮ್ಮ ಸರದಿಗಾಗಿ ನಿಂತಿರುವುದು ಏನನ್ನು ಸೂಚಿಸುತ್ತದೆ ಹೇಳಿ?

ಹಾಗೆ ವಿನಿಮಯ ಮಾಡಿಕೊಳ್ಳಲಿಚ್ಛಿಸುವವರು ಯಾವುದೇ ಗುರುತಿನ ಚೀಟಿಯನ್ನೋ, ಆಧಾರ್ ಕಾರ್ಡನ್ನೋ ತೋರಿಸಬೇಕೆಂಬ ಕಡ್ಡಾಯ ವೇನಿರಲಿಲ್ಲ. ಅವರು ಕಡಿಮೆ ಎಂದರೆ ೧ ಕೋಟಿ ರೂ.ಗಳನ್ನಾದರೂ ಕೊಂಡೊಯ್ಯಬೇಕು. ಅಲ್ಲಿರುವ ಸಿಬ್ಬಂದಿ ಪಟಪಟನೆ ಆ ನೋಟಿನ ಕಟ್ಟುಗಳನ್ನು ಎಣಿಸಿ ಸರಿಯೆಂದು ಖಾತ್ರಿಯಾದ ಮರುಕ್ಷಣವೇ ಅಧಿಕೃತವಾದ, ಕಾನೂನುಬದ್ಧವಾದ ೬೫ ಲಕ್ಷ ಮೌಲ್ಯವುಳ್ಳ ನೋಟುಗಳನ್ನು ಹಸ್ತಾಂತರಿಸುತ್ತಾರೆ. ನನಗೆ ಈ ವಿಡಿಯೋವನ್ನು ಸಾರ್ವಜನಿಕರ ವೀಕ್ಷಣೆಗೆ ಬಿಡುವುದು ಕಷ್ಟದ ಕೆಲಸವೇನಲ್ಲ. ಆದರೆ ಮೋದಿ ಭಾಯ್, ಇಂತಹ ರಾಷ್ಟ್ರವಿರೋಧಿ, ವಂಚನೆಯ ಕೃತ್ಯದಲ್ಲಿ ತೊಡಗಿರುವ ಅಮಿತ್ ಶಾ ಮತ್ತವರ ಸಹಚರರ ವಿರುದ್ಧ ಕ್ರಮ ತೆಗೆದುಕೊಳ್ಳುವ ಬದಲಿಗೆ ನೀವು ಕ್ಯೂನಲ್ಲಿ ನಿಂತವರನ್ನು ಶಿಕ್ಷೆಗೆ ಒಳಪಡಿಸುತ್ತೀರಿ ಎಂಬುದು ನನಗೆ ತಿಳಿದಿದೆ. ಅದೇನೇ ಇರಲಿ, ನಾನು ಈ ವಿಡಿಯೋವನ್ನು ಒಂದಿಬ್ಬರು ಮೂವರು ಹಿರಿಯ ಪತ್ರಕರ್ತರಿಗೆ ತೋರಿಸುತ್ತೇನೆ ಮತ್ತು ಅದೇ ವೇಳೆ ಅದರಲ್ಲಿ ಸತ್ಯಾಂಶವಿದೆಯೇ ಇಲ್ಲವೇ ಎಂದು ಖಚಿತ ಪಡಿಸಿಕೊಳ್ಳುವ ಮತ್ತು ಆ ಪತ್ರಕರ್ತರಿಂದ ನಾನು ನೀಡುವ ಹೇಳಿಕೆಯ ಸತ್ಯಾಸತ್ಯತೆಯ ಬಗ್ಗೆ ತಿಳಿದು ಕೊಳ್ಳುವ ಸಲುವಾಗಿ ನಿಮಗೂ ಪೂರ್ವಭಾವಿಯಾಗಿ ತಿಳಿಸುತ್ತೇನೆ. ಲೆಕ್ಕವಿಲ್ಲದಷ್ಟು ಅವ್ಯವಹಾರಗಳು ಮತ್ತು ಅಕ್ರಮಗಳು ಜರುಗಿವೆ ಎಂಬ ವಿಚಾರ ನಿನ್ನೆ ನಿಮ್ಮ ಗಮನಕ್ಕೆ ಬಂದನಂತರವಷ್ಟೆ, ನೀವು ಜಿಲ್ಲಾ ಮಟ್ಟದ ಸಹಕಾರಿ ಬ್ಯಾಂಕುಗಳನ್ನು ನಿಷೇಧಿಸಿರಿ ಎಂಬುದನ್ನು ನಿಮ್ಮನ್ನು ಹತ್ತಿರದಿಂದ ಬಲ್ಲವರಾರೂ ನಂಬಲಾರರು. ನಿಮ್ಮ ಶತ್ರುವೂ ಕೂಡ ನಿಮ್ಮ ಸಾಮರ್ಥ್ಯ, ದಕ್ಷತೆ ಮತ್ತು ಜಾಣ್ಮೆಯನ್ನು ಗೌರವಿಸುತ್ತಾನೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ಒಂದಂತೂ ನಿಜ; ಅದೆಂದರೆ, ಇಂತಹ ಗಹನವಾದ ಪರಿಸ್ಥಿತಿ ಇತ್ತು ಎಂಬ ವಿಚಾರ ನಿಮ್ಮ ಗಮನಕ್ಕೆ ಬಂದಿರಲಿಲ್ಲ ಎಂಬುದನ್ನು ಸುಲಭದಲ್ಲಿ ನಂಬಲು ಸಾಧ್ಯವಿಲ್ಲ, ಬಿಡಿ. ಯಾವುದೇ ಕ್ರಮವಾದರೂ ಸರಿಯೇ, ಅದರ ಕುರಿತು ಸಂಪೂರ್ಣ ಮಾಹಿತಿ ಇಲ್ಲದೆ, ಅದರ ಸಾಧ್ಯಾಸಾಧ್ಯತೆಗಳನ್ನು ಖಚಿತಪಡಿಸಿಕೊಳ್ಳದೆ ನೀವು ಅಂತಹ ಕ್ರಮವನ್ನು ಜಾರಿಗೊಳಿಸಲು ತೀರ್ಮಾನ ತೆಗೆದುಕೊಳ್ಳುವುದಿಲ್ಲ. ಗುಜರಾತಿನ ಎಲ್ಲ ಜಿಲ್ಲಾ ಸಹಕಾರಿ ಬ್ಯಾಂಕುಗಳೂ ಬಿಜೆಪಿ ಕಾರ್ಯಕರ್ತರ ನಿಯಂತ್ರಣದಲ್ಲಿವೆ ಎಂಬುದನ್ನು ಗಮನದಲ್ಲಿಟ್ಟು ಕೊಂಡೇ ಈ ಮಾತನ್ನು ಹೇಳುತ್ತಿದ್ದೇನೆ. ಇದು ನಾನು ನನ್ನ ಸ್ವಂತ ಅನುಭವದಿಂದ ತಿಳಿದಿರುವ ವಿಚಾರ. ಈ ಬ್ಯಾಂಕುಗಳು ನವೆಂಬರ್ ೮, ೨೦೧೬ರ ರಾತ್ರಿ ೯ ಗಂಟೆಯಿಂದ ನವೆಂಬರ್ ೯ರ ಬೆಳಗಿನ ಜಾವ ೫ ಗಂಟೆಯವರೆಗೆ ರೂ. ೫೦೦ ಮತ್ತು ರೂ. ೧೦೦೦ದ ಮುಖಬೆಲೆಯ ನೋಟುಗಳನ್ನು ಸ್ವೀಕರಿಸಿ ಕಡಿಮೆ ಮುಖಬೆಲೆಯ ನೋಟುಗಳನ್ನು ವಿನಿಮಯ ಮಾಡಿಕೊಂಡಿವೆ. ನವೆಂಬರ್ ೮ರಂದು ದೇಶದ ಬ್ಯಾಂಕುಗಳಲ್ಲಿ ಎಷ್ಟು ಹಣ ಇತ್ತು, ಯಾವ ಯಾವ ಮುಖಬೆಲೆಯ ನೋಟುಗಳಿದ್ದವು, ಎಂಬುದರ ಬಗ್ಗೆ ಸಂಪೂರ್ಣ ವಿವರಗಳನ್ನು ನೀಡಲು ರಿಸರ್ವ್ ಬ್ಯಾಂಕಿನ ಮೂಲಕ ನೀವು ಕರೆ ನೀಡಿದ್ದಿರಿ. ಅಗತ್ಯವೆನಿಸಿದರೆ ನೀವೇ ಇತ್ತ ಈ ಹೇಳಿಕೆಯ ಸತ್ಯಾಂಶದ ಬಗ್ಗೆ ಒಮ್ಮೆ ಖಚಿತಪಡಿಸಿಕೊಳ್ಳಿರಿ. ನನ್ನ ಈ ಮಾತುಗಳಿಗೆ ಯಾವುದೇ ಆಧಾರವಿಲ್ಲ ಎಂದು ಸಾಬೀತಾದರೆ ಸಾರ್ವಜನಿಕವಾಗಿ ಕ್ಷಮೆ ಕೋರುತ್ತೇನೆ.

ನೋಟು ರದ್ದತಿ ಘೋಷಿಸುವ ಮುನ್ನ ನಿಮ್ಮ ಆಪ್ತವಲಯದಲ್ಲಿರುವ ಕೈಗಾರಿಕೋದ್ಯಮಿಗಳಿಗೆ ಆ ಕುರಿತು ಸುಳಿವು ನೀಡಿದ್ದಿರಿ ಮತ್ತು ಆ ಪ್ರಕ್ರಿಯೆ ಮೂಲಕ ದೊಡ್ಡ ದೊಡ್ಡ ಖದೀಮರು, ಹೊಟ್ಟೆಬಾಕ ಮೀನುಗಳು, ತಿಮಿಂಗಿಲಗಳು ಪಾರಾಗಲು ಅವಕಾಶ ಮಾಡಿಕೊಟ್ಟಿದ್ದೀರಿ ಎಂಬ ಅನುಮಾನ ಜನರನ್ನು ಕಾಡಿಸುತ್ತಿದೆ. ಆ ಅನುಮಾನವನ್ನು ನಿವಾರಿಸಲು ೧ ಕೋಟಿಗೂ ಹೆಚ್ಚಿನ ಮೊತ್ತದ ಹಣವನ್ನು ಪತ್ತೆ ಹಚ್ಚಿರುವ ವಿವರಗಳನ್ನು ಭಾರತ ಸರ್ಕಾರದ ಅಧಿಕೃತ ಜಾಲತಾಣದಲ್ಲಿ ಪ್ರಕಟಿಸಿ ಜನರ ಗಮನಕ್ಕೆ ತರಬೇಕು. ದೇಶದ ೫೦೦ ಅತಿ ಶ್ರೀಮಂತ ಕಂಪನಿಗಳ ಯಾವುದೇ ಚೇರ್‌ಮನ್ ಅಥವಾ ಎಂ.ಡಿ. ತಮ್ಮ ಬೃಹತ್ ಮೊತ್ತದ ಆಸ್ತಿಪಾಸ್ತಿಗಳ ವಿವರಗಳನ್ನು ಬಹಿರಂಗಪಡಿಸುವುದಿಲ್ಲ ಎಂಬ ಖಾತ್ರಿ ನನಗಿದೆ. ಹಾಗೊಮ್ಮೆ ಬಹಿರಂಗಪಡಿಸಿಲ್ಲ ಎಂದಾದರೆ ನಾನು ಮಾಡಿರುವ ಆಪಾದನೆ ಸಾಬೀತಾದಂತೆಯೇ ಅಲ್ಲವೆ ? ನಾಲ್ಕು ಸಾವಿರ ಅಥವಾ ಇನ್ನೂ ಕಡಿಮೆ ಮೊತ್ತದ ಹಣವನ್ನು ಹಿಂಪಡೆಯಲು ಹಸಿವು, ಬಾಯಾರಿಕೆಯಿಂದ ಬಳಲುತ್ತ ಉದ್ದುದ್ದದ ಸಾಲುಗಳಲ್ಲಿ ತಮ್ಮ ಸರದಿಗಾಗಿ ಕಾಯುತ್ತ ನಿಂತಿದ್ದ ಜನರನ್ನು ನೋಡಿ ಕಳವಳಗೊಂಡೆ. ಆದರೆ ಯಾವ ಬ್ಯಾಂಕಿನ ಮುಂದೆಯೂ ಒಂದೇ ಒಂದು ಮರ್ಸಿಡಿಸ್, ಬಿಎಮ್‌ಡಬ್ಲ್ಯೂ, ಆಡಿ, ವೋಲ್ವೊ ಪೋರ್ಶೆ ಅಥವಾ ರೋವರ್‌ನಂತಹ ಕಾರುಗಳಾಗಲಿ ಅಥವಾ ಅವುಗಳ ಮಾಲೀಕರಾಗಲಿ ಕ್ಯೂನಲ್ಲಿ ನಿಂತದ್ದನ್ನು ನಾನು ನೋಡಲಿಲ್ಲ. ಬಹುಶಃ ಕಪ್ಪುಹಣವನ್ನು ದಾಸ್ತಾನು ಮಾಡಿಕೊಂಡಿರುವವರು ಹಾಗೆ ಬ್ಯಾಂಕುಗಳ ಮುಂದೆಯೋ ಎಟಿಎಂಗಳ ಮುಂದೆಯೋ ನಿಂತಿದ್ದ ವರಷ್ಟೇ ಹೊರತು ಈ ಮೇಲೆ ತಿಳಿಸಿದ ಡಿಲಕ್ಸ್ ಕಾರುಗಳ ಮಾಲೀಕರಲ್ಲ ಎಂಬುದು ನಿಮ್ಮ ಅಭಿಪ್ರಾಯವಿರಬಹುದು ಎಂದೆನಿಸುತ್ತದೆ. ಈಗಾಗಲೇ ಪ್ರಸ್ತಾಪಿಸಿದ ಆ ಅದೃಷ್ಟಶಾಲಿ ೫೦೦ ಮಂದಿ ಕೈಗಾರಿಕೋದ್ಯಮಿಗಳನ್ನು ಹೊರತುಪಡಿಸಿದಂತೆ, ಬಿಲ್ಡರುಗಳು, ಕಂಟ್ರ್ಯಾಕ್ಟರುಗಳು, ಅದರಲ್ಲೂ ಸರ್ಕಾರದಿಂದ ಕಬ್ಬಿಣದ ಗಣಿಕಾರಿಕೆಗೆ ಗುತ್ತಿಗೆ ಪಡೆದಿರುವ ಕಂಟ್ರ್ಯಾಕ್ಟರುಗಳು ಮತ್ತಿತರ ಬೃಹತ್ ಕೈಗಾರಿಕೋದ್ಯಮಿಗಳು, ಅಷ್ಟೇಕೆ ಇವರೆಲ್ಲರಿಗಿಂತ ಮಿಗಿಲಾಗಿ ರಾಜಕಾರಣಿಗಳು ಮತ್ತು ಅಧಿಕಾರಶಾಹಿ ವರ್ಗದವರು ಅದೆಷ್ಟು ಹಣವನ್ನು ಬ್ಯಾಂಕುಗಳಲ್ಲಿ ಠೇವಣಿ ರೂಪದಲ್ಲಿ ಇಟ್ಟಿದ್ದಾರೆ ಎಂಬೆಲ್ಲ ಅಂಶಗಳ ಕುರಿತ ವಿವರಗಳನ್ನು ತಿಳಿಯಲು ಈ ದೇಶದ ಜನ ಕಾತುರರಾಗಿದ್ದಾರೆ.

ಯಾರು ಯಾರು ಎಷ್ಟು ಎಷ್ಟು ಹಣ ಪಾವತಿಸಿದ್ದಾರೆ ಎಂಬ ಮಾಹಿತಿಯನ್ನು ಗಮನಕ್ಕೆ ತರದೆ ಹೋದರೆ ದೇಶದಲ್ಲಿರುವ ಕಪ್ಪುಹಣದ ಒಟ್ಟು ಮೊತ್ತದ ಶೇ. ೫೦ರಷ್ಟನ್ನು ದಾಸ್ತಾನು ಮಾಡಿ ಕೊಂಡಿದ್ದ ಆ ಹತ್ತು, ಹನ್ನೆರಡು ಮಂದಿ ಕೈಗಾರಿಕೋದ್ಯಮಿಗಳಿಗೆ ನಿಮ್ಮ ಕೃಪೆಯಿಂದ ನೋಟು ರದ್ದತಿಯ ಬಗ್ಗೆ ನವೆಂಬರ್ ೮ರ ಮುಂಚೆಯೇ ಮಾಹಿತಿ ನೀಡಲಾಗಿತ್ತು ಎಂಬ ಅಪವಾದವು ಸಾಬೀತಾದಂತಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಇದೇ ಕೈಗಾರಿಕೋದ್ಯಮಿ ಮಹಾಶಯರಿಗೆ ನೀವು ೧ ಲಕ್ಷ ಕೋಟಿ ರೂ.ಗಳ ಮೌಲ್ಯವುಳ್ಳ ಭೂಮಿಯನ್ನು ದಯಪಾಲಿಸಿದ್ದೀರಿ. ಅವರ್‍ಯಾರೂ ಕನಿಷ್ಠ ೭೦೦ ಜನರಿಗೆ ಉದ್ಯೋಗವಕಾಶಗಳನ್ನೂ ಕಲ್ಪಿಸಿಕೊಟ್ಟಿಲ್ಲ. ಬ್ಯಾಂಕುಗಳ ಮುಂದೆ ಸಣ್ಣಪುಟ್ಟ ಮೊತ್ತ ಹಣ ಹಿಂಪಡೆಯಲು ದಿನಗಟ್ಟಲೆ ಕ್ಯೂನಲ್ಲಿ ನಿಂತು ರೋಸಿಹೋಗಿರುವ ಅಸಹಾಯಕ ಬಡಜನರು, ಬೃಹತ್ ಕೈಗಾರಿಕೋದ್ಯಮಿಗಳು ಎಷ್ಟು ಹಣವನ್ನು ಪಾವತಿಸಿದ್ದಾರೆ ಎಂಬುದನ್ನು ತಿಳಿಯಲಿಚ್ಛಿಸುತ್ತಾರೆ. ಈ ಕುರಿತ ಮಾಹಿತಿಯನ್ನು ಜಾಲತಾಣದಲ್ಲಿ ಪ್ರಕಟಿಸಿದ್ದೇ ಆದರೆ, ಅದರಿಂದಾಗಿ ೫೦೦ರಿಂದ ೪೦೦ ಕೋಟಿ ರೂ.ಗಳನ್ನು ಪಾವತಿಸಿರುವ ವ್ಯಕ್ತಿಗಳ ಹಾಗೂ ನಿಜಕ್ಕೂ ಅವರಿಗೆ ಇರುವ ಆಸ್ತಿಪಾಸ್ತಿಗಳು ಮತ್ತು ಆದಾಯ ಕುರಿತ ವಿವರಗಳನ್ನು ಮರೆಮಾಚಿ ಸುಳ್ಳು ಲೆಕ್ಕ ನೀಡಿರುವವರ ಮೇಲೆ ಆದಾಯ ತೆರಿಗೆ ಇಲಾಖೆ ಏನು ಕ್ರಮ ತೆಗೆದುಕೊಂಡಿದೆ ಎಂಬೆಲ್ಲ ವಿವರಗಳು ಬಹಿರಂಗಗೊಳ್ಳುತ್ತವೆ. ೭ ಮತ್ತು ೮ನೇ ತಾರೀಖಿನಿಂದ ಸಂಜೆ ೮ ಗಂಟೆಗೆ ಮುಂಚೆಯೇ ಲಕ್ಷ ಲಕ್ಷ ಕೋಟಿ ಮೌಲ್ಯ ಚಿನ್ನಾಭರಣಗಳನ್ನು ಖರೀದಿಸಿರುವ ಅವ್ಯವಹಾರಗಳಿಗೆ ಲೆಕ್ಕವೇ ಇಲ್ಲ. ಈ ಕುರಿತು ತಾವು ಸೂಕ್ತ ರೀತಿಯಲ್ಲಿ ತನಿಖೆ ನಡೆಸಲು ಆದೇಶ ನೀಡಬೇಕೆಂದು ವಿನಂತಿಸುತ್ತೇನೆ. ಇಂತಹ ಕ್ರಮದಿಂದಾಗಿ ಭಾರಿ ಭಾರಿ ಕುಳಗಳು ದಿಢೀರನೆ ಎರಡೇ ದಿವಸಗಳಲ್ಲಿ ರಾಶಿ ರಾಶಿ ಚಿನ್ನಾಭರಣಗಳನ್ನು ಮತ್ತು ವಜ್ರವನ್ನು ಕೊಳ್ಳಲು ಕಾರಣವಾದರೂ ಏನಿತ್ತೆಂಬುದು ಜನಸಾಮಾನ್ಯರಿಗೆ ತಿಳಿದಂತಾಗುತ್ತದೆ.

ಈ ಎಲ್ಲ ಮಾಹಿತಿಯನ್ನು ಭಾರತ ಸರ್ಕಾರ ಅಧಿಕೃತ ಜಾಲತಾಣದಲ್ಲಿ ಪ್ರಕಟಿಸಬೇಕೆಂದು ವಿನಯಪೂರ್ವಕವಾಗಿ ಕೋರುತ್ತೇನೆ. ಆಗಲಾದರೂ ನೀವು ಕೈಗೊಂಡ ನೋಟು ರದ್ದತಿ ಕ್ರಮದಿಂದಾಗಿ ಎಷ್ಟರಮಟ್ಟಿಗೆ ದೇಶದ ಹಿತಾಸಕ್ತಿಯನ್ನು ರಕ್ಷಿಸಲು ಸಾಧ್ಯವಾಗಲಿದೆ ಅಥವಾ ಅದಕ್ಕೆ ತದ್ವಿರುದ್ಧವಾಗಿ ನಿಮ್ಮ ಕ್ರಮದಿಂದಾಗಿ ವೈಯಕ್ತಿಕವಾಗಿ ನಿಮಗೆ ಮತ್ತು ನಿಮ್ಮ ಆಪ್ತ ಬಳಗದವರಿಗೆ ಹಾಗೂ ನಿಮ್ಮ ಪಕ್ಷದ ಕಾರ್ಯಕರ್ತರಿಗೆ ಲಾಭವಾಗಲಿದೆ ಎಂಬುದನ್ನು ಜನರು ನಿರ್ಧರಿಸಲು ಸಾಧ್ಯವಾಗುತ್ತದೆ.

ಇತಿ ನಿಮ್ಮ ವಿಶ್ವಾಸಿ,

ಯತಿನ್ ಓಝ

ಕೃಪೆ : **ಮೇನ್‌ಸ್ಟ್ರೀಮ್**

(ಡಿಸೆಂಬರ್ ೧೦, ೨೦೧೬)






# ಆಕಾಶ ಮತ್ತು ನಗು

ಡಾ|| ಪಾರ್ವತಿ ಜಿ. ಐತಾಳ್

'ಅಕ್ಷತಾ, ಅಫ್ಸಾ, ಅಜಯ್, ಆಕಾಶ್...' ನಾನು ತರಗತಿಯಲ್ಲಿ ಅಟೆಂಡೆನ್ಸ್ ಕರೆಯುತ್ತಿದ್ದೆ. ಅರೆ! ಆಕಾಶ ತರಗತಿಗೆ ಬಂದೇ ಇಲ್ಲವಲ್ಲ! ಎಂಟು ದಿನಗಳಿಂದ ಹುಡುಗನ ಪತ್ತೆಯಿಲ್ಲ. ಹಿಂದಿನ ಬೆಂಚಿನಲ್ಲಿ ಕುಳಿತು ಪ್ರತಿದಿನವೂ ಪಕ್ಕದಲ್ಲಿ ಕುಳಿತವರನ್ನು ಚಿವುಟುತ್ತ, ತಿವಿಯುತ್ತ, ದೂಡುತ್ತ ಪಾಠಕ್ಕೆ ಸ್ವಲ್ಪವೂ ಗಮನ ಕೊಡದೆ ನನ್ನಿಂದ ಸದಾ ಬೈಯಿಸಿಕೊಳ್ಳುತ್ತಿದ್ದ. ನೋಡಲು ಸ್ಫುರದ್ರೂಪಿ. ಬೆಳ್ಳಗೆ ಎತ್ತರವಾಗಿ ಮುದ್ದುಮುದ್ದಾಗಿದ್ದ. ಸದೃಢ ಮೈಕಟ್ಟು. ಒಂದೇ ನೋಟಕ್ಕೆ ಆಕರ್ಷಿಸುವ ಕಣ್ಣುಗಳು. ಕಲಿಯುವುದರಲ್ಲಿ ದಡ್ಡನೇನೂ ಅಲ್ಲ. ಆದರೆ ಜೀವನದಲ್ಲೇ ಆಸಕ್ತಿ ಕಳೆದುಕೊಂಡವನಂತೆ ವರ್ತಿಸುತ್ತಿದ್ದ.

'ಆಕಾಶ ಯಾಕೆ ಕ್ಲಾಸಿಗೆ ಬರ್ತಾ ಇಲ್ಲ?' ನಾನು ಆತನ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದ ಹುಡುಗರಲ್ಲಿ ಕೇಳಿದೆ. ಅವರೆಲ್ಲರೂ ಪರಸ್ಪರ ಮುಖ ನೋಡಿಕೊಂಡು ಮುಸಿಮುಸಿ ನಕ್ಕರು.

ಒಬ್ಬ ಹೇಳಿದ: 'ಮೇಡಂ, ಅವನಿಗೆ ಹುಚ್ಚು... ಕಂಕನಾಡಿ ಆಸ್ಪತ್ರೆಗೆ ಸೇರಿಸಿದ್ದಾರೆ. ಒಂದು ವಾರ ಆಯ್ತು...'

'ಅಂ!... ಏನಂದಿರಿ! ಹುಚ್ಚು...' ನಾನು ಆಘಾತಗೊಂಡು ತಡವರಿಸಿದೆ.

'ಹೌದು ಮೇಡಂ. ತುಂಬ ಕಾಲ ಆಯ್ತು. ಅವನ ತಂದೆ ಆಗಾಗ ಹಾಸ್ಟೆಲಿಗೆ ಬಂದು ಅವನನ್ನು ಸೈಕಿಯಾಟ್ರಿಸ್ಟ್ ಹತ್ತಿರ ಕರೆದುಕೊಂಡು ಹೋಗ್ತಿದ್ರು. ಕೌನ್ಸೆಲಿಂಗು, ಔಷಧಿ, ಮಾತ್ರೆ, ಮದ್ದು ಎಲ್ಲ ಆಯ್ತು. ಮೊನ್ನೆಯಂತೂ ಜೋರಾಗಿ ಬೊಬ್ಬೆ – ಅಳು ಶುರು ಮಾಡಿದ. ನೆಲದ ಮೇಲೆ ಹೊರಳಾಡಿ ಕೈಕಾಲು ಬಡೀತಿದ್ದ. ಕಂಕನಾಡಿಗೆ ಕರೆದುಕೊಂಡು ಹೋದರು. ನಾಲ್ಕು ದಿನ ಆಯ್ತು ಮೇಡಂ. ನೀವು ರಜೆಯಲ್ಲಿದ್ರಲ್ಲ... ಆದ್ರಿಂದ ನಿಮಗೆ ಗೊತ್ತಾಗ್ಲಿಲ್ಲ...'

ಅರೆ! ಇಷ್ಟೆಲ್ಲ ನಡೆದುಹೋಯಿತೆ? ನನಗೆ ಗೊತ್ತೇ ಆಗಲಿಲ್ಲವಲ್ಲ? ಪ್ರತಿಷ್ಠಿತ ಶಾಲೆ, ದೊಡ್ಡ ಕ್ಯಾಂಪಸ್ ಆದದ್ದರಿಂದ ಹಾಸ್ಟೆಲಿನಲ್ಲಿ ನಡೆಯುವ ಘಟನೆಗಳು ಎಲ್ಲರಿಗೂ ಗೊತ್ತಾಗುವುದಿಲ್ಲ. ಅಲ್ಲದೆ, ನಾಲ್ಕು ದಿನಗಳಿಂದ ಜ್ವರವೆಂದು ನಾನೂ ರಜೆಯಲ್ಲಿದ್ದೆ.

ಆಕಾಶ ತರಗತಿಯಲ್ಲಿ ಎಷ್ಟೇ ಕೀಟಲೆ ಮಾಡಿದರೂ ನನಗೆ ಅವನ ಬಗ್ಗೆ ಅಸಹನೆ ಇರಲಿಲ್ಲ. ಸದಾ ಅವನ ಕಣ್ಣುಗಳಲ್ಲಿ ಒಡ ಮೂಡುತ್ತಿದ್ದ ಏನೋ ಒಂದು ಚಡಪಡಿಕೆಯ ಭಾವವು ನನ್ನಲ್ಲಿ ಅವನ ಬಗ್ಗೆ ಸಹಾನುಭೂತಿ ಹುಟ್ಟುವಂತೆ ಮಾಡಿತ್ತು. ಅವನ ಕಣ್ಣುಗಳ ಹಿಂದೆ ಏನೋ ಕಥೆ ಇದೆ ಎಂದು ಅನ್ನಿಸುವಂತೆ ಮೂಡುತ್ತಿತ್ತು.

ಈಗ ಅವನ ಸಹಪಾಠಿಗಳು ಹೇಳಿದ ಸುದ್ದಿ ಕೇಳಿ ನಾನು ನನ್ನ ಮನಸ್ಸಿನ ಸ್ಥಿಮಿತ ಕಳೆದುಕೊಂಡೆ. ಕೂಡಲೇ ಆಕಾಶನನ್ನು ಹೋಗಿ ಕಾಣಲು ಮನಸ್ಸು ತಹತಹಿಸಿತು. ನಾಲ್ಕು ಗಂಟೆಗೆ ಶಾಲೆ ಬಿಟ್ಟಕೂಡಲೇ ಕೈನೆಟಿಕ್ಕನ್ನು ಕಂಕನಾಡಿಗೆ ದೌಡಾಯಿಸಿದೆ. ಮನೆಗೆ ಬರುವುದು ಲೇಟಾದೀತೆಂದು ಶಶಾಂಕನಿಗೆ ಫೋನ್ ಮಾಡಿ ತಿಳಿಸಿದೆ. ಆಕಾಶ ಕಪ್ಪಾಗಿತ್ತು. ಜಡಿಮಳೆಯ ಮುನ್ಸೂಚನೆಯಿತ್ತು.

ಆಕಾಶ್ ವಾರ್ಡ್ ನಂ. ೧೧ರಲ್ಲಿ ಹಾಸಿಗೆಯಲ್ಲಿ ಮಲಗಿ ನಿದ್ರಿಸುತ್ತಿದ್ದ. ತಂದೆ ಜಗನ್ನಾಥರಾವ್ ಜತೆಗಿದ್ದರು. ಅವರನ್ನು ಈ ಮೊದಲೇ ಎಷ್ಟೋ ಬಾರಿ ನಾನು ಶಿಕ್ಷಕ–ಪೋಷಕರ ಸಂಘದ ಸಭೆಗಳಲ್ಲಿ ನೋಡಿದ್ದೆ. ಆಗಾಗ ಅವರು ನನ್ನ ಹತ್ತಿರ ಆಕಾಶನ ಬಗ್ಗೆ ಮಾತನಾಡುತ್ತಿದ್ದರು ಕೂಡ. ಅವರು ಮಂಗಳೂರು ನಗರದ ಪ್ರಸಿದ್ಧ ಪ್ರಾಸಿಕ್ಯೂಶನ್ ಲಾಯರ್. ತಮ್ಮ ವಾಕ್‌ಪ್ರತಿಭೆ, ಜಾಣ್ಮೆ, ವಾದ ವೈಖರಿಗಳಿಂದ ಜನರ ಗಮನ ಸೆಳೆದವರು. ಲವಲವಿಕೆಯಿಂದ ತುಂಬಿದ ಲಕ್ಷಣವಾದ ಮುಖ ಅವರದ್ದು. ಇಲ್ಲಿ ನೋಡಿದರೆ ಮುಖ ಪೂರ್ತಿಯಾಗಿ ಬಿಳಿಚಿಕೊಂಡಿತ್ತು. ಸೋತವರ ಮುಖದಂತೆ ನಿಸ್ತೇಜವಾಗಿತ್ತು.

ನಾನು ಆಕಾಶನ ಬಗ್ಗೆ ಜಗನ್ನಾಥರಾಯರಲ್ಲಿ ವಿಚಾರಿಸಿದೆ. ಮೊದಮೊದಲು ಅವರು ಏನೂ ಮಾತನಾಡಲಿಲ್ಲ. ಆದರೆ ನನ್ನ ಧ್ವನಿಯಲ್ಲಿದ್ದ ಕಾಳಜಿಯ ಅರಿವಾದ ಕೂಡಲೇ ಅವರ ಕಣ್ಣುಗಳಲ್ಲಿ ನೀರು ಕಾಣಿಸಿಕೊಂಡಿತು. ನನ್ನ ಬಳಿ ಎಲ್ಲವನ್ನೂ ಹೇಳಿಕೊಳ್ಳಬೇಕೆಂದು ಅವರಿಗನ್ನಿಸಿದಂತೆ ಕಂಡಿತು. ಗದ್ಗದ ಕಂಠದಿಂದ ತಡವರಿಸುತ್ತ ಅವರು ನಿಧಾನವಾಗಿ ಹೇಳತೊಡಗಿದರು.

'ಮೇಡಂ, ವಿದ್ಯಾರ್ಥಿಗಳ ಬಗ್ಗೆ ನೀವು ಇಟ್ಟುಕೊಂಡಿರುವ ಪ್ರೀತಿಯ ಬಗ್ಗೆ ನಾನು ಚೆನ್ನಾಗಿ ಕೇಳಿಬಲ್ಲೆ. ಆಕಾಶನ ಬಗ್ಗೆ ನಿಜವಾದ ಕಾಳಜಿಯಿಂದ ವಿಷಯ ತಿಳಿದುಕೊಳ್ಳಲು ಬಂದಿದ್ದೀರ. ನಿಮ್ಮ ಹತ್ತಿರ ಏನೂ ಮುಚ್ಚುಮರೆ ಮಾಡದೆ ಎಲ್ಲವನ್ನೂ ಹೇಳಿ ಹೃದಯ ಹಗುರ ಮಾಡಿಕೊಳ್ಳೋಣವೆಂದು ನನಗನ್ನಿಸಿದೆ...'

ಆಕಾಶನ ಈ ಸ್ಥಿತಿಗೆ ನಾನು ಕಾರಣನೋ ಅಥವಾ ನನ್ನ ಹೆಂಡತಿಯೋ ನನಗೆ ಗೊತ್ತಿಲ್ಲ. ಸಹನಾಳನ್ನು ನಾನು ಪ್ರೀತಿಸಿ ಮದುವೆಯಾದೆ. ಕಾಲೇಜು ದಿನಗಳಲ್ಲಿ ಅವಳು ಸ್ತ್ರೀಸ್ವಾತಂತ್ರ್ಯದ ಪರವಾಗಿ ದನಿಯೆತ್ತರಿಸಿ ಭಾಷಣ ಮಾಡಿದರೆ ನಾನು ಜೋರಾಗಿ ಚಪ್ಪಾಳೆ ತಟ್ಟುತ್ತಿದ್ದೆ. ಅವಳ ಸ್ವಾಭಿಮಾನವನ್ನು ನೋಡಿ ಮೆಚ್ಚಿ ನಾನು ಅವಳನ್ನು ಮದುವೆಯಾದೆ. ಬುದ್ಧಿವಂತೆಯೂ, ಒಳ್ಳೆಯ ವಾಗ್ಮಿಯೂ ಆದ ಸಹನಾ ನಾನು ವಕೀಲಿ ವೃತ್ತಿಯಲ್ಲಿ ಮೇಲೆ ಬರುವಲ್ಲಿ ತನ್ನ ಕೊಡುಗೆಯನ್ನು ನೀಡಿದಳು...

ಆದರೆ.. ಮದುವೆಯಾಗಿ ಆರು ವರ್ಷಗಳು ಕಳೆದರೂ ಅವಳು ತಾನು ತಾಯಿಯಾಗುವ ಬಯಕೆಯನ್ನು ಪ್ರಕಟಪಡಿಸಲೇ ಇಲ್ಲ. ತಂದೆಯಾಗುವ ಬಯಕೆ ನನ್ನಲ್ಲಿ ತೀವ್ರವಾದಾಗ ನಾನು ಅದನ್ನು ಅವಳ ಬಳಿ ಹೇಳಿಕೊಂಡೆ. ಅದಕ್ಕೆ ಅವಳು ಸಿಡುಕಿ ನುಡಿದಳು: 'ಇಲ್ಲ, ತಾಯಿಯಾಗುವ ಆಸೆ ನನ್ನಲ್ಲಿ ಎಳ್ಳಷ್ಟೂ ಇಲ್ಲ. ನನ್ನ ಅಭಿಪ್ರಾಯದಲ್ಲಿ ಹೆಣ್ಣು ತಾಯಿಯಾಗುವುದೆಂದರೆ

ತನ್ನೆಲ್ಲ ಸ್ವಾತಂತ್ರ್ಯವನ್ನೂ ಕಳೆದುಕೊಂಡಂತೆ. ತಾಯಿಯಾದ ನಂತರ ಅವಳಿಗೆ ಅವಳ ಸ್ವಂತ ಬದುಕೇ ಇಲ್ಲ... ತನ್ನೆಲ್ಲ ವೈಯಕ್ತಿಕ ಸುಖವನ್ನೂ ಮರೆತು ಅವಳು ತನ್ನ ಮಕ್ಕಳ ಕಡೆಗೆ ಗಮನ ಹರಿಸಬೇಕಾಗುತ್ತದೆ. ಅಂತಹ ತ್ಯಾಗದ ಬದುಕು ನನಗಂತೂ ಬೇಕಾಗಿಲ್ಲ...'

ನಾನು ಹಾಗಲ್ಲವೆಂದು ವಾದಿಸಿ ಅವಳಿಗೆ ತುಂಬ ತಿಳಿ ಹೇಳಿದೆ! 'ನೋಡು. ನೀನು ತಪ್ಪಾಗಿ ಯೋಚಿಸುತ್ತ ಇದ್ದೀಯಾ. ಸ್ತ್ರೀವಾದದ ಬಗ್ಗೆ ಓದಿ ಓದಿ ನಿನ್ನ ತಲೆ ಕೆಟ್ಟುಹೋಗಿದೆ. ತಾಯ್ತನದಿಂದ ವೈಯಕ್ತಿಕ ಸುಖ ಹಾಳಾಗುತ್ತದೆ ಅನ್ನುವುದು ಪಾಶ್ಚಾತ್ಯ ಸ್ತ್ರೀವಾದಿ ಚಿಂತಕರ ಅತಿರೇಕದ ಧೋರಣೆ. ಹೆಣ್ಣಿನ ಬದುಕಿನ ಹೆಚ್ಚುಗಾರಿಕೆ ಇರುವುದೇ ತಾಯ್ತನದಲ್ಲಿ. ಸುಖ–ತ್ಯಾಗಗಳ ಬಗ್ಗೆ ನೀನು ಏನೂ ಚಿಂತಿಸಬೇಡ. ನಾನು ಇದ್ದೇನಲ್ಲ? ತಂದೆಯಾಗಿ ಜವಾಬ್ದಾರಿ ತೆಗೆದುಕೊಳ್ಳಲು ನಾನು ಸಿದ್ಧನಿದ್ದೇನಲ್ಲ?' ಎಂದೆ.

ತುಂಬ ಹೇಳಿದ ನಂತರ ನನ್ನ ಒತ್ತಾಯಕ್ಕೆ ಮಣಿದು ನನಗೋಸ್ಕರ ತಾಯಿಯಾಗಲು ಸಹನಾ ಒಪ್ಪಿದಳು. ಹಾಗೆ ಆಕಾಶ ಹುಟ್ಟಿದ. ಆದರೆ ಮಗು ಹುಟ್ಟಿದ ಕ್ಷಣದಿಂದ ಅವಳು ಒಮ್ಮೆಯೂ ಆ ಮಗುವಿನೆಡೆಗೆ ಕಣ್ಣೆತ್ತಿ ಸಹ ನೋಡಲಿಲ್ಲ. ಮಗುವಿನ ಎಲ್ಲ ಆರೈಕೆಯನ್ನು ಆಯಾ ಮತ್ತು ನಾನು ಸೇರಿ ಮಾಡಬೇಕಾಯಿತು. ಕೆಲವೇ ದಿನಗಳಲ್ಲಿ ಸದಾ ಅಳುತ್ತಿರುವ ಮಗುವಿನ ಬಗ್ಗೆ ಅವಳ ಜಿಗುಪ್ಸೆ ಯಾವ ಮಟ್ಟಕ್ಕೆ ಹೋಯಿತೆಂದರೆ ಮಹಾಭಾರತದ ಗಂಗೆ ಭೀಷ್ಮನನ್ನು ತೊರೆದುಹೋದಂತೆ ಅವಳು ನನ್ನನ್ನು ಮಗುವಿನೊಂದಿಗೆ ಒಂಟಿಯಾಗಿ ಬಿಟ್ಟು ಹೊರಟುಹೋದಳು...

ಉಕ್ಕೇರಿದ ನೋವಿನ ನೆನಪುಗಳು ಸ್ವಲ್ಪ ಹೊತ್ತು ಜಗನ್ನಾಥರಾಯರನ್ನು ಮುಂದುವರಿಸಲು ಬಿಡಲಿಲ್ಲ. ಅವರು ಶೂನ್ಯದತ್ತ ನೋಡುತ್ತ ಸುಮ್ಮನೆ ಕುಳಿತರು. ಪಕ್ಕದ ವಾರ್ಡಿನಲ್ಲಿ ಹೆಂಗಸೊಬ್ಬಳು ಗೋಳಾಡುತ್ತಿದ್ದಳು. 'ಪುಟ್ಟ ಎಲ್ಲಿ... ನನ್ನ ಪುಟ್ಟ ಎಲ್ಲಿ.. ನನ್ನ ಪುಟ್ಟನ್ನ ಕರ್ಕೊಂಬನ್ನಿ... ಪುಟ್ಟಾ... ಪುಟ್ಟಾ' ಎಂದು ಬೊಬ್ಬಿಡುತ್ತಿದ್ದಳು. ಸ್ವಲ್ಪ ಹೊತ್ತಿನಲ್ಲಿ ಇದ್ದಕ್ಕಿದ್ದಂತೆ ಕುಣಿಯುತ್ತ ಹೊರಗೆ ಓಡಿಬಂದಳು. 'ಪುಟ್ಟ ಬಂದ... ಪುಟ್ಟ ಬಂದ...' ಎಂದು ಕೇಕೇ ಹಾಕಿದಳು. ಬಹುಶಃ ಮಗನನ್ನು ಕಳೆದುಕೊಂಡವಳಾಗಿರಬೇಕು ಎಂದು ನಾನಂದುಕೊಂಡೆ.

ಜಗನ್ನಾಥರಾಯರು ಪುನಃ ಮಾತನಾಡಲಾರಂಭಿಸಿದರು :

'ನಾನು ನನ್ನ ವಕೀಲಿ ವೃತ್ತಿಯಲ್ಲಿ ಕೀರ್ತಿ ಗಳಿಸಿ ಮೇಲಕ್ಕೇರುತ್ತಿದ್ದ ಕಾಲವಾಗಿತ್ತದು. ಮಗುವಿನ ಮೇಲೆ ನನಗೆ ಎಷ್ಟು ಪ್ರೀತಿಯಿದ್ದರೂ ಅವನ ಆಟ–ಪಾಠ, ಲಾಲನೆ–ಪಾಲನೆಗಳಿಗೆ ಹೆಚ್ಚು ಗಮನ ಕೊಡಲು ನನ್ನಿಂದಾಗುತ್ತಿರಲಿಲ್ಲ. ಬೇರೆ ದಾರಿ ಕಾಣದೆ ಎಲ್ಲ ಜವಾಬ್ದಾರಿಯನ್ನು ಕೆಲಸದವರಿಗೆ ವಹಿಸಿ ಕೊಟ್ಟುಬಿಟ್ಟೆ. ಹಣ ರಾಶಿ ರಾಶಿಯಾಗಿ ಕೈ ಸೇರುತ್ತಿತ್ತು. ಕೀರ್ತಿ ಮುಗಿಲು ಮುಟ್ಟಿತ್ತು. ಆ ವೈಭವದ ನಡುವೆ ಇನ್ನೊಂದು ಮದುವೆಯಾಗಬೇಕೆಂದು ನನಗೆ ಅನ್ನಿಸಲೂ ಇಲ್ಲ. ರಾತ್ರಿ ಹೊತ್ತು ಆಫೀಸಿನಿಂದ ಮನೆಗೆ ತಲುಪುವ ಹೊತ್ತಿಗೆ ಆಕಾಶ ಮಲಗಿ ನಿದ್ದೆ ಹೋಗಿರುತ್ತಿದ್ದ. ಬೆಳಗ್ಗೆ ಹೊರಡುವ ಹೊತ್ತಿಗೆ ಇನ್ನೂ ಎದ್ದಿರುತ್ತಿರಲಿಲ್ಲ.

ಆಕಾಶನಿಗೆ ಶಾಲೆಗೆ ಸೇರುವ ವಯಸ್ಸಾದಾಗ ಊರಿನಲ್ಲಿ ಅತ್ಯಂತ ಪ್ರತಿಷ್ಠಿತ ಶಾಲೆಗೆ ಹೇಳಿದಷ್ಟು ದುಡ್ಡು ಸುರಿದು ಸೇರಿಸಿದೆ. ದಿನಾ ಅವನು ಕೇಳಿದ್ದೆಲ್ಲವನ್ನೂ ಕೊಡಿಸಿದೆ. ಕೈತುಂಬ ಹಣವನ್ನೂ ಕೊಟ್ಟೆ. ದೇವರ ದಯದಿಂದ ಅವನು ಬುದ್ಧಿವಂತನಾಗಿದ್ದ. ಯಾವುದೇ ಸಮಸ್ಯೆಯಿಲ್ಲದೆ ಪ್ರತಿ ತರಗತಿಯಲ್ಲೂ ತೇರ್ಗಡೆಯಾಗುತ್ತ ಹೋದ. ಹತ್ತನೇ ತರಗತಿಗೆ ತೇರ್ಗಡೆಯಾದ ನಂತರ ಅವನ ಅಧ್ಯಯನಕ್ಕೆ ಅನುಕೂಲವಾಗಲಿ ಅಂತ ಅದೇ ಶಾಲೆಯ ಹಾಸ್ಟೆಲಿಗೆ ಸೇರಿಸಿ ಟ್ಯೂಷನ್ನಿಗೂ ವ್ಯವಸ್ಥೆ ಮಾಡಿದೆ. ಅಲ್ಲಿಂದ ಆರಂಭವಾದವು ಅವನ ಸಮಸ್ಯೆಗಳು. ಹಾಸ್ಟೆಲಿನ ವಾರ್ಡನ್ ಮೂಲಕ ಅವನ ಬಗ್ಗೆ ಬೇರೆ ಬೇರೆ ಆರೋಪಗಳು ಆಗಾಗ ಬರತೊಡಗಿದವು... ಅಧ್ಯಯನದಲ್ಲಿ ಅನ್ಯಮನಸ್ಕತೆ, ಟ್ಯೂಷನ್ ತಪ್ಪಿಸುವುದು, ತರಗತಿಯಲ್ಲಿ ದುರ್ವರ್ತನೆ, ಕೀಟಲೆ, ಹುಡುಗಿಯರ ಹಿಂದೆ ಹೋಗುವುದು, ಪೋಲಿ ಹುಡುಗರ ಜತೆ ಸೇರಿ ಹುಡುಗಿಯರನ್ನು ಚುಡಾಯಿಸುವುದು... ಹೀಗೆ ಏನೇನೋ... ಒಬ್ಬ ಸಹಪಾಠಿ ಹುಡುಗಿಯ ಜತೆ ಲವ್ ಅಫೇರ್ ಇಟ್ಟುಕೊಂಡಿದ್ದಾನೆ ಎಂಬ ದೂರೂ ಬಂತು. ನಾನು ಅವನನ್ನು ಕರೆದು ಎಷ್ಟೆಷ್ಟೋ ಹೇಳಿ ನೋಡಿದೆ. ಓದಿನ ಕಡೆಗೆ ಗಮನ ಕೊಡು, ನಿನ್ನ ಭವಿಷ್ಯವನ್ನು ಕೈಯಾರೆ ಹಾಳು ಮಾಡಿಕೊಳ್ಳಬೇಡ ಎಂದೆ. ಸೈಕಿಯಾಟ್ರಿಸ್ಟ್ ಬಳಿಗೆ ಕರೆದುಕೊಂಡು ಹೋಗಿ ಕೌನ್ಸೆಲಿಂಗ್ ಮಾಡಿಸಿದೆ. ಔಷಧಿ ಕೊಡಿಸಿದೆ. ನಾನು ಬುದ್ಧಿ ಹೇಳಿದಾಗ ಎಲ್ಲದಕ್ಕೂ ತಲೆಯಾಡಿಸುತ್ತಿದ್ದ ಅವನು ಹಾಸ್ಟೆಲಿಗೆ ಹೋದ ನಂತರ ಮತ್ತೆ ಮೊದಲಿನಂತೆ ತನ್ನ ಚಾಳಿಗಳನ್ನು ಆರಂಭಿಸುತ್ತಿದ್ದ. ಪುನಃ ದೂರುಗಳು ಬರುತ್ತಿದ್ದವು...

ವಾರ್ಡನ್ ಗದರಿಸಿ ಎಚ್ಚರಿಕೆ ಕೊಟ್ಟರೆ ಅವರಿಗೆ ಎಗ್ಗಿಲ್ಲದೆ ಎದುರು ಮಾತನಾಡುತ್ತಿದ್ದ. ಒಂದು ದಿನವಂತೂ ಹಾಸ್ಟೆಲಿನಿಂದ ತಪ್ಪಿಸಿಕೊಂಡು ತನ್ನ ಗರ್ಲ್‌ಫ್ರೆಂಡ್ ಜತೆಗೆ ಎಲ್ಲಿಗೋ ಹೋಗಿ ಮರುದಿನ ಬಂದಿದ್ದ ಎಂಬ ದೂರೂ ನನ್ನ ಬಳಿ ಬಂತು. ನನಗೆ ದಿಕ್ಕೇ ತೋಚಲಿಲ್ಲ. ಹೀಗಾದರೆ ಏನು ಗತಿ? ಓದು ನಿಲ್ಲಿಸಿ ಮನೆಗೆ ಕರೆತರಲು ಸಾಧ್ಯವೇ? ಅದರಿಂದ ಅವನ ಭವಿಷ್ಯ ಹಾಳಾಗುವುದಿಲ್ಲವೇ ಎಂದು ಯೋಚಿಸಿ ವಾರ್ಡನ್ ಕೈಯಲ್ಲಿ ಹಣಕೊಟ್ಟು ಆಕಾಶನ ಬಗ್ಗೆ ವಿಶೇಷ ಕಾಳಜಿ ವಹಿಸಿ ನೋಡಿಕೊಳ್ಳುವಂತೆ ಹೇಳಿ ಬಂದೆ. ಒಬ್ಬ ಯಶಸ್ವಿ ವಕೀಲನಾಗಿ ನನ್ನ ಕೆಲಸಗಳ ಒತ್ತಡವನ್ನು ನಿಭಾಯಿಸಲಿಕ್ಕೇ ನನಗೆ ಸಮಯವಿರಲಿಲ್ಲ. ಈ ಮಧ್ಯೆ ಆಕಾಶ ಮೂರು–ನಾಲ್ಕು ಮಂದಿ ಹುಡುಗಿಯರೊಂದಿಗೆ ಸಂಪರ್ಕವಿಟ್ಟುಕೊಂಡಿದ್ದಾನೆ, ಸಂಜೆ ಹೊತ್ತು ಟ್ಯೂಷನ್ ತಪ್ಪಿಸಿ ಅವರ ಜತೆಗೆ ತಿರುಗಾಡುತ್ತಿದ್ದಾನೆ ಎಂಬ ದೂರು ಬಂತು. ಅವನ ಅಶಿಸ್ತು, ಹಾಸ್ಟೆಲ್ ನಿಯಮಗಳನ್ನು ಮುರಿದು ಧಿಕ್ಕರಿಸುವ ರೀತಿ ನೋಡಿ ಒಂದುದಿನ ವಾರ್ಡನ್ ಸಹನೆ ಮೀರಿ ಅವನನ್ನು ಹೊಡೆದು ಒಂದು ರೂಮಿನೊಳಗೆ ಕೂಡಿಹಾಕಿದರು. ಆಕಾಶ್ ಸಿಟ್ಟಿನಿಂದ ಕಿರಿಚಾಡಿದ. ಹಠ ಮಾಡಿ ಅನ್ನ ನೀರು ಮುಟ್ಟಲಿಲ್ಲ. ಕೊನೆಗೆ ನಿಶ್ಶಕ್ತನಾಗಿ ಎಚ್ಚರ ತಪ್ಪಿ ಬಿದ್ದ. ಮುಖಕ್ಕೆ ನೀರು ಸಿಂಪಡಿಸಿ ಎಬ್ಬಿಸಿದಾಗ ಅವನ ಮುಖಚಹರೆಯೇ ಬದಲಾಗಿತ್ತು. ವಾರ್ಡನ್ ಮುಖವನ್ನು ದುರುಗುಟ್ಟಿ ನೋಡುತ್ತ ಯದ್ವಾ–ತದ್ವಾ ಬೊಬ್ಬಿಡತೊಡಗಿದ. ಕೈಹಿಡಿಯಹೋದರೆ ಎಗರಾಡಿದ. ವಾರ್ಡನ್‌ಗೆ ವಿಪರೀತ ಗಾಬರಿಯಾಯಿತು. ಅಷ್ಟರ ತನಕ ನನಗೆ ಏನನ್ನೂ ತಿಳಿಸದಿದ್ದ ಅವರು ತಕ್ಷಣವೇ ಹೇಳಿಕಳುಹಿಸಿದರು. ಅಲ್ಲಿಂದ ಎಲ್ಲರೂ ಸೇರಿ ಬಲಾತ್ಕಾರವಾಗಿ ಅವನನ್ನು ಇಲ್ಲಿಗೆ ಕರೆದುಕೊಂಡು ಬಂದೆವು... ನಾಲ್ಕು ದಿನವಾಯ್ತು... ಚಿಕಿತ್ಸೆ ನಡೆಯುತ್ತಿದೆ... ನಾನು ನನ್ನೆಲ್ಲ ಕೆಲಸಗಳನ್ನೂ ಬಿಟ್ಟು ಇಲ್ಲೇ ಕುಳಿತಿದ್ದೇನೆ. ಈಗ ನನಗೆ ಜ್ಞಾನೋದಯವಾಗಿದೆ. ಬಹಳ ದುಃಖವೆನಿಸುತ್ತಿದೆ. ಹಣ–ಹೆಸರುಗಳ ಹಿಂದೆ ಹೋಗಿ ನನ್ನ ಮಗನನ್ನು ಕಡೆಗಣಿಸಿದೆನಲ್ಲ ಎಂದು ಪಶ್ಚಾತ್ತಾಪವಾಗುತ್ತಿದೆ...

"ಡಾಕ್ಟರ್ ಏನು ಹೇಳುತ್ತಾರೆ? ಏನೂ ಭಯವಿಲ್ಲ ತಾನೆ?" ನಾನು ಆತಂಕದಿಂದ ಕೇಳಿದೆ.

"ಹ್ಞೂಂ, ಭಯಪಡುವ ಅಗತ್ಯವಿಲ್ಲ ಅಂತ ಡಾಕ್ಟರ್ ಹೇಳಿದ್ದಾರೆ. 'ಆದರೆ ಅವನು ಆಘಾತದಿಂದ ಚೇತರಿಸಿಕೊಳ್ಳಲು ಅವನಿಗೆ ತುಂಬ ವಿಶ್ರಾಂತಿ ಬೇಕು. ನೀವು ಅವನ ಜತೆಯಲ್ಲೇ ಇದ್ದುಕೊಂಡು ಅವನ ಮೇಲೆ ತುಂಬ ಪ್ರೀತಿ ತೋರಿಸಬೇಕು. ಅವನ ಬಗ್ಗೆ ತುಂಬ ನಿಗಾ ವಹಿಸಿ ಎಚ್ಚರಿಕೆಯಿಂದ ನೋಡಿಕೊಂಡರೆ ಖಂಡಿತ ಸರಿಹೋಗುತ್ತಾನೆ' ಅಂದಿದ್ದಾರೆ ಡಾಕ್ಟರ್. ಹೆತ್ತವರ ಪ್ರೀತಿ, ಗಮನ ಇಲ್ಲದಿದ್ದಾಗ ಮಕ್ಕಳು ಹೀಗಾಗುವುದು ಸಾಮಾನ್ಯ ಅಂತ ಹೇಳಿದ್ದಾರೆ. ನನಗದು ಅರ್ಥವಾಗಿದೆ ಮೇಡಂ. ಇನ್ನು ಮುಂದೆ ಅವನೇ ನನ್ನ ಬದುಕು."

ಜಗನ್ನಾಥರಾಯರ ಮುಖ ನೋಡಿ ನನ್ನ ಮನಸ್ಸು ಸಹ ತಾಪದಿಂದ ತುಂಬಿಹೋಯಿತು. ಹಾಗೆಯೇ ಅಂದೊಂದು ದಿನ 'ಪೇರೆಂಟ್ಸ್ ಅಂಡ್ ಚಿಲ್ಡ್ರನ್' ಅನ್ನುವ ಒಂದು ಪಾಠವನ್ನು ಕಲಿಸುತ್ತ ಹೆತ್ತವರು ಮಕ್ಕಳನ್ನು ಪ್ರೀತಿಸುವ ರೀತಿ, ಅವರು ಮಕ್ಕಳಿಗಾಗಿ ಮಾಡುವ ತ್ಯಾಗಗಳ ಬಗ್ಗೆ ಹೇಳಿದಾಗ ಅವನು ಮುಖ ಸಪ್ಪಗೆ ಮಾಡಿ ಎಲ್ಲೋ ನೋಡುತ್ತ 'ಅದೆಲ್ಲ ಸುಳ್ಳು ಮೇಡಂ' ಎಂದು ಗುಣಿಗುಣಿಸಿದ್ದು ಮತ್ತೆ ಮತ್ತೆ ಕಣ್ಣಮುಂದೆ ತೇಲಿಬಂತು. 'ಇನ್ನು ಮುಂದೆ ಇಂಥ ಬಿರುಕಿಗೆ ಅವಕಾಶವಿರುವುದಿಲ್ಲ ಆಕಾಶ್' ಎಂದು ನನ್ನಲ್ಲೇ ಹೇಳಿಕೊಳ್ಳುತ್ತ ನಾನು ಆಸ್ಪತ್ರೆಯಿಂದ ಹೊರಬಂದೆ. ಕವಿದ ಮೋಡಗಳು ಚದುರಿ ತಿಳಿಯಾದ ಆಕಾಶ ನಗುತ್ತಿದ್ದಂತೆ ಭಾಸವಾಯಿತು.

**ಡಾ|| ಪಾರ್ವತಿ ಜಿ. ಐತಾಳ್**
ಇಂಗ್ಲಿಷ್ ವಿಭಾಗ ಮುಖ್ಯಸ್ಥೆ, ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರ



**ಕೆಲವು ತಿಂಗಳುಗಳ ಹಿಂದೆ ಹ್ಯಾಕರುಗಳು ತ್ರೀ ಮೊಬೈಲ್ ಎಂಬ ಬ್ರಿಟನ್ ಮೂಲದ ಮೊಬೈಲ್ ಕಂಪನಿಯ ದತ್ತಾಂಶಕ್ಕೆ ಅಕ್ರಮ ಪ್ರವೇಶ ಪಡೆಯುವುದರಲ್ಲಿ ಯಶಸ್ವಿಯಾದರು. ಇದರ ಫಲಶ್ರುತಿ : ಅರವತ್ತು ಲಕ್ಷ ಮೊಬೈಲ್ ಬಳಕೆದಾರರ ಖಾಸಗಿ ಮಾಹಿತಿಗಳು ಸಂಚಕಾರಕ್ಕೆ ಒಳಗಾದವು. ನಂತರ ಇವುಗಳ ದುರ್ಬಳಕೆ ಮಾಡಿ, ಗ್ರಾಹಕರ ಹೆಸರಿನಲ್ಲಿ ಮೊಬೈಲ್ ಪರಿಕರಗಳನ್ನು ಖರೀದಿಸಲಾಯಿತು ! ಐಬಿಎಂ ಮತ್ತು ಪೊನೆಮೊನ್ (Ponemon) ಸಂಸ್ಥೆಯ ದತ್ತಾಂಶ ಅತಿಕ್ರಮಣಗಳ ಅಧ್ಯಯನದ ಅನುಸಾರ ಭಾರತ ಸೈಬರ್ ಆಕ್ರಮಣಗಳ ಗುರಿಪಟ್ಟಿಯ ಉನ್ನತ ಸ್ಥಾನದಲ್ಲಿದೆ.**

# ನಗದುರಹಿತ ಸಮಾಜ ಸಾಧ್ಯವೇ?

**ಮ. ಶ್ರೀ. ಮುರಳಿ ಕೃಷ್ಣ**

ಈಗಾಗಲೇ ಜಗಜ್ಜಾಹೀರಾಗಿರುವ ಹಾಗೆ, ನವೆಂಬರ್ ೮, ೨೦೧೬ರಂದು ನಮ್ಮ ದೇಶದ ಪ್ರಧಾನಿ ಪ್ರಜೆಗಳನ್ನು ಉದ್ದೇಶಿಸಿ ಮಾಧ್ಯಮಗಳಲ್ಲಿ ಮಾತನಾಡುತ್ತ ಅಂದು ಮಧ್ಯರಾತ್ರಿ ೧೨ ಗಂಟೆಗೆ ರೂ. ೫೦೦/– ಮತ್ತು ರೂ. ೧೦೦೦/– ಮುಖಬೆಲೆಯ ನೋಟುಗಳು ರದ್ದಾಗುವುದೆಂದು ಸಾರಿದರು. ಕಪ್ಪು ಹಣದ ಮೇಲೆ ಇದೊಂದು 'ಸರ್ಜಿಕಲ್ ಸ್ಟ್ರೈಕ್' ಎಂದು ಈ ಕ್ರಮವನ್ನು ಬಣ್ಣಿಸಲಾಯಿತು. ಅಲ್ಲದೆ ಇದರಿಂದ ತೆರಿಗೆ ಸಂಗ್ರಹದಲ್ಲಿ ವೃದ್ಧಿ, ಕರಾರುವಾಕ್ಕಾಗಿ ತೆರಿಗೆ ಪಾವತಿಯ ವಾತಾವರಣ ಸೃಷ್ಟಿ, ವಿಧ್ಯುಕ್ತ ಆರ್ಥಿಕತೆಯ ಬಲಪಡಿಸುವಿಕೆ ಇವು ಈ ಕ್ರಮದ ಹಿಂದಿನ ದೂರಗಾಮಿ ಉದ್ದೇಶಗಳು ಎಂದು ಸರ್ಕಾರ ಸಾರಿತು. ಅಲ್ಲದೆ ಕಪ್ಪು ಹಣ ಶೇಖರಿಸಿರುವ ಎಲ್ಲ ತೆರನಾದ ಖದೀಮರು, ಸರಿಯಾದ ತೆರಿಗೆಯನ್ನು ಪಾವತಿಸದ ವಂಚಕರು, ಮಾದಕ ವಸ್ತುಗಳನ್ನು ತಯಾರಿಸಿ, ಅವುಗಳನ್ನು ವಿತರಿಸುವ ಸಮಾಜದ್ರೋಹಿಗಳು ಇತ್ಯಾದಿಯವರ ಮೇಲೆ ದೊಡ್ಡ ಮಟ್ಟದ ಪೆಟ್ಟಾಗುತ್ತದೆ ಎಂಬುದು ಅದರ ಅಂದಾಜಾಗಿತ್ತು. ಇವುಗಳ ಜೊತೆಗೆ ಪಾಕಿಸ್ತಾನದಲ್ಲಿ ಅಧಿಕ ಸಂಖ್ಯೆಯಲ್ಲಿ ಖೋಟಾನೋಟುಗಳು ತಯಾರಾಗಿ, ಅವುಗಳನ್ನು ನಮ್ಮ ದೇಶದೊಳಗೆ ಹರಿಬಿಟ್ಟು ಇಲ್ಲಿ ಭಯೋತ್ಪಾದನಾ ಚಟುವಟಿಕೆಗಳಿಗೆ ಕುಮ್ಮಕ್ಕು ನೀಡುವುದರ ವಿರುದ್ಧ ಮನೋಘಾತ ನೀಡುವುದರಲ್ಲಿ ಈ ಯೋಜನೆ ಸಫಲವಾಗುವುದೆಂಬ ಅಂಶಕ್ಕೆ ಹೆಚ್ಚು ಒತ್ತನ್ನು ನೀಡಲಾಯಿತು.

ಆದರೆ ದಿನ ಕಳೆಯುತ್ತಿದ್ದಂತೆ, ಬ್ಯಾಂಕ್ ಶಾಖೆಗಳ ಮತ್ತು ಎಟಿಎಂಗಳ ಮುಂದೆ ಜನಸಂದಣಿ ಜಾಸ್ತಿಯಾಗುತ್ತ ಸಾಗಿದ್ದಾಗ, ಸಮರ್ಪಕ ರೀತಿಯಲ್ಲಿ ನೋಟುಗಳ ಸರಬರಾಜಾಗದಿದ್ದಾಗ, ಇದರಿಂದ ಜನರ ಬವಣೆಗಳು ಏರುಮುಖದ ಹಾದಿಯನ್ನು ಹಿಡಿದಾಗ, ಸರ್ಕಾರ ನಮ್ಮ ದೇಶ ನಗದುರಹಿತ ಆರ್ಥಿಕತೆಯತ್ತ ಕ್ಷಿಪ್ರವಾಗಿ ಸಾಗಲು ಇದು ಸುಸಮಯ ಎಂದು ಎಲ್ಲೆಡೆ ಪ್ರಚಾರ ಮಾಡಲು ತನ್ನ ಬತ್ತಳಿಕೆಯಲ್ಲಿರುವ ವಿಧವಿಧ ಬಾಣಗಳನ್ನು ಪ್ರಯೋಗಿಸಿತು. ಕೇಂದ್ರದ ವಿತ್ತ ಮಂತ್ರಿ ಅರುಣ್ ಜೇಟ್ಲಿ ಸಹ ಪ್ರಧಾನಿ ಮೋದಿಯವರ ನಗದುರಹಿತ ಆರ್ಥಿಕತೆಯ ಕಲ್ಪನೆಗೆ ಇನ್ನೂ ಹೆಚ್ಚಿನ ಮೆರುಗನ್ನು ನೀಡಿದರು. ಒಬ್ಬ ಕಾರ್ಪೊರೇಟ್ ವಕೀಲನ ರೀತಿಯಲ್ಲಿ ಈ ವಿಚಾರವನ್ನು ಸಮರ್ಥಿಸುವ ನಿಟ್ಟಿನಲ್ಲಿ ವಾದಗಳನ್ನು ಮಂಡಿಸಿದರು.

ಈ ವಿಷಯದ ಪೂರ್ವಾಪರಗಳನ್ನು ಚರ್ಚಿಸುವ ಮುನ್ನ ಒಂದು ವಿಷಯವನ್ನು ಮನದಟ್ಟು ಮಾಡಿಕೊಳ್ಳಬೇಕು. ಅದೆಂದರೆ – ಪ್ರಸ್ತುತ ವಿಶ್ವದ ಯಾವ ದೇಶದ ಆರ್ಥಿಕತೆಯೂ ಸಂಪೂರ್ಣವಾಗಿ ನಗದುರಹಿತ ವ್ಯವಸ್ಥೆಯನ್ನು ತಲುಪಿಲ್ಲ. ನಿಜ, ಪುರಾತನ ಕಾಲದಲ್ಲಿ ನಗದುರಹಿತ ವ್ಯವಸ್ಥೆಯಿತ್ತು. ಆಗ ಚಾಲ್ತಿಯಲ್ಲಿದ್ದದ್ದು ಸಾಟಿ ವ್ಯಾಪಾರ, ಅಂದರೆ ವಿನಿಮಯ – ಮಾರಾಟ ವ್ಯವಸ್ಥೆ. ಆಂಗ್ಲ ಭಾಷೆಯಲ್ಲಿ ಇದನ್ನು 'ಬಾರ್ಟರ್' ಎಂದು ಕರೆಯುತ್ತಾರೆ. ಪದಾರ್ಥಗಳಿಗೆ ಬದಲಾಗಿ ಪದಾರ್ಥಗಳನ್ನು ವಿನಿಮಯ ಮಾಡುವ ವ್ಯವಸ್ಥೆ ಅದಾಗಿತ್ತು. ಕ್ರಮೇಣ ನಾಗರಿಕತೆ ದಾಪುಗಾಲು ಹಾಕುತ್ತ ಮುಂದುವರೆದಂತೆ ಅರ್ಥವ್ಯವಸ್ಥೆ ಎಂಬುದು ನಿಧಾನವಾಗಿ ರೂಪುಗೊಳ್ಳತೊಡಗಿತು. ಚಿನ್ನ, ಬೆಳ್ಳಿ ಮುಂತಾದ ಲೋಹಗಳನ್ನು ಬಳಸಿ ನಾಣ್ಯಗಳನ್ನು ತಯಾರಿಸುವ ಪದ್ಧತಿ ಪ್ರಾರಂಭವಾಯಿತು. ನಮ್ಮ ಇತಿಹಾಸದಲ್ಲಿ 'ಐಲು ದೊರೆ' ಎಂದೇ ಕರೆಯಲ್ಪಡುವ ಪ್ರಖ್ಯಾತಿ ಹೊಂದಿರುವ ಮೊಹಮ್ಮದ್ ಬಿನ್ ತೊಘಲಕ್ ಚರ್ಮದ ನಾಣ್ಯಗಳ ಬಳಕೆಗೆ ನಾಂದಿ ಹಾಡಿದ. ನಾಗರಿಕತೆ ವಿಕಸನಗೊಂಡಂತೆ, ವ್ಯಾಪಾರ – ವಾಣಿಜ್ಯ ಚಟುವಟಿಕೆಗಳು ಹೆಚ್ಚಾದಂತೆ, ನೋಟುಗಳನ್ನು ಮುದ್ರಿಸುವ ವ್ಯವಸ್ಥೆ ಜಾರಿಗೆ ಬಂದಿತು. ಇವೆಲ್ಲ ತಿಳಿದಿರುವ ವಿಷಯಗಳೇ. ಆದರೆ ಒಂದು ಕಾಲದಲ್ಲಿ ನಗದುಮಯವಾಗಿದ್ದ ಪರ್ವ ಪ್ರಸ್ತುತ ವಿಶ್ವಾದ್ಯಂತ ಕ್ರಮೇಣ ನೇಪಥ್ಯದತ್ತ ಸರಿಯುತ್ತಿದೆ. ನಗದಿನ ಬಗೆಗೆ ಚಿಂತನ–ಮಂಥನ ಮಾಡುವಾಗ ಒಂದು ಅಂಶವನ್ನು ಮನಗಾಣಬೇಕು. ಬ್ಯಾಂಕ್ ನೋಟು ಎನ್ನುವುದು ವೈಯಕ್ತಿಕ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಿತ್ತ ಭದ್ರತೆಯ ಅವಶ್ಯ ಅಂಗ. ಪ್ರಪಂಚದಾದ್ಯಂತ ಸಾರ್ವತ್ರಿಕವಾಗಿ ಬ್ಯಾಂಕ್ ನೋಟುಗಳನ್ನು






ಸ್ವೀಕರಿಸಲಾಗುತ್ತದೆ. ಒಂದು ಪಾವತಿಯ ಸಾಧನವಾಗಿ ಅದು ಸಾಟಿಯಿಲ್ಲದ ಖಾಸಗಿತನವನ್ನು ನೀಡುತ್ತದೆ. ವೈಯಕ್ತಿಕ ಮಟ್ಟದಲ್ಲಿ, ಜನರು ತಮ್ಮ ವಿತ್ತೀಯ ಭದ್ರತೆಯನ್ನು ತಾವೇ ಜತನ ಮಾಡಿಕೊಳ್ಳುವ ನಿಟ್ಟಿನಲ್ಲಿ ನಗದಿನ ಪಾತ್ರ ಗಮನಾರ್ಹ. ನಿಜ, ನಗದನ್ನು ಸಂಗ್ರಹಿಸುವುದರಲ್ಲಿ ಅಪಾಯಗಳಿವೆ. ಆದರೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವಿವೇಚನೆಯ ಅನುಸಾರ ಅದನ್ನು ರಕ್ಷಿಸಲು ಸೂಕ್ತ ಮಾರ್ಗಗಳನ್ನು ಹುಡುಕಿಕೊಳ್ಳುತ್ತಾನೆ. ನಿಮ್ಮ ಪರ್ಸಿನಲ್ಲಿರುವ ಹಣವನ್ನು ನೀವು ಕಳೆದುಕೊಳ್ಳಬಹುದು. ಇದನ್ನು ಹೊರತುಪಡಿಸಿ, ನಿಮ್ಮ ವಿತ್ತೀಯ ಭದ್ರತೆಯ ಇತರ ಅಂಗಗಳಿಗೆ ಯಾವುದೇ ಧಕ್ಕೆಯಾಗುವುದಿಲ್ಲ.

ಆದರೆ ವಿದ್ಯುನ್ಮಾನ ಪಾವತಿ ಸಾಧನಗಳ ಜೊತೆ ಹೆಣೆದುಕೊಂಡಿರುವ ಅಪಾಯಗಳು ತೀವ್ರ ಹಾಗೂ ವೈವಿಧ್ಯಮಯ. ನೀವು ಕ್ರೆಡಿಟ್/ಡೆಬಿಟ್ ಕಾರ್ಡುಗಳನ್ನು ಕಳೆದುಕೊಂಡರೆ ಅಥವಾ ಡಿಜಿಟಲ್ ಹ್ಯಾಕರುಗಳಿಗೆ ನೀವು ಬಲಿಪಶುವಾದರೆ ಪಾವತಿ ನಿರಾಕರಣೆ, ಕಾರ್ಡ್ ಸ್ಕಿಮ್ಮಿಂಗ್ (Skimming), ಗುರುತಿನ (ಐಡೆಂಟಿಟಿ) ಕಳ್ಳತನ, ಖಾತೆ ಇನ್ನೊಬ್ಬರ ಪಾಲಾಗುವಿಕೆ, ವಂಚನೆಯ ವಹಿವಾಟುಗಳು ಹಾಗೂ ದತ್ತಾಂಶದ ಅತಿಕ್ರಮಣ ಇತ್ಯಾದಿ ತೀವ್ರ ಸಮಸ್ಯೆಗಳಿಗೆ ಪಕ್ಕಾಗುತ್ತೀರಿ. (ಜೀಮಾಲ್ಟೊ [Gemalto] ಎಂಬ ಡಿಜಿಟಲ್ ಭದ್ರತಾ ಕಂಪನಿಯ ಅನ್ವಯ ೨೦೧೪ರಲ್ಲಿ ೧ ಬಿಲಿಯನ್‌ಗೂ ಹೆಚ್ಚಿನ ವೈಯಕ್ತಿಕ ದಾಖಲೆಗಳಿಗೆ ಲಗ್ಗೆ ಹಾಕಲಾಗಿತ್ತು !). ಇಂತಹ ದುರ್ಘಟನೆಗಳಿಗೆ ಬಲಿಯಾದಾಗ ನೀವು ವಿತ್ತೀಯ ಸಂಸ್ಥೆಗಳು ಹಾಗೂ ಕಾನೂನು ಪರಿಪಾಲನಾ ಏಜೆನ್ಸಿಗಳ ಜೊತೆ ಅನಿಗದಿತ ಸಮಯ ಕಳೆಯಬೇಕು. ಖಾತೆಗಳನ್ನು ಪುನಃ ಗಳಿಸಿಕೊಳ್ಳಲು, ನಿಮ್ಮ ಅಸ್ಮಿತೆಯನ್ನು ಪುನಸ್ಸ್ಥಾಪಿಸಲು ಹಾಗೂ ವಂಚನೆಯ ವಹಿವಾಟುಗಳಿಂದಾದ ನಷ್ಟವನ್ನು ಸರಿಮಾಡಲು ಹರಸಾಹಸ ಪಡಬೇಕಾಗುತ್ತದೆ. ನೈಸರ್ಗಿಕ ವಿಕೋಪಗಳ ಸಮಯದಲ್ಲಿ ವಿದ್ಯುಚ್ಛಕ್ತಿ ಹಾಗೂ ಅದಕ್ಕೆ ಸಂಬಂಧಿಸಿದ ಸವಲತ್ತುಗಳು ಕೈಕೊಟ್ಟಾಗ (ದೀರ್ಘ ಅವಧಿ) ಸಂಗ್ರಹದಲ್ಲಿರುವ ನಗದು ಉದರಪೋಷಣೆಗೆ ಸಾಧನವಾಗುತ್ತದೆ.

೨೦೦೮ರಲ್ಲಿ ಅನೇಕ ಅಂತರರಾಷ್ಟ್ರೀಯ ಬ್ಯಾಂಕುಗಳು ಮತ್ತು ವಿತ್ತೀಯ ಸಂಸ್ಥೆಗಳು ಕುಸಿದವು. ಆಗ ಜಾಗತಿಕ ಮಟ್ಟದ ಆರ್ಥಿಕ ಕುಸಿತ ತಲೆದೋರಿತು. ಆ ಸಂದರ್ಭದಲ್ಲಿ ನಗದಿನ ಚಲಾವಣೆ ವೃದ್ಧಿಸಿತು. ವಿತ್ತೀಯ ಅಭದ್ರತೆಯ ಅನಿಶ್ಚಿತತೆಯಿಂದ ಮುಂಜಾಗ್ರತೆಯ ನಗದು ಸಂಗ್ರಹ ಶೇ. ೧೨ರಷ್ಟು ಆಸ್ಟ್ರೇಲಿಯದಲ್ಲಿ ಜರುಗಿತೆಂದು ಅಲ್ಲಿನ ರಿಸರ್ವ್ ಬ್ಯಾಂಕ್ ತಿಳಿಸಿತ್ತು.

ಪ್ರಸ್ತುತ ನಮ್ಮ ದೇಶದಲ್ಲಿ ನೋಟುಗಳ ಚಲಾವಣೆಯಲ್ಲಿ ವ್ಯತ್ಯಯವಾಗಿದೆ. ಇದು ಗರಿಷ್ಠ ಮುಖಬೆಲೆಯ ನೋಟು ರದ್ದತಿಯ ನೇರ ಪರಿಣಾಮಗಳಲ್ಲಿ ಒಂದು. ಈ ಪರಿಸ್ಥಿತಿಯಿಂದ ಜನರು ಡಿಜಿಟಲ್ ಪಾವತಿಗಳತ್ತ ಮುಖಮಾಡುತ್ತಿದ್ದಾರೆ. ಸೈಬರ್ ಭದ್ರತೆ ನಮ್ಮಲ್ಲಿ ಇನ್ನೂ ಸುಸ್ಥಿರಗೊಂಡಿಲ್ಲ. ಈ ವಿಚಾರಕ್ಕೆ ಸಂಬಂಧಿಸಿದ ನೀತಿಗಳು ಪರಿಪಕ್ವತೆಯನ್ನು ಹೊಂದಬೇಕಿದೆ. ಇರುವ ನೀತಿಗಳ ಅನುಷ್ಠಾನ ಸಮರ್ಪಕವಾಗಿ ಆಗುತ್ತಿಲ್ಲ ಎಂಬ ದನಿಗಳು ನಿರಂತರವಾಗಿ ಕೇಳಿಬರುತ್ತಿರುತ್ತವೆ. ಹೀಗಿರಬೇಕಾದರೆ, ಸೈಬರ್ ಆಕ್ರಮಣಗಳಿಗೆ ತುತ್ತಾಗುತ್ತಿರುವ ಪ್ರಕರಣಗಳ ಸಂಖ್ಯೆ ಜಾಸ್ತಿಯಾಗುತ್ತಿದೆ.

ಕಳೆದ ವರ್ಷದ ಅಕ್ಟೋಬರ್‌ನಲ್ಲಿ, ನಮ್ಮ ದೇಶದಲ್ಲಿ ಅತಿ ದೊಡ್ಡ ವಿತ್ತೀಯ ದತ್ತಾಂಶ ಆಕ್ರಮಣ ಜರುಗಿತು. ಸುಮಾರು ೩೦ ಲಕ್ಷ ಗ್ರಾಹಕರ ದತ್ತಾಂಶ ಸೈಬರ್ ಆಕ್ರಮಣಕ್ಕೆ ತುತ್ತಾಯಿತು. ಹ್ಯಾಕರ್‌ಗಳು ಹಿಟಾಚಿ ಎಟಿಎಂಗಳ ಜಾಲಕ್ಕೆ ಮಾಲ್‌ವೇರ್ ಸೇರ್ಪಡೆಗೊಳಿಸಿ ಬಳಕೆದಾರರ ಲಾಗಿನ್‌ಗಳನ್ನು ಕದ್ದು ಕಾನೂನುಬಾಹಿರ ವಹಿವಾಟುಗಳನ್ನು ನಡೆಸಿದರು. ಇದರಿಂದ ಬ್ಯಾಂಕುಗಳು ಬಾಧಿತ ಗ್ರಾಹಕರಿಗೆ ಹೊಸ ಕಾರ್ಡುಗಳನ್ನು ನೀಡಿದವು. ಅಲ್ಲದೆ ಅವರು ತಮ್ಮ ಬ್ಯಾಂಕುಗಳ ಎಟಿಎಂಗಳನ್ನೇ ಬಳಸುವಂತೆ ಸೂಚನೆ ನೀಡಲಾಯಿತು. ಆದರೆ ಈ ಪ್ರಸಂಗ ಜರುಗಿದ ಕೆಲವು ವಾರಗಳ ತರುವಾಯ ಕೇಂದ್ರ ಸರಕಾರ ನೋಟುರದ್ದತಿಯ ಯೋಜನೆಯನ್ನು ಜಾರಿಗೊಳಿಸಿತು. ಇದರಿಂದ ಗ್ರಾಹಕರು ಮೇಲೆ ಪ್ರಸ್ತಾಪಿಸಿರುವ ಸೂಚನೆಯನ್ನು ಕಡೆಗಣಿಸಿ ಯಾವುದೇ ಬ್ಯಾಂಕಿನ ಕಾರ್ಯ ನಿರ್ವಹಿಸುತ್ತಿದ್ದ ಎಟಿಎಂಗಳಿಗೆ ಎಡತಾಕಿದರು. ಆದರೆ ಸೈಬರ್ ಆಕ್ರಮಣಗಳಿಗೆ ತುತ್ತಾದ ಎಟಿಎಂಗಳನ್ನು ಸೇವೆಗಳಿಂದ ಹಿಂಪಡೆದಿರುವ ಅಥವಾ ಇಂತಹ ಅತಿಕ್ರಮಣಗಳನ್ನು ಪ್ರತಿಬಂಧಿಸುವ ನಿಟ್ಟಿನಲ್ಲಿ ಕಟ್ಟುನಿಟ್ಟಿನ ಕ್ರಮಗಳನ್ನು ಜಾರಿಗೊಳಿಸಿದ್ದರ ಬಗೆಗೆ ಯಾವ ತೆರನಾದ ಸಂದೇಶವನ್ನೂ ಸಂಬಂಧಪಟ್ಟ ಬ್ಯಾಂಕುಗಳು ನೀಡಿಲ್ಲ.




ಲಾಗಿನ್ ವಿವರಗಳನ್ನು ಮಾತ್ರ ಹ್ಯಾಕರುಗಳು ಆಕ್ರಮಣ ಮಾಡುವುದಿಲ್ಲ. ಇತರ ಕೆಲವು ಕುತಂತ್ರಗಳನ್ನು ಬಳಸುತ್ತಾರೆ. ಕೆಲವು ತಿಂಗಳುಗಳ ಹಿಂದೆ ಹ್ಯಾಕರುಗಳು ತ್ರೀ ಮೊಬೈಲ್ ಎಂಬ ಬ್ರಿಟನ್ ಮೂಲದ ಮೊಬೈಲ್ ಕಂಪನಿಯ ದತ್ತಾಂಶಕ್ಕೆ ಅಕ್ರಮ ಪ್ರವೇಶ ಪಡೆಯುವುದರಲ್ಲಿ ಯಶಸ್ವಿಯಾದರು. ಇದರ ಫಲಶ್ರುತಿ : ಅರವತ್ತು ಲಕ್ಷ ಮೊಬೈಲ್ ಬಳಕೆದಾರರ ಖಾಸಗಿ ಮಾಹಿತಿಗಳು ಸಂಚಕಾರಕ್ಕೆ ಒಳಗಾದವು. ನಂತರ ಇವುಗಳ ದುರ್ಬಳಕೆ ಮಾಡಿ, ಗ್ರಾಹಕರ ಹೆಸರಿನಲ್ಲಿ ಮೊಬೈಲ್ ಪರಿಕರಗಳನ್ನು ಖರೀದಿಸಲಾಯಿತು ! ಐಬಿಎಂ ಮತ್ತು ಪೊನೆಮೊನ್ (Ponemon) ಸಂಸ್ಥೆಯ ದತ್ತಾಂಶ ಅತಿಕ್ರಮಣಗಳ ಅಧ್ಯಯನದ ಅನುಸಾರ ಭಾರತ ಸೈಬರ್ ಆಕ್ರಮಣಗಳ ಗುರಿಪಟ್ಟಿಯ ಉನ್ನತ ಸ್ಥಾನದಲ್ಲಿದೆ.

ಎಚ್‌ಡಿಎಫ್‌ಸಿ ಮತ್ತು ಐಸಿಐಸಿಐನಂತಹ ವಿತ್ತೀಯ ಸಂಸ್ಥೆಗಳು ತಮ್ಮ ಭದ್ರತಾ ವ್ಯವಸ್ಥೆಗಳನ್ನು ಆಗಾಗ್ಗೆ ಮೇಲ್ದರ್ಜೆಗೊಳಿಸುತ್ತಿರುತ್ತವೆ. ಆದರೆ ಅವುಗಳು ಕೂಡ ಸೈಬರ್ ಆಕ್ರಮಣಗಳಿಗೆ ಹೊರತಾಗಿಲ್ಲ. ಇದು ಆತಂಕಕಾರಿ ವಿಚಾರ. ಹೀಗಾಗಿ, ಸೈಬರ್ ಸಾಧನಗಳ ಹೊಸ ಬಳಕೆದಾರರಾದ ಬೀದಿಬದಿಯ ವ್ಯಾಪಾರಿಗಳು ಮತ್ತು ಇತರರು ಇಂತಹ ಸೈಬರ್ ಆಕ್ರಮಣಗಳ ಬಗೆಗೆ ಎಷ್ಟು ಅರಿವನ್ನು ಹೊಂದಿದ್ದಾರೆ ? ಅವರಿಗೆ ಹೇಗೆ ಸೂಕ್ತ ಮಾರ್ಗದರ್ಶನ ಲಭ್ಯವಾಗುತ್ತದೆ ಎಂಬ ಪ್ರಶ್ನೆಗಳತ್ತ ಆಡಳಿತಾರೂಢ ಸರ್ಕಾರ ತುರ್ತಾಗಿ ಗಮನವನ್ನು ಹರಿಸಬೇಕು.

ಈಗ ಕಡಿಮೆ ಅಥವಾ ಅತಿಕಡಿಮೆ ನಗದು ವಹಿವಾಟುಗಳುಳ್ಳ ಕೆಲವು ದೇಶಗಳತ್ತ ಗಮನವನ್ನು ಹರಿಸೋಣ. ಸ್ಕಾಂಡಿನೇವಿಯ ದೇಶವಾದ ಸ್ವೀಡನ್‌ನಲ್ಲಿ ನಗದು ವಹಿವಾಟುಗಳ ಪ್ರಮಾಣ ಕೇವಲ ಶೇಕಡ ಮೂರರಷ್ಟಿದೆ ಎಂದು ಅಂದಾಜಿಸಲಾಗಿದೆ. ಬಹುತೇಕ ಸಣ್ಣಪುಟ್ಟ ಕೆಲಸಗಳಿಗೆ ಕಾರ್ಡುಗಳನ್ನು ಅಥವಾ ಆನ್‌ಲೈನ್ ಬ್ಯಾಂಕಿಂಗ್‌ನ್ನು ಬಳಸಲಾಗುತ್ತದೆ. ಆ ದೇಶಗಳಲ್ಲಿ ೨೦೦೮ರಲ್ಲಿ ೧೧೦ ಬ್ಯಾಂಕ್ ದರೋಡೆಗಳು ಜರುಗಿದ್ದವು. ೨೦೧೧ರಲ್ಲಿ ಅವುಗಳ ಸಂಖ್ಯೆ ೧೬ಕ್ಕೆ ಇಳಿಯಿತು. ನಾರ್ವೆಯಲ್ಲಿ ಮೊಬೈಲ್ ಬ್ಯಾಂಕಿಂಗ್ ಸೌಲಭ್ಯವನ್ನು ಬಳಸಿ ಬೀದಿಬದಿಯ ಆಹಾರ ಮತ್ತು ವೃತ್ತಪತ್ರಿಕೆಗಳನ್ನು ಖರೀದಿಸಬಹುದು. ಅಲ್ಲಿಯ ಡಿಎನ್‌ಬಿ ಎಂಬ ಅತಿ ದೊಡ್ಡ ಬ್ಯಾಂಕ್ ಜನರು ನಗದು ಬಳಸುವಿಕೆಯನ್ನು ನಿಲ್ಲಿಸಬೇಕೆಂದು ಕರೆ ನೀಡಿತು. ಪ್ರಸ್ತುತ ಅನೇಕ ಬ್ಯಾಂಕುಗಳು ತಮ್ಮ ಗ್ರಾಹಕರಿಗೆ ಹಣವನ್ನು ನೀಡುತ್ತಿಲ್ಲ ಎಂಬ ಮಾಹಿತಿಯಿದೆ. ಡೆನ್‌ಮಾರ್ಕ್‌ನಲ್ಲಿ ಜನಸಂಖ್ಯೆಯ ಶೇ. ೧/೩ರಷ್ಟು ಮಂದಿ ತಮ್ಮ ಹಣದ ವಹಿವಾಟುಗಳಿಗೆ ಸೆಲ್‌ಫೋನ್ ಆ್ಯಪ್ 'ಮೊಬೈಲ್ ಪೆ' ಬಳಸುತ್ತಾರೆ. ಅಲ್ಲಿ ಬಟ್ಟೆ ಮಾರಾಟ ಮಾಡುವವರು, ರೆಸ್ಟೋರಾಂಟ್‌ಗಳು ಮತ್ತು ಪೆಟ್ರೋಲ್ ಬಂಕ್‌ಗಳು ಗ್ರಾಹಕರು ನೀಡುವ ಹಣವನ್ನು ಅಧಿಕೃತವಾಗಿ ನಿರಾಕರಿಸಬಹುದಂತೆ. ಆದರೆ ಆಸ್ಪತ್ರೆಗಳು, ಅಂಚೆ ಕಛೇರಿಗಳು ಮತ್ತಿತರ ಕೆಲವು ಸಂಸ್ಥೆಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ. ಒಂದು ವರದಿಯ ಅನುಸಾರ ಕಾಗದದ ಹಣವನ್ನು ೨೦೩೦ರ ಸಮಯಕ್ಕೆ ಸಂಪೂರ್ಣವಾಗಿ ಬಂದ್ ಮಾಡುವ ಗಡುವನ್ನು ಡೇನಿಷ್ ಸರ್ಕಾರ ನಿಗದಿಪಡಿಸಿದೆ. ಬ್ರಿಟನ್‌ನಲ್ಲಿ ಜನಸಂಖ್ಯೆಯ ಶೇ. ೮೯ರಷ್ಟು ಮಂದಿ ಡಿಜಿಟಲ್ ಬ್ಯಾಂಕಿಂಗ್ ಸೇವೆಯನ್ನು ಬಳಸುತ್ತಾರೆ. ಆಫ್ರಿಕಾದ ಅತಿ ಬಡದೇಶಗಳಲ್ಲಿ ಸೋಮಾಲಿಲ್ಯಾಂಡ್ ಕೂಡ ಒಂದು. ಅತ್ಯಂತ ಅಭಿವೃದ್ಧಿ ಹೊಂದಿದ ದೇಶಗಳ ಜೊತೆ ತುಲನೆ ಮಾಡಿದರೆ, ಈ ದೇಶದ

ಅನೇಕ ಮಂದಿ ವಿದ್ಯುನ್ಮಾನ ಬ್ಯಾಂಕಿಂಗ್ ಸೌಲಭ್ಯವನ್ನು ಬಳಸುತ್ತಾರೆ. ೨೦೧೨ರ ಒಂದು ಸರ್ವೇಕ್ಷಣದ ಪ್ರಕಾರ ಸೋಮಾಲಿಲ್ಯಾಂಡ್‌ನ ಒಬ್ಬ ಸರಾಸರಿ ಗ್ರಾಹಕ ತಿಂಗಳೊಂದರಲ್ಲಿ ಸುಮಾರು ೩೪ ಆನ್‌ಲೈನ್ ವಹಿವಾಟುಗಳನ್ನು ನಡೆಸುತ್ತಾನೆ. ಪ್ರಪಂಚದ ಯಾವುದೇ ದೇಶಕ್ಕಿಂತಲೂ ಈ ವಿಚಾರದಲ್ಲಿ ಈ ದೇಶ ಮುಂದಿದೆ. ಆದರೆ ಸ್ವಿಟ್ಜರ್‌ಲ್ಯಾಂಡ್‌ನದು ಬೇರೆಯೇ ಕಥೆ. ಅಲ್ಲಿ ಪುನಃ ೧೦೦೦ ಸ್ವಿಸ್ ಫ್ರಾಂಕ್ ಬ್ಯಾಂಕ್ ನೋಟನ್ನು ಚಲಾವಣೆಗೆ ತರಲಾಗುತ್ತಿದೆ. ಸ್ವಿಸ್ ಮಂದಿ ಏಕಾಂತತೆಯ ಪ್ರಿಯರಾಗಿರುವುದರಿಂದ ಅಲ್ಲಿ ಹಣ ನಗದು ಆರ್ಥಿಕತೆ ತೀವ್ರ ಇಳಿಮುಖ ಕಂಡಿಲ್ಲ.

ನಮ್ಮ ದೇಶದಲ್ಲಿ ದೊಡ್ಡ ಮಟ್ಟದ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಇತರ ಅಸಮಾನತೆಗಳಿವೆ. ಅತ್ಯಧಿಕ ಸಂಖ್ಯೆಯ ಮಂದಿ ಅಂಚಿನಲ್ಲಿ ತಮ್ಮ ಬಾಳನ್ನು ಸವೆಸುತ್ತಿದ್ದಾರೆ. ಬಡತನ, ನಿರಕ್ಷರತೆ, ವಿತರಣಾ ಅಸಮತೆ ಮುಂತಾದ ವೈಕಲ್ಯಗಳು ನಮ್ಮ ದೇಶವನ್ನು ಹುರಿದು ಮುಕ್ಕಿ ತಿನ್ನುತ್ತಿವೆ. ಇವುಗಳೆಲ್ಲದರ ನಡುವೆ ನಗದುರಹಿತ ಆರ್ಥಿಕತೆಯತ್ತ ಧಾವಿಸುವ ಧಾವಂತದಲ್ಲಿ ಈಗಾಗಲೇ ಇರುವ ಡಿಜಿಟಲ್ ಅಸಮಾನತೆ ಇನ್ನಷ್ಟು ವೃದ್ಧಿಸುವುದೇನೋ ಎಂಬ ಆತಂಕ ನೈಜ ಸಾಮಾಜಿಕ ಆ್ಯಕ್ಟಿವಿಸ್ಟ್‌ಗಳನ್ನು ಕಾಡುತ್ತಿದೆ. ಅಲ್ಲದೆ ಜನರ ಆಯ್ಕೆಯ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವುದು ಸರಿಯೇ, ಎಂಬ ಪ್ರಶ್ನೆಯೂ ಸಹಜವಾಗಿ ಕೇಳಿಬರುತ್ತಿದೆ.

ಒಂದು ಅಂದಾಜಿನಂತೆ ಕಳೆದ ವರ್ಷಾಂತ್ಯದಲ್ಲಿ ನಮ್ಮ ದೇಶದ ಶೇ. ೫೦ರಷ್ಟು ವಯಸ್ಕರು ಮಾತ್ರ ಬ್ಯಾಂಕ್ ಖಾತೆಗಳನ್ನು ಹೊಂದಿದ್ದರು. ೨೦೧೫ರಲ್ಲಿ ಸುಮಾರು ಶೇ. ೧೧ರಷ್ಟು ಗ್ರಾಹಕರು ಮಾತ್ರ ಡೆಬಿಟ್ ಕಾರ್ಡನ್ನು ಬಳಸುತ್ತಿದ್ದರು. ಆಗ ಶೇ. ೯೮ರಷ್ಟು ವಹಿವಾಟುಗಳು ನಗದು ರೂಪದಲ್ಲಿ ಜರುಗುತ್ತಿದ್ದವು. ಅನೇಕ ಸಗಟು ವ್ಯಾಪಾರಿಗಳು ಕಾರ್ಡುಗಳ ಬಳಕೆಗೆ ಉತ್ಸುಕತೆಯನ್ನು ತೋರಿಸುತ್ತಿರಲಿಲ್ಲ. ನಮ್ಮ ದೇಶದ ಅನೇಕ ಹಳ್ಳಿಗಳಿಗೆ ಬ್ಯಾಂಕ್ ವ್ಯವಸ್ಥೆ ತಲುಪಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಪ್ರತಿ ಒಂದು ಲಕ್ಷ ನಾಗರಿಕರಿಗೆ ೧೮ ಎಟಿಎಂಗಳಿವೆ. ಬ್ರೆಜಿಲ್‌ನಲ್ಲಿ ಈ ಸಂಖ್ಯೆ ೧೨೯ರಷ್ಟಿದೆ. (ವಿಶ್ವ ಬ್ಯಾಂಕ್ ವರದಿ). ಪ್ಯೂ (pew) ರಿಸರ್ಚ್ ಸೆಂಟರ್ ವರದಿಯ ಅನ್ವಯ ನಮ್ಮ ದೇಶದಲ್ಲಿ ಸಾಂದರ್ಭಿಕವಾಗಿ ಅಂತರ್‌ಜಾಲವನ್ನು ಬಳಸುವವರು ಬರೀ ಶೇ. ೨೨ರಷ್ಟಿದ್ದಾರೆ. ಹಾಗೆಯೇ ಕೇವಲ ಶೇ. ೧೭ರಷ್ಟು ಮಂದಿ ಮಾತ್ರ ಸ್ಮಾರ್ಟ್‌ಫೋನ್‌ಗಳನ್ನು ಹೊಂದಿದ್ದಾರೆ. ವಿಷಯ ಹೀಗಿರಬೇಕಾದರೆ, ಕಡಿಮೆ ನಗದು ವ್ಯವಸ್ಥೆಯತ್ತ ಕ್ಷಿಪ್ರವಾಗಿ ಪಯಣಿಸಿದರೆ, ಅಧಿಕ ಸಂಖ್ಯೆಯ ಜನತೆ ಉದ್ದೇಶಿತ ಗುರಿಗಳ ವ್ಯಾಪ್ತಿಯಿಂದ ಹೊರಗುಳಿಯುತ್ತಾರೆ. ಇದು ನಮ್ಮ ದೇಶದ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಯಿಂದ ಶುಭಸೂಚಕ ಬೆಳವಣಿಗೆಯಲ್ಲ.

*(ಆಧಾರ : ಹಲವು ಮೂಲಗಳು)*

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

# ತಪಸ್ಸಿಗೆ ಕೂತ ಮಗ






೧

ಅಜ್ಜ ಬೆತ್ತ ಉರಿ
ಹಣೆ ಮೇಲೆ ಕೈ ಹೊತ್ತು
ಮುಗಿಲಿನತ್ತ ಮುಖ ಕಣ್ಣು ಹೊರಳಿಸಿದರೆ
ನೆತ್ತಿ ಮೇಲೆ ಸೆರೆ ಮೋಡವಿಲ್ಲ
ಬರದ ಬಿಸಿಲು
ಕೊಡೆಯ ಮರೆಯಲ್ಲಿ
ಭೂಮಧ್ಯದಲ್ಲಿ ನೀರ ಗುಳ್ಳೆ
ಕಾಲು ಮುರಿದು ಮೂಲೆಗೆ ಬಿದ್ದ ಅಜ್ಜಿಯ ನೆನಪು
ಎಲ್ಲ ಸೂತಕ ದ್ಯೋತಕ ಛಾಯೆ.

ಎದೆಗವಚಿ ಮೊಮ್ಮಗನಿಗೆ ಬತ್ತಿದ ಮೊಲೆ
ಆನಿಸಿ ಹಸಿವ ಹಿಂಗಿಸುವ ಸೊಸೆ.
ಮುಗಿಲಿನತ್ತ ಮುಖ ಮಾಡಿ
ಅಧೋ ಬೋ... ಬೋ... ಎಂದು
ಬೊಗಳುತ್ತ , ನೆಲ ಕೆರೆದು, ಹಸನು ಮಾಡಿ
ಬಾಲವಾಡಿಸುತ್ತ ಮಲಗುವ ನಾರಾಯಣ.

ಕೊಟ್ಟಿಗೆಯಲಿ ಬಡಕಲಾದ ಎತ್ತು
ಪಡಸಾಲೆಯಲ್ಲಿ ಬಾರಿಕೋಲು,
ನೊಗ, ನೇಗಿಲು, ಹಗ್ಗ !
ಗೆದ್ದಿಲ ಪಾಲು.
ಮೊರೆ ತುಂಬ ಗಡ್ಡ ಬಿಟ್ಟು
ಥೇಟ್ ಸನ್ಯಾಸಿಯಾಗಿ ಊರ ಮುಂದಿನ
ಅರಳೀಕಟ್ಟೆಯಲಿ
ತಪಸ್ಸು ಮಾಡುವ ಮಗ.

೨

ಕುಮ್ಮರಿಸಿ ಜರಡಿ ಮಾಡಿ ಹೆಕ್ಕಿ
ತೆಗೆದು ಅಳಿದುಳಿದ ಬೀಜಗಳು
ಇಲಿ, ಹೆಗ್ಗಣಗಳಿಗೆ ಆಹಾರ.
ಹಾಗೇ ಬಿತ್ತಿದ್ದೆಲ್ಲ ಬತ್ತಿಹೋಗಿ
ಅಳಿದುಳಿದಕ್ಕೆ ಪರಿಹಾರ ಘೋಷಣೆ
ಗುಳೆ ನಿರಂತರ...!

ವರ್ತಮಾನ ಪತ್ರಿಕೆಗಳ ಸಂದು ಮೂಲೆಗಳಲ್ಲಿ
ದಿನಭವಿಷ್ಯದ ಸುಖ–ದುಃಖ
ಮ್ಯಾಚ್ ಫಿಕ್ಸಿಂಗ್, ಕಿಡ್ನ್ಯಾಪ್, ಅತ್ಯಾಚಾರ
ಇಲ್ಲಿ ಬಾಂಬ್ ಸ್ಫೋಟ, ಅಲ್ಲಿ ಉಗ್ರರು ನುಗ್ಗುವ ಶಂಕೆ
ಭಾರೀ ಬಿರುಗಾಳಿಯೊಂದಿಗೆ ಮಳೆ
ಕರಾವಳಿ ಮೀನುಗಾರರಿಗೆ ಎಚ್ಚರಿಕೆ ಗಂಟೆ !
ಕಬ್ಬು ಬೆಳೆಗಾರರಿಗೆ ಬಿಡುಗಡೆ, ಉಳಿದದ್ದು ನಂತರ
ಗುಳೆ ನಿರಂತರ...!

೩

ಶಾಸನಸಭೆಯಲ್ಲಿ  ಪರಿಹಾರ ಸಮಿತಿ ರಚನೆ
ಕಛೇರಿಗಳಿಗೆ ಅಲೆದಾಟ
ಹೊಂಚು ಹಾಕಿ ಹಸುಗೂಸ
ಕದ್ದು ಒಯ್ಯುವ ನಾರಾಯಣ
ಸಾವಿಗೆ ಎರಡು ಲಕ್ಷ ಪರಿಹಾರ
ಗುಳೆ ನಿರಂತರ...!

ಅರಳೀಕಟ್ಟೆ ಮೇಲೆ ಕೂತ ಮಗ
ಮಾತ್ರ ತಪಸ್ಸಿನಿಂದ ಎದ್ದೇ ಇಲ್ಲ.
ವೈದ್ಯೋನಾರಾಯಣ ಬರಬೇಕಿದೆ.
ಶಾಸಕ, ಮಂತ್ರಿ ಚೆಕ್ ಹಿಡಿದು ಕಾಯುತ್ತಿದ್ದಾರೆ
ಮಾಧ್ಯಮ ಮಿತ್ರರಿಗೆ...!!

**ಗುರುಸ್ವಾಮಿ ಸಿ.**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬

೦ ಜ್ಯೋತಿ ಎ.

# ಸುಭದ್ರ ಉದ್ಯೋಗ, ಸುರಕ್ಷಿತ ಮಹಿಳೆ : ಸಮಾಜದ ಪ್ರಗತಿ ಸೂಚಕಗಳು



೨೦೧೩ರ ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ (ತಡೆ, ನಿಷೇಧ, ನಿವಾರಣೆ) ಕಾಯಿದೆ ಸಮರ್ಪಕವಾಗಿ ಜಾರಿಯಾಗಬೇಕಾದರೆ ಮಹಿಳೆಯರ ಉದ್ಯೋಗ ಭದ್ರತೆ ಖಾತರಿಯಾಗಬೇಕು, ವಿಚಾರಣೆಗಳು ನ್ಯಾಯಯುತವಾಗಿ ಲಿಂಗಸೂಕ್ಷ್ಮತೆಯಿಂದ ನಡೆದು ತಪ್ಪಿತಸ್ಥರಿಗೆ ಸೇವಾ ನಿಯಮಗಳ ಪ್ರಕಾರ ಶಿಕ್ಷೆಯಾಗಬೇಕು, ಸೇವಾ ನಿಯಮಗಳನ್ನು ತಕ್ಕಂತೆ ಬದಲಿಸಬೇಕು, ಸಮಾಜ ಸಂವೇದನಾಶೀಲತೆಯನ್ನು ರೂಢಿಸಿಕೊಳ್ಳುವತ್ತ ಹೆಜ್ಜೆ ಹಾಕಬೇಕು. ಸಾಂವಿಧಾನಿಕ ಹಕ್ಕುಗಳಾದ ಘನತೆಯಿಂದ ಬದುಕುವ ಹಕ್ಕು, ಸ್ವಾತಂತ್ರ್ಯದ ಹಕ್ಕು, ಅಭಿವ್ಯಕ್ತಿ ಸ್ವಾತಂತ್ರ್ಯ, ಉದ್ಯೋಗದ ಹಕ್ಕು, ಶೋಷಣೆಯ ವಿರುದ್ಧದ ಹಕ್ಕು... ಹೀಗೆ ಎಲ್ಲವೂ ಮಹಿಳೆಯರಿಗೂ ದೊರಕುವಂತಾದಾಗಲೇ ಸಮಾಜದ ಪ್ರಗತಿ ಸಾಧ್ಯ. ಕಾರ್ಲ್ ಮಾರ್ಕ್ಸ್ ಹೇಳಿದಂತೆ, ಹೆಣ್ಣಿನ ಸಾಮಾಜಿಕ ಸ್ಥಾನಮಾನ ಸಮಾಜದ ಪ್ರಗತಿಯನ್ನು ಸೂಚಿಸುತ್ತದೆ. ಮಹಿಳಾಪರ, ಸಮಾಜಮುಖಿ ಕಾಯಿದೆಗಳ ಪ್ರಾಮಾಣಿಕ ಅನುಷ್ಠಾನದಿಂದ ದೇಶದ ಏಳಿಗೆ ಸಾಧ್ಯ. ಉದ್ಯೋಗ ಸ್ಥಳಗಳಾದ ಮತ್ತು ಸಮಾಜದಲ್ಲಿ ಸುರಕ್ಷಿತವಾಗಿರುವ ಮಹಿಳೆ ಖಂಡಿತವಾಗಿಯೂ ದೇಶದ ಆರ್ಥಿಕ ಬೆಳವಣಿಗೆಗೆ ಕೊಡುಗೆ ನೀಡಬಲ್ಲಳು. ಉದ್ಯೋಗ ಭದ್ರತೆಯುಳ್ಳ ಸುರಕ್ಷಿತ ಮಹಿಳೆ ಸಮಾಜದ ಪ್ರಗತಿ ಸೂಚಕ.

ಹೆಣ್ಣು ನಾಲ್ಕು ಗೋಡೆಗಳಾಚೆ ಬಂದು ತನ್ನ ಅಸ್ಮಿತೆಯನ್ನು ಕಂಡುಕೊಳ್ಳುತ್ತಿದ್ದಾಳೆ. ದೇಶದ ಮಹಿಳಾಪರ ಚಳವಳಿ ಅವಳನ್ನು ಪುರುಷಾಧಿಪತ್ಯದ ಸಂಕೋಲೆಗಳಿಂದ ವಿಮೋಚನೆಗೊಳಿಸಲು ನಿರಂತರವಾಗಿ ಶ್ರಮಿಸುತ್ತಿದೆ. ಆದರೂ ಮಹಿಳೆಯರ ಸ್ಥಿತಿಗತಿ ಇನ್ನೂ ಸಮಾಧಾನಕರ ಮಟ್ಟ ತಲುಪಿಲ್ಲ ಎಂಬುದು ನಿಜ. ಬೆರಳೆಣಿಕೆಯ ಮಹಿಳೆಯರು ಅಂತರಿಕ್ಷದಲ್ಲಿ ಹಾರಾಡುತ್ತಿರಬಹುದು, ಉತ್ತುಂಗ ಪರ್ವತಗಳನ್ನೇರಿರಬಹುದು, ರಾಜ್ಯಾಡಳಿತ ನಡೆಸುತ್ತಿರಬಹುದು. ಅವರು ಉತ್ತಮ ಸಾಹಿತಿಗಳಾಗಿ, ಕ್ರೀಡಾಪಟುಗಳಾಗಿ, ಪುರುಷರಿಗೆಂದು ಸಮಾಜ ಮೀಸಲಿಟ್ಟಿದ್ದ ಎಲ್ಲಾ ಹುದ್ದೆಗಳನ್ನೂ ಉತ್ತಮವಾಗಿ ನಿರ್ವಹಿಸುತ್ತ ತಮ್ಮ ಸಾಮರ್ಥ್ಯ ಸಾಬೀತುಪಡಿಸಿ ಸಂಪ್ರದಾಯಸ್ಥ ಪುರುಷಾಧಿಪತ್ಯದ ಸಮಾಜಕ್ಕೆ ಸವಾಲೆಸೆದಿರುವುದು ಸುಳ್ಳಲ್ಲ.

ಇಷ್ಟಾದರೂ ಸಮಾಜದಲ್ಲಿ ಆಳವಾಗಿ ಬೇರೂರಿರುವ ಹೆಣ್ಣಿನ ಕುರಿತ ಅಸಹನೆ ಮತ್ತು ತಾರತಮ್ಯ ಧೋರಣೆಗಳನ್ನು ಕಿತ್ತೊಗೆಯುವುದು ಸುಲಭದ ಮಾತಲ್ಲ. ಆಂತರ್ಯದಲ್ಲಿ ಜಡ್ಡುಗಟ್ಟಿರುವ ಯಜಮಾನಿಕೆ ಸಂಸ್ಕೃತಿಯನ್ನು ತೊಳೆಯುವುದು ನಿರಂತರ ಹೋರಾಟವೂ ಹೌದು. ಕುಟುಂಬ ನಿರ್ವಹಣೆಯಿಂದ ಆರಂಭವಾಗಿ ಸಮಾಜದ ಎಲ್ಲ ಸ್ತರಗಳಲ್ಲೂ ಮಹಿಳೆಯು "ಯಶಸ್ವಿ" ವಿದ್ಯಾರ್ಥಿನಿಯಾಗಿ, ಉದ್ಯೋಗಿಯಾಗಿ, ನಾಯಕಿಯಾಗಿ, ಸಾಮಾಜಿಕ ಕಾರ್ಯಕರ್ತೆಯಾಗಿ, ಶಿಕ್ಷಕಿಯಾಗಿ, ನ್ಯಾಯವಾದಿಯಾಗಿ, ಕಲಾವಿದೆಯಾಗಿ, ವೈದ್ಯೆಯಾಗಿ ಕಾರ್ಯನಿರ್ವಹಿಸುತ್ತಿರುವ ಈ ಸಂದರ್ಭದಲ್ಲಿ ಉದ್ಯೋಗ ಕ್ಷೇತ್ರ ಆಕೆಗೆ ಹಲವು ಸವಾಲುಗಳನ್ನೆಸೆದಿದೆ. ಉದ್ಯೋಗದಲ್ಲಿ ಸಮರ್ಥಳೆನಿಸಿಕೊಂಡರೂ ಶತಶತಮಾನಗಳಿಂದ ಯಜಮಾನಿಕೆ ಸಂಸ್ಕೃತಿಗೆ ಜೋತುಬಿದ್ದಿರುವ ಸಮಾಜ ಆಕೆಯನ್ನು ಬೆಂಬಿಡದ ಭೂತದಂತೆ ಕಾಡುತ್ತಿದೆ; ದುಡಿಯುವ ಸ್ಥಳಗಳಲ್ಲಿ ಮಹಿಳೆಯರಿಗೆ ಸಮರ್ಪಕ ಸೌಲಭ್ಯಗಳನ್ನು ನೀಡದೆ ಅವರ ಮೇಲಿನ ಲೈಂಗಿಕ ಕಿರುಕುಳ ಪ್ರಕರಣಗಳು ಹೆಚ್ಚು ಹೆಚ್ಚು ದಾಖಲಾಗುತ್ತಿವೆ.

ಮಹಿಳೆ ಎಂದಾಕ್ಷಣ ಅವಳು ಕಾಯಕ ಜೀವಿ ಎಂದು ಅರ್ಥೈಸಬಹುದು. ಕುಟುಂಬ ನಿರ್ವಹಣೆಯಲ್ಲಿ ಆಕೆ ತೊಡಗಿಸುವ ಶ್ರಮ, ಮಕ್ಕಳ ಲಾಲನೆ–ಪಾಲನೆ, ಪೋಷಣೆ ಎಲ್ಲವೂ ಸಮಾಜದ ಬೆಳವಣಿಗೆಗೆ ಪೂರಕವೇ ಆಗಿದ್ದರೂ ಅದನ್ನು ಗಣನೆಗೆ ತೆಗೆದುಕೊಳ್ಳದೆ ಆಕೆಗೆ ಅನ್ಯಾಯ ಎಸಗಲಾಗುತ್ತಿದೆ. ಹಾಗಾಗಿ ಚರ್ಚೆಯ ಅನುಕೂಲಕ್ಕಾಗಿ ಮಾತ್ರ ದುಡಿಯುವ ಮಹಿಳೆ ಅಥವಾ ಉದ್ಯೋಗಸ್ಥ ಮಹಿಳೆ ಎಂದು ಇಲ್ಲಿ ಮುಂದೆ ಕರೆಯಲಾಗುತ್ತದೆ. ಉತ್ಪಾದನಾ ಕ್ರಿಯೆಯಲ್ಲಿ ನೇರವಾಗಿ ತೊಡಗಿಕೊಂಡ ಮಹಿಳೆಯರನ್ನು ಇಲ್ಲಿ ದುಡಿಯುವ ಮಹಿಳೆ ಎಂದು ಸಂಬೋಧಿಸಲಾಗಿದೆ.

**ಭಾರತೀಯ ಮಹಿಳೆ ಮತ್ತು ಉದ್ಯೋಗ**

ಭಾರತದಲ್ಲಿ ಮಹಿಳೆಯರು ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.

ಭಾರತದ ಸಂವಿಧಾನದ ವಿಧಿ ೩೯, ೪೧ ಮತ್ತು ೪೨ರ ಮೂಲಕ ಮಹಿಳೆಯರಿಗೆ ಉದ್ಯೋಗದ ಹಕ್ಕು ಮತ್ತು ಯೋಗ್ಯ ಸೌಕರ್ಯಗಳನ್ನು ಸರ್ಕಾರ ನೀಡಬೇಕಾದ ಕುರಿತು ಸ್ಪಷ್ಟವಾಗಿ ಹೇಳಲಾಗಿದೆ. ಲಿಂಗ ತಾರತಮ್ಯ ನಿವಾರಣೆಯ ವಿಚಾರವಾಗಿ ಮಹಿಳೆಯರಿಗೆ ಸಂಬಂಧಿಸಿದಂತೆ ಜರುಗುತ್ತಿರುವ ಎಲ್ಲ ಬಗೆಯ ತಾರತಮ್ಯ ಗಳನ್ನು ತೆಗೆದುಹಾಕುವ ಉದ್ದೇಶದಿಂದ ಆಯೋಜಿಸಲಾಗಿದ್ದ ಸಮಾವೇಶವೂ ಸೇರಿದಂತೆ ಅನೇಕ ಅಂತರರಾಷ್ಟ್ರೀಯ ಒಡಂಬಡಿಕೆಗಳಿಗೆ ಭಾರತ ಸಹಿ ಹಾಕಿದೆ. ಇಷ್ಟಾಗಿಯೂ ಉದ್ಯೋಗದಲ್ಲಿ ಮಹಿಳೆಯರ ಪಾಲು ಹೇಳುವಂಥದ್ದೇನಲ್ಲ. ದುಡಿಯುವ ಮಹಿಳೆಯರ ಪಾಡು ಮಾತ್ರ ಅಸಹನೀಯವೇ.

ಸಮಾಜ ಮಹಿಳೆಯರ ಎಲ್ಲಾ ಶ್ರಮವನ್ನು ದುಡಿಮೆ ಎಂದು ಪರಿಗಣಿಸದಿದ್ದರೂ ಉತ್ಪಾದನೆಯಲ್ಲಿ ನೇರವಾಗಿ ತೊಡಗಿರುವ ಮಹಿಳೆಯರ ಪ್ರಮಾಣ ಶೇ. ೨೭ರಷ್ಟು (೨೦೧೪) ಎಂದು ವರದಿಗಳು ಹೇಳುತ್ತವೆ. ಇದು ಚೀನಾದಲ್ಲಿ ಶೇ. ೬೪ರಷ್ಟಿದ್ದರೆ ಬ್ರೆಜಿಲ್‌ನಲ್ಲಿ ಉದ್ಯೋಗಸ್ಥ ಮಹಿಳೆಯರ ಪ್ರಮಾಣ ಶೇ. ೫೯ರಷ್ಟಿದೆ. ದೇಶದ ಆರ್ಥಿಕತೆ ಸರಾಸರಿ ಶೇ. ೭ರಷ್ಟು ಪ್ರಗತಿ ಹೊಂದಿದ ಸಂದರ್ಭದಲ್ಲೂ, ಅಂದರೆ ೨೦೦೪-೨೦೧೧ರ ನಡುವಿನ ಅವಧಿಯಲ್ಲಿ ಮಹಿಳಾ ಶ್ರಮ ಶಕ್ತಿಯ ಪ್ರಮಾಣ ಶೇ. ೩೫ರಿಂದ ಶೇ. ೨೫ಕ್ಕೆ ಕುಗ್ಗಿತ್ತೆಂದು ದಾಖಲೆಗಳಿಂದ ತಿಳಿದುಬರುತ್ತದೆ. ಉದ್ಯೋಗಗಳನ್ನು ಕಸಿದಿರುವ ಉದಾರೀಕರಣದ ನವ-ಆರ್ಥಿಕ ನೀತಿಗಳು ಈ ಪರಿಸ್ಥಿತಿಗೆ ಕಾರಣ ಎನ್ನಬಹುದು. ಮಹಿಳಾ ಅಸಮಾನತೆಯ ನಿರ್ಮೂಲನೆಗೆ ಸಂಬಂಧಿಸಿದಂತೆ ವಿಶ್ವ ಆರ್ಥಿಕ ವೇದಿಕೆ ೨೦೦೬ರಿಂದ ನಡೆಸುತ್ತಿರುವ ಸಮೀಕ್ಷೆ ಈಗ ಸುಮಾರು ೧೪೫ ದೇಶಗಳನ್ನು ಒಳಗೊಂಡಿದೆ. “ಆರ್ಥಿಕ ಭಾಗವಹಿಸುವಿಕೆ ಮತ್ತು ಅವಕಾಶಗಳು” ಎಂಬ ಮಾನದಂಡದ ಅಡಿ ನಮ್ಮ ದೇಶ ೧೩೬ನೇ ಸ್ಥಾನದಲ್ಲಿರುವುದು ಭಾರತೀಯ ಮಹಿಳೆಯರು ಉದ್ಯೋಗದಲ್ಲಿ ಅನುಭವಿಸುತ್ತಿರುವ ಅಸಮಾನತೆ ಮತ್ತು ತಾರತಮ್ಯಗಳಿಗೆ ಸಾಕ್ಷಿ ಒದಗಿಸುತ್ತದೆ. ಮಹಿಳೆಯರು ಕಾರ್ಮಿಕರಾಗಿ ಭಾಗವಹಿಸುವುದರಲ್ಲಿ ೧೩೫ನೇ ಸ್ಥಾನ ಗಳಿಸಿ, ೦-೧ವರೆಗಿನ ಶ್ರೇಯಾಂಕದಲ್ಲಿ ೦.೩೪೪ ಮಾತ್ರ ಪಡೆಯಲು ಸಾಧ್ಯವಾಗಿದೆ.

ಅಷ್ಟೇ ಅಲ್ಲದೆ, ಭಾರತದಲ್ಲಿ ಮಹಿಳೆಯರು ಪ್ರತೀ ದಿನ ಸರಾಸರಿ ೫೩೭ ನಿಮಿಷ ದುಡಿದರೆ ಪುರುಷರು ಕೇವಲ ೪೪೨ ನಿಮಿಷ ದುಡಿಯುವರೆಂದು ಇದೇ ವರದಿ ಹೇಳುತ್ತದೆ. ಜೊತೆಗೆ, ಕೂಲಿರಹಿತ ಕೆಲಸದ ಪ್ರಮಾಣ ಮಹಿಳೆಯರಿಗೆ ದಿನವೊಂದಕ್ಕೆ ೬೬ ನಿಮಿಷಗಳಾದರೆ ಪುರುಷರಿಗೆ ೧೨ ನಿಮಿಷಗಳೆಂದು ತಿಳಿಸುತ್ತದೆ.

ಈ ಅಂಕಿಅಂಶಗಳನ್ನು ಗಮನಿಸಿದರೆ ನಮ್ಮ ದೇಶದಲ್ಲಿ ಮಹಿಳೆಯರು ಆರ್ಥಿಕ ಸ್ವಾತಂತ್ರ್ಯ, ಸಮಾನತೆಯಿಂದ ಇನ್ನೂ ಎಷ್ಟೊಂದು ದೂರ ಉಳಿದಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಓರ್ವ ಸ್ಥಿತಿವಂತ ಕಿರಣ್ ಮಜೂಮ್‌ದಾರ್ ಶಾ ಭಾರತೀಯಳಾಗಿದ್ದಾಳೆಂದರೆ, ಅದು ನಮ್ಮ ದೇಶದ ಒಟ್ಟಾರೆ ಮಹಿಳೆಯರ ಸ್ಥಾನಮಾನದ ಸಂಕೇತವಲ್ಲ ಎಂಬುದನ್ನು ಈ ಅಂಕಿಅಂಶಗಳು ಒತ್ತಿ ಹೇಳುತ್ತವೆ.

ಮಹಿಳೆಯರನ್ನು ನಮ್ಮ ಸರ್ಕಾರಗಳು ದಿನಗೂಲಿ ನೌಕರರನ್ನಾಗಿ, ಸೇವಾ ಕಾರ್ಯಕರ್ತೆಯರನ್ನಾಗಿ, ಗುತ್ತಿಗೆ ಕಾರ್ಮಿಕರನ್ನಾಗಿ, ಟ್ರೇನಿಗಳಾಗಿ ದುಡಿಸುತ್ತಿವೆ. ಶಾಶ್ವತ ಹುದ್ದೆಗಳ ಬದಲಿಗೆ ಇಂತಹ ಬದಲಿ ಉದ್ಯೋಗಗಳನ್ನು, ಕಾರ್ಮಿಕರನ್ನು ಸರ್ಕಾರ ಸೃಷ್ಟಿಸುತ್ತಿದೆ. ಮಹಿಳೆಯರ ಉದ್ಯೋಗಾವಕಾಶಗಳು ಮತ್ತು ಉದ್ಯೋಗಭದ್ರತೆ ಎರಡೂ ಗಗನಕುಸುಮಗಳಾಗೇ ಉಳಿದಿವೆ. (ಈ ಮಾತು ಪುರುಷ ಕಾರ್ಮಿಕರಿಗೂ ಅನ್ವಯಿಸುತ್ತದೆ.) ಸರ್ಕಾರಗಳ ಈ ದೌರ್ಜನ್ಯದ ಜೊತೆಗೆ ಮಹಿಳೆಯರನ್ನು ಲೈಂಗಿಕ ಕಿರುಕುಳಗಳು ಕಿತ್ತು ತಿನ್ನುತ್ತಿವೆ.

**ಉದ್ಯೋಗ ಸ್ಥಳದಲ್ಲಿ ಲೈಂಗಿಕ ಕಿರುಕುಳ**

ದುಡಿಯುವ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಚರ್ಚಿಸುವಾಗ, ೧೯೯೨ರಲ್ಲಿ ರಾಜಾಸ್ತಾನದ ಭತೇರಿ ಗ್ರಾಮದಲ್ಲಿ ಬಾಲ್ಯವಿವಾಹ ತಡೆಯಲು ಶ್ರಮಿಸಿದ ಭಾಂವ್ರಿ ದೇವಿ ಎಂಬ ‘ಸಾಥಿನ್’ ಮೇಲೆ ಗ್ರಾಮದ ಮುಖಂಡ ಮತ್ತವನ ಸಂಗಡಿಗರು ನಡೆಸಿದ ಅತ್ಯಾಚಾರವನ್ನು ಮರೆಯಲು ಸಾಧ್ಯವಿಲ್ಲ. ಈ ಸಂಬಂಧ ವಿಶಾಖಾ V/s ರಾಜಾಸ್ತಾನ ಸರ್ಕಾರದ ಮೊಕದ್ದಮೆಯನ್ನು



ಆಲಿಸಿದ ಸರ್ವೋಚ್ಚ ನ್ಯಾಯಾಲಯ ೧೯೯೭ರಲ್ಲಿ ನೀಡಿದ ಮಹತ್ವದ ತೀರ್ಪು, ದೇಶದ ದುಡಿಯುವ ಮಹಿಳೆಯರ ಪಾಲಿಗೆ ಆಶಾಕಿರಣವಾಯಿತು. ಅದು ‘ವಿಶಾಖಾ ಮಾರ್ಗದರ್ಶಿ ಸೂತ್ರಗಳು’ ಎಂದು ಪ್ರಖ್ಯಾತವಾಗಿದೆ. ಈ ಸೂತ್ರಗಳು ಆಳುವ ಸರ್ಕಾರಗಳಿಗೆ ಸರ್ವೋಚ್ಚ ನ್ಯಾಯಾಲಯ ನೀಡಿದ ನಿರ್ದೇಶನವೂ ಆಗಿತ್ತು.

ದೇಶದ ಸಮಗ್ರ ದುಡಿಯುವ ಮಹಿಳೆಯರನ್ನು ಒಳಗೊಂಡಂತೆ ನೀಡಿದ ವಿಶಾಖಾ ಮಾರ್ಗದರ್ಶಿ ಸೂತ್ರಗಳ ಮುಖ್ಯಾಂಶ ಹೀಗಿದೆ: ಭಾರತದಲ್ಲಿ ಲಕ್ಷಾಂತರ ಮಂದಿ ಮಹಿಳೆಯರು ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಅವರಿಗೆ ಭದ್ರತೆ ಮತ್ತು ಸುರಕ್ಷಿತ ಕೆಲಸದ ವಾತಾವರಣ ನಿರ್ಮಿಸಿಕೊಡಬೇಕಾದುದು ಸರ್ಕಾರ ಮತ್ತು ಮಾಲೀಕರ ಕರ್ತವ್ಯ. ಅದಕ್ಕಾಗಿ ಸರ್ಕಾರ ಒಂದು ವ್ಯವಸ್ಥಿತ ಯಂತ್ರ ರೂಪಿಸಿ ದುಡಿಯುವ ಮಹಿಳೆಯರ ಸಾಂವಿಧಾನಿಕ ಹಕ್ಕುಗಳಾದ ಲಿಂಗ ಸಮಾನತೆ ಮತ್ತು ಬದುಕಿನ ಹಕ್ಕು ಹಾಗೂ ಸ್ವಾತಂತ್ರ್ಯದ ಹಕ್ಕುಗಳನ್ನು ರಕ್ಷಿಸಬೇಕು. ಯಾವುದೇ ಕಾರಣಕ್ಕೂ ಮಹಿಳೆಯರು ಉದ್ಯೋಗ ಸ್ಥಳದಲ್ಲಿ ತಾರತಮ್ಯಕ್ಕೆ ಒಳಪಡಬಾರದು. ಘನತೆಯ ಉದ್ಯೋಗ ಮಹಿಳೆಯ ಮೂಲಭೂತ ಹಕ್ಕು. ಉದ್ಯೋಗದ ಹಕ್ಕು ಎಲ್ಲಾ ದುಡಿಯುವ ಮಹಿಳೆಯರ ಪರಭಾರೆಗೊಳಿಸಲಾಗದ ಹಕ್ಕು. ಈ ಉದ್ದೇಶಕ್ಕಾಗಿ ಕಾನೂನು ರಚನೆಯ ಅಗತ್ಯವಿದೆ. ಕಾನೂನು ರಚಿಸುವ ತನಕ ಮಹಿಳಾ ಉದ್ಯೋಗಿಗಳಿರುವ ಎಲ್ಲಾ ಸಂಘಸಂಸ್ಥೆಗಳ ಆಡಳಿತ ಮಂಡಳಿಗಳೂ, ಮಹಿಳೆಯರು ತಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳಲು ಸಾಧ್ಯವಾಗುವಂತಹ ದೂರು ಸಮಿತಿಗಳನ್ನು ರಚಿಸಬೇಕೆಂದು ಮತ್ತು ಅದರ ಬಗ್ಗೆ ಸರ್ಕಾರ ನಿಗಾವಹಿಸಬೇಕೆಂದು ಹೇಳಿತು. ವಿಸ್ತೃತವಾದ ಮಾರ್ಗದರ್ಶಿ ಸೂತ್ರಗಳನ್ನು ನೀಡಿದ ಸರ್ವೋಚ್ಚ ನ್ಯಾಯಾಲಯ ದೂರು ಸಮಿತಿ ರಚನೆಯ ಬಗ್ಗೆಯೂ ನಿರ್ದೇಶನ ನೀಡಿ ಉದ್ಯೋಗ ಸ್ಥಳದಲ್ಲಿ ಲೈಂಗಿಕ ಕಿರುಕುಳ ಎಂದರೇನೆಂದು ಸ್ಪಷ್ಟವಾಗಿ ಹೇಳಿತು. ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಸುರಕ್ಷತೆ ಕಾಪಾಡುವಲ್ಲಿ ಮಾಲೀಕರ ಮತ್ತು ಸರ್ಕಾರಗಳ ಪಾತ್ರದ ಬಗ್ಗೆ ನಿರ್ದಿಷ್ಟವಾಗಿ ಹೇಳಿದ ಮುಖ್ಯ ನ್ಯಾಯಮೂರ್ತಿ ಜೆ. ಎಸ್. ವರ್ಮಾ ಅವರನ್ನೊಳಗೊಂಡ ಪೀಠ ಮಹಿಳೆಯರ ಹಕ್ಕುಗಳನ್ನು ಎತ್ತಿ ಹಿಡಿಯಿತು.

ಇದು ಮಹಿಳಾ ಚಳವಳಿಗೆ ನ್ಯಾಯಾಂಗ ನೀಡಿರುವ ಮಹತ್ವದ ಕೊಡುಗೆ ಎಂದರೆ ತಪ್ಪಾಗಲಾರದು. ಆದರೆ ಲಿಂಗ ಸಂವೇದನೆಯಿಲ್ಲದ ಸರ್ಕಾರಗಳು ಶಾಸನ ರಚನೆ ಕಾರ್ಯವನ್ನು ಪೂರ್ಣಗೊಳಿಸಲು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದ ನಂತರವೂ ಒಂದೂವರೆ ದಶಕಗಳನ್ನು ತೆಗೆದುಕೊಂಡಿದ್ದು ನಮ್ಮ ಆಳುವ ವರ್ಗದ ಲಿಂಗ ಸೂಕ್ಷ್ಮತೆಗೆ ಕನ್ನಡಿ ಹಿಡಿಯುತ್ತದೆ.

**ಅಂತೂ ಬಂತು ಕಾನೂನು**

ಯುಪಿಎ-೨ ಸರ್ಕಾರದ ಅವಧಿಯಲ್ಲಿ ೨೦೧೩ರಲ್ಲಿ ವಿಶಾಖಾ ಮಾರ್ಗದರ್ಶಿ ಸೂತ್ರಗಳನ್ನಾಧರಿಸಿ ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯ (ತಡೆ, ನಿಷೇಧ ಮತ್ತು ನಿವಾರಣೆ) ಕಾಯಿದೆ ರಚನೆಯಾಯಿತು. ಮಹಿಳೆಯರಿಗೆ ಅಲ್ಪಸ್ವಲ್ಪ ಸಮಾಧಾನವಾಯಿತು. ಆದರೆ ಅದರ ಸಮರ್ಪಕ ಜಾರಿಗಾಗಿ ಈಗ ಸಾಹಸಪಡುವಂತಹ ಪರಿಸ್ಥಿತಿ ಎದುರಾಗಿದೆ. ನಿಜ, ಈ ಕಾಯಿದೆ ದುಡಿಯುವ ಮಹಿಳೆಯರ ಬೆನ್ನಿಗೆ ನಿಂತಿದೆ. ಆದರೆ ನಮ್ಮ ದೇಶದಲ್ಲಿ ಕಾನೂನು ರಚನೆಗೆ ಹೋರಾಡುವಷ್ಟೇ (ಒಮ್ಮೊಮ್ಮೆ

ಇನ್ನೂ ಹೆಚ್ಚೆಂದೆನಿಸುತ್ತದೆ) ಅದರ ಅನುಷ್ಠಾನಕ್ಕೂ ಹೋರಾಡ ಬೇಕಾಗಿರುವುದೂ ವಾಸ್ತವದ ಸಂಗತಿ.

**ಕಾನೂನಿನಲ್ಲಿ ಏನಿದೆ ?**

ಈ ಕುರಿತು ಸ್ಥೂಲವಾಗಿ ಚರ್ಚಿಸೋಣ. ಉದ್ಯೋಗ ಸ್ಥಳ ಎಂದರೆ, ಅದು ಮಹಿಳೆಯು ಕೆಲಸ ಮಾಡುವ ಯಾವುದೇ ಖಾಸಗಿ ಇಲ್ಲವೇ ಸರ್ಕಾರಿ ಅಥವಾ ಅರೆಸರ್ಕಾರಿ ಇಲಾಖೆ, ಸಂಘ–ಸಂಸ್ಥೆ, ಉದ್ಯಮ, ಕಚೇರಿ, ಆಸ್ಪತ್ರೆ, ಕ್ರೀಡಾ ಸಂಸ್ಥೆ, ತರಬೇತಿ ಸಂಸ್ಥೆಗಳು, ಶಾಲಾ–ಕಾಲೇಜುಗಳು, ಕೆಲಸಕ್ಕೆಂದು ನೇಮಕಗೊಂಡಿರುವ ವಾಸದ ಮನೆ, ಯಾವುದಾದರೂ ಆಗಿರಬಹುದು. ಅಲ್ಲದೆ, ಉದ್ಯೋಗದ ಕಾರಣಕ್ಕಾಗಿ ಯಾವುದೇ ಸ್ಥಳಕ್ಕೆ ಭೇಟಿ ನೀಡಿದರೆ ಅಥವಾ ಮಾಲೀಕ ನೀಡುವ ಸಾರಿಗೆ ವ್ಯವಸ್ಥೆಯೂ ಉದ್ಯೋಗ ಸ್ಥಳದ ಭಾಗವೆಂದೇ ಪರಿಗಣಿಸಲಾಗುವುದು. ವೇತನಕ್ಕಾಗಿ, ದಿನಗೂಲಿಗಾಗಿ ಅಥವಾ ಯಾವುದೇ ಸಂಬಳ ವಿಲ್ಲದೆ ಸ್ವಯಂ–ಸೇವಕರಾಗಿ ನೇರವಾಗಿ ಇಲ್ಲವೇ ಮಧ್ಯವರ್ತಿಯ ಅಥವಾ ಗುತ್ತಿಗೆದಾರನ ಮೂಲಕ, ತನ್ನ ಮಾಲೀಕ ಯಾರೆಂದು ತಿಳಿದೋ ತಿಳಿಯದೆಯೋ ಶಾಶ್ವತವಾಗಿ ಅಥವಾ ತಾತ್ಕಾಲಿಕ ವಾಗಿ ಕೆಲಸ ಮಾಡುವ ಟ್ರೇನಿ, ಅಪ್ರೆಂಟೀಸ್, ಪ್ರೊಬೇಷನರಿ, ಗುತ್ತಿಗೆ ಕಾರ್ಮಿಕ, ಇಂತಹ ಹೆಸರಿನಿಂದ ಕರೆಯಲ್ಪಡುವ ಯಾರೇ ಆಗಿರಬಹುದು, ಈ ಕಾಯಿದೆಯಡಿ ಉದ್ಯೋಗಿಯ ವ್ಯಾಪ್ತಿಗೆ ಒಳಪಡುತ್ತಾರೆ.

**ಲೈಂಗಿಕ ದೌರ್ಜನ್ಯ ಎಂದರೇನು ?**

೨೦೧೩ರ ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ದೌರ್ಜನ್ಯ (ತಡೆ, ನಿಷೇಧ ಮತ್ತು ನಿವಾರಣೆ) ಕಾಯಿದೆಯ ಪ್ರಕಾರ ಈ ಕೆಳಗಿನ ಅನಪೇಕ್ಷಣೀಯ ಕೃತ್ಯಗಳು, ಅವು ನೇರವಾಗಿ ಇಲ್ಲವೇ ಪರೋಕ್ಷ ವಾಗಿರಬಹುದು, ಲೈಂಗಿಕ ದೌರ್ಜನ್ಯದ ವ್ಯಾಪ್ತಿಗೆ ಒಳಪಡುತ್ತವೆ. ದೈಹಿಕವಾಗಿ ಮುಟ್ಟುವುದು ಮತ್ತು ಮುಂದುವರಿಯುವುದು, ಲೈಂಗಿಕ ಕ್ರಿಯೆಗೆ ಬೇಡಿಕೆ ಅಥವಾ ಕೋರಿಕೆ ಸಲ್ಲಿಸುವುದು, ಲೈಂಗಿಕಾಸಕ್ತಿಯುಳ್ಳ ಹೇಳಿಕೆ ನೀಡುವುದು, ನೀಲಿಚಿತ್ರಗಳನ್ನು ತೋರಿಸುವುದು ಹಾಗೂ ಲೈಂಗಿಕ ಗುಣವುಳ್ಳ ಯಾವುದೇ ಸ್ವಾಗತಾರ್ಹವಲ್ಲದ ದೈಹಿಕ, ಮೌಖಿಕ ಅಥವಾ ಅಮೌಖಿಕ ವರ್ತನೆಗಳು, ಇವುಗಳನ್ನು ತೋರುವಾಗ ಮಹಿಳೆಗೆ ಉದ್ಯೋಗದಲ್ಲಿ ಆದ್ಯತೆ ನೀಡುತ್ತೇನೆಂದು ಹೇಳಿ ನೇರವಾಗಿ ಇಲ್ಲವೇ ಪರೋಕ್ಷವಾಗಿ ಪುಸಲಾಯಿಸುವುದು, ಮಹಿಳೆಗೆ ಉದ್ಯೋಗದಲ್ಲಿ ಬೆದರಿಕೆ ಒಡ್ಡುವುದು, ಆಕೆಯ ಉದ್ಯೋಗದ ಭವಿಷ್ಯದ ಬಗ್ಗೆ ನೇರವಾಗಿ ಇಲ್ಲವೇ ಪರೋಕ್ಷವಾಗಿ ಬೆದರಿಕೆ ಒಡ್ಡುವುದು, ಅವಳ ಕೆಲಸದ ಸ್ಥಳದಲ್ಲಿ ಭಯದ ಮತ್ತು ಅವಳ ಮನ ನೋಯಿಸುವ ವಾತಾವರಣ ನಿರ್ಮಾಣ ಮಾಡುವುದು, ಅವಳ ಆರೋಗ್ಯ ಮತ್ತು ಸುರಕ್ಷತೆಯ ಮೇಲೆ ದುಷ್ಪರಿಣಾಮ ಬೀರುವಂತಹ ಅವಮಾನಕರ ವರ್ತನೆ ಪ್ರದರ್ಶಿಸುವುದು, ಇವುಗಳಲ್ಲಿ ಯಾವುದೇ ನೇರವಾಗಿ ಅಥವಾ ಪರೋಕ್ಷವಾಗಿ ನಡೆದರೂ ಅದು ಲೈಂಗಿಕ ದೌರ್ಜನ್ಯದ ವ್ಯಾಪ್ತಿಗೆ ಒಳಪಡುತ್ತದೆ.

ಇದನ್ನೇ ಸರಳೀಕರಿಸುವುದಾದರೆ, ಈ ಕಾಯಿದೆಯ ವ್ಯಾಪ್ತಿಯಡಿ ಮಹಿಳೆ ಎಂಬ ಕಾರಣಕ್ಕಾಗಿ ಮಹಿಳಾ ಉದ್ಯೋಗಿಗಳಿಗೆ ಪುರುಷ ಸಹೋದ್ಯೋಗಿಗಳು ಅಥವಾ ಮಾಲೀಕರು ನೀಡಲಾಗುವ ಕಿರುಕುಳವನ್ನೂ ಅವರು ತೋರುವ ಅವಮಾನ–ತಾರತಮ್ಯಗಳನ್ನೂ ಹಾಗೂ ಆಕೆಯ ಉದ್ಯೋಗಕ್ಕೆ ತೊಂದರೆ ಉಂಟುಮಾಡುವಂತಹ ಕೃತ್ಯಗಳನ್ನು ಲೈಂಗಿಕ ದೌರ್ಜನ್ಯ ಎನ್ನಬಹುದು. ಮಹಿಳೆಗೆ ಇಷ್ಟವಾಗದ ಲೈಂಗಿಕ ವರ್ತನೆಗಳು ದೌರ್ಜನ್ಯಗಳೇ. ಮಹಿಳೆಯೆಂದು ತಾರತಮ್ಯ ಎಸಗುವುದೂ ಲೈಂಗಿಕ ದೌರ್ಜನ್ಯವೇ.

**ಆಂತರಿಕ ಮತ್ತು ಸ್ಥಳೀಯ ದೂರು ಸಮಿತಿಗಳು**

ಹತ್ತು ಮತ್ತು ಅದಕ್ಕಿಂತ ಹೆಚ್ಚು ಜನ ಕೆಲಸ ಮಾಡುವ ಸ್ಥಳಗಳಲ್ಲಿ ಮಾಲೀಕರು ಆಂತರಿಕ ದೂರು ಸಮಿತಿಗಳನ್ನು ರಚಿಸಬೇಕು. ಈ ಸಮಿತಿಯಲ್ಲಿ ಅರ್ಧದಷ್ಟಾದರೂ ಮಹಿಳಾ ಸದಸ್ಯರಿರತಕ್ಕದ್ದು. ಉದ್ಯೋಗಿಗಳಿಂದಲೂ ಇಬ್ಬರಿಗಿಂತ ಕಡಿಮೆ ಇಲ್ಲದಂತೆ ಸಮಿತಿಯಲ್ಲಿ ಸದಸ್ಯರಿರುವುದು ಅಗತ್ಯ. ಸಮಿತಿಯ ಅಧ್ಯಕ್ಷತೆಯನ್ನು ಮಹಿಳಾ ಅಧಿಕಾರಿಯೇ ವಹಿಸಬೇಕು. ಹಾಗೂ ಈ ವಿಷಯದಲ್ಲಿ ಪರಿಣತಿ ಹೊಂದಿರುವ ಅಥವಾ ಮಹಿಳೆಯರ ಹಕ್ಕುಗಳಿಗಾಗಿ ಕೆಲಸ ಮಾಡಿರುವ ಒಬ್ಬರನ್ನು ಸದಸ್ಯರನ್ನಾಗಿಸುವುದು ಕಡ್ಡಾಯ. ಸಮಿತಿಯ ಉದ್ದೇಶ ಈಡೇರಲು ಇದು ಅತ್ಯಗತ್ಯ. ಆಂತರಿಕ ದೂರು ಸಮಿತಿಯ ಪ್ರಯೋಜನವನ್ನು ಕೈಗಾರಿಕಾ ಕಾರ್ಮಿಕರು, ಖಾಸಗಿ ಕಂಪನಿಗಳ ನೌಕರರು, ಸರ್ಕಾರಿ ನೌಕರರು ಮುಂತಾದ ಸಂಘಟಿತ ವಲಯದ ಮಹಿಳಾ ಸಿಬ್ಬಂದಿ ಪಡೆಯಬಹುದು. ಪೌರಕಾರ್ಮಿಕರಿಗೂ ಆಂತರಿಕ ದೂರು ಸಮಿತಿ ರಚನೆಯಾಗತಕ್ಕದ್ದು. ಮಾಲೀಕನ ವಿರುದ್ಧವೇ ಲೈಂಗಿಕ ದೌರ್ಜನ್ಯದ ದೂರು ಕೊಟ್ಟಾಗ ಅದನ್ನು ಸ್ಥಳೀಯ ದೂರು ಸಮಿತಿಗೆ ವರ್ಗಾಯಿಸಲಾಗುವುದು.

ನಮ್ಮ ದೇಶದಲ್ಲಿ ಅಸಂಘಟಿತ ವಲಯದಲ್ಲಿ ಕೆಲಸ ಮಾಡುವ ಕೋಟ್ಯಂತರ ಮಹಿಳೆಯರಿದ್ದಾರೆ. ಕೃಷಿಕೂಲಿ ಕಾರ್ಮಿಕರು, ಮನೆಗೆಲಸ ಕಾರ್ಮಿಕರು, ಬೀದಿಬದಿ ವ್ಯಾಪಾರಿಗಳು, ಹಾಲಿನ ಡೈರಿಗೆ ಹಾಲು ಸರಬರಾಜು ಮಾಡುವ ಮಹಿಳೆಯರು, ಬೀಡಿ ಕಟ್ಟುವ ಮಹಿಳೆಯರು, ಗಾರೆ ಕೆಲಸಗಾರರು... ಇತ್ಯಾದಿ. ಇವರು ಕೆಲಸ ಮಾಡುವ ಸ್ಥಳಗಳಲ್ಲಿ ದಿನನಿತ್ಯ ಲೈಂಗಿಕ ದೌರ್ಜನ್ಯಕ್ಕೊಳಗಾಗುತ್ತಿರುತ್ತಾರೆ. ಅಂತಹ ಸಂದರ್ಭಗಳಲ್ಲಿ ಸ್ಥಳೀಯ ದೂರು ಸಮಿತಿ ಇವರಿಗೆ ಕಾನೂನಾತ್ಮಕವಾಗಿ ಸಹಾಯಕ್ಕೆ ಬರುತ್ತದೆ. ಪ್ರತಿ ಜಿಲ್ಲೆಯಲ್ಲೂ ರಾಜ್ಯ ಸರ್ಕಾರ ಕಾಯಿದೆಯ ಅನುಷ್ಠಾನಕ್ಕಾಗಿ ಒಬ್ಬ ಅಧಿಕಾರಿಯನ್ನು ನೇಮಕ ಮಾಡುತ್ತದೆ. ಕರ್ನಾಟಕದಲ್ಲಿ ಜಿಲ್ಲಾಧಿಕಾರಿಯನ್ನು ನೇಮಕ ಮಾಡಲಾಗಿದೆ. ಇವರು ಮಹಿಳೆಯರಿಗೋಸ್ಕರ ಕೆಲಸ ಮಾಡಿರುವ ಸಮಾಜದ ಧೀಮಂತ ಮಹಿಳೆಯೊಬ್ಬರ ಅಧ್ಯಕ್ಷತೆಯಲ್ಲಿ ಸ್ಥಳೀಯ ದೂರು ಸಮಿತಿಯನ್ನು ರಚಿಸತಕ್ಕದ್ದು.

**ಲೈಂಗಿಕ ದೌರ್ಜನ್ಯದ ದೂರಿನ ವಿಲೇವಾರಿ**

ನೊಂದ ಮಹಿಳೆ ತನಗೆ ಅನ್ವಯವಾಗುವಂತೆ, ಘಟನೆ ನಡೆದ ಮೂರು ತಿಂಗಳೊಳಗಾಗಿ ಆಂತರಿಕ ಇಲ್ಲವೇ ಸ್ಥಳೀಯ ದೂರು ಸಮಿತಿಗೆ ದೂರು ನೀಡಬೇಕು. ಮೇಲ್ನೋಟಕ್ಕೆ ದೂರು ನಿಜವೆಂದು ಸಮಿತಿ ಅಭಿಪ್ರಾಯಪಟ್ಟರೆ ವಿಚಾರಣೆಯನ್ನು ಮುಂದುವರಿಸಲಾಗುತ್ತದೆ. ಅಲ್ಲದೆ ಸಂಧಾನಕ್ಕೂ ಅವಕಾಶ ನೀಡಲಾಗುತ್ತದೆ. ಆದರೆ ಈ ಕಾಯಿದೆಯ ಆಚೆ ಲೈಂಗಿಕ ದೌರ್ಜನ್ಯ / ಕಿರುಕುಳವು ರಾಜಿಯಾಗದ ಅಪರಾಧ ಎಂಬುದು ಗಮನಿಸಬೇಕಾದ ಅಂಶ. ವಿಚಾರಣೆಯು ಸಹಜ ನ್ಯಾಯದ ತತ್ವಗಳನ್ನು ಪಾಲಿಸಿದರೂ ಲಿಂಗಸೂಕ್ಷ್ಮತೆ ಇರಬೇಕಾದುದು ಅಗತ್ಯ ಎಂದು ಇದುವರೆಗಿನ ಅನುಭವ ಹೇಳುತ್ತದೆ.

ಒಂದು ಪ್ರಕರಣದಲ್ಲಿ ಸರ್ಕಾರಿ ಸಂಸ್ಥೆಯೊಂದರಲ್ಲಿ ದುಡಿಯುತ್ತಿರುವ ಮಹಿಳೆ ಮತ್ತು ಪುರುಷರಿಬ್ಬರೂ ಒಂದೇ ದರ್ಜೆಯ ನೌಕರರು. ಆಕೆ ವಿಧವೆ, ಗಂಡನ ಕೆಲಸ ಪಡೆದು ತಾನಾಯಿತು ತನ್ನ ಪಾಡಾಯಿತೆಂದು ಇದ್ದಳು. ಈತ ಇನ್ನೇನು ನಿವೃತ್ತಿಯಾಗುವ ವಯಸ್ಸು. ಬಾಯಿಗೆ ಬಂದಂತೆ ಸಿಕ್ಕಸಿಕ್ಕ ಮಹಿಳೆಯರನ್ನೆಲ್ಲಾ ಅಸಭ್ಯವಾಗಿ ನಿಂದಿಸುವುದು ಮುಂತಾದುವನ್ನು ಚಾಳಿ ಮಾಡಿಕೊಂಡಿದ್ದ. ಒಮ್ಮೊಮ್ಮೆ ಮಹಿಳಾ ಸಹೋದ್ಯೋಗಿಗಳು ಬೈದು ಸುಮ್ಮನಾಗುತ್ತಿದ್ದರು, ಇದನ್ನು ಮೇಲಧಿಕಾರಿಗಳ ಗಮನಕ್ಕೆ ತಂದಾಗ ಅದನ್ನೆಲ್ಲಾ ನಿರ್ಲಕ್ಷಿಸಿ ಎಂಬ ಬುದ್ಧಿಮಾತು ಕೇಳಿ ವಾಪಸ್ ಹೋಗುತ್ತಿದ್ದರು. ಹೀಗಿರುವಾಗ ಅವನಿಗೆ ತನಗೆ ಯಾರೂ ಏನೂ ಮಾಡಲು ಸಾಧ್ಯವಿಲ್ಲ ಎಂಬ ಮೊಂಡು ಆತ್ಮವಿಶ್ವಾಸದಿಂದ ಆ ಮಹಿಳೆಗೆ ಹೊತ್ತಲ್ಲದ ಹೊತ್ತಿನಲ್ಲಿ ಫೋನ್ ಮಾಡಿ ತೊಂದರೆ ನೀಡಲು ಆರಂಭಿಸಿದ. ಅವಳ ಸಹನೆಯ ಮಿತಿ ಮೀರಿದಾಗ ಮತ್ತೊಮ್ಮೆ ಮೇಲಧಿಕಾರಿಗೆ ಹೇಳಲು ಅವರ ಕೊಠಡಿಯ ಬಾಗಿಲಿಗೆ ಹೋದಾಗ ಇಬ್ಬರಿಗೂ ಕಚೇರಿಯ ಆವರಣದಲ್ಲೇ ಮಾರಾಮಾರಿಯಾಗಿ ಆಕೆ ಆಸ್ಪತ್ರೆ ಸೇರಬೇಕಾಯಿತು. ಇದು ಆಂತರಿಕ ದೂರು ಸಮಿತಿಯ ಮುಂದೆ ಬಂತು. ಸಮಿತಿಯ ಮುಂದೆ ಆತ ಆಡಿದ ನಾಟಕ ಅಷ್ಟಿಷ್ಟಲ್ಲ. ಈ ದೂರಿನಿಂದ ತನ್ನ ಮಗಳ ಮದುವೆ ನಿಲ್ಲುತ್ತದೆಂಬ ಭಾವನಾತ್ಮಕ ಪುಕಾರು ಹಬ್ಬಿಸಲು ಯತ್ನಿಸಿ ಹೆಂಡತಿ, ಮಗಳನ್ನು ಕಚೇರಿಯ ಮೆಟ್ಟಿಲು ಹತ್ತಿಸಿದ. ಫೋನ್ ಕಳೆದು ಹೋಗಿದೆಯೆಂದು ನಾಟಕ ಮಾಡಿದ. ಹೆಂಡತಿ–ಮಗಳನ್ನು ಮಾತನಾಡಿಸಿದ ಸಮಿತಿಯ ಸದಸ್ಯರು, "ನಿಮಗೂ ಈ ಪ್ರಕರಣಕ್ಕೂ ಸಂಬಂಧವಿಲ್ಲ, ನೀವು ಇದರಲ್ಲಿ ಮೂಗುತೂರಿಸಬಾರದು. ನೀವೂ ಮಹಿಳೆಯರು. ಇನ್ನೊಬ್ಬ ಹೆಣ್ಣಿನ ಕಷ್ಟವನ್ನು ಅರ್ಥ ಮಾಡಿಕೊಳ್ಳಬೇಕು. ನಾಳೆ ಇದೇ ತೊಂದರೆ ನಿಮ್ಮ ಮನೆಯ ಹೆಣ್ಣುಮಕ್ಕಳಿಗಾದರೆ ಹೀಗೇ ಸ್ಪಂದಿಸುತ್ತೀರಾ ? ಇದು ಸರಿಯಲ್ಲ. ನಾವು ನ್ಯಾಯಬದ್ಧವಾಗಿ ತಾರತಮ್ಯವಿಲ್ಲದೆ ವಿಚಾರಣೆ ನಡೆಸುತ್ತೇವೆ, ಹೆದರದೆ ನೀವಿನ್ನು

ಹೊರಡಬಹುದು" ಎಂದು ಬುದ್ಧಿ ಹೇಳಿ ಕಳಿಸಿದರು. ಮತ್ತೆಂದೂ ಅಂತಹ ಮದುವೆ, ಕುಟುಂಬದ ನಾಟಕ ಪುನರಾವರ್ತನೆಯಾಗಲಿಲ್ಲ! ಆತನ ವಿರುದ್ಧ ಹಲವು ನಿಚ್ಚಳ ಸಾಂದರ್ಭಿಕ ಸಾಕ್ಷಿಗಳು ದೊರೆತು ವರದಿ ನೀಡಲಾಯಿತು.

**ವಿಚಾರಣಾಧೀನ ಸಂದರ್ಭದ ಸೌಲಭ್ಯಗಳು**

ಬಹಳ ಮುಖ್ಯವಾಗಿ ವಿಚಾರಣಾವಧಿಯಲ್ಲಿ ನೊಂದ ಮಹಿಳೆಗೆ ಆರೋಪಿ ಮತ್ತು ಆ ಪರಿಸರದಿಂದ ದೂರವಿದ್ದು ಗಾಯಗೊಂಡ ಮನಸ್ಸಿಗೆ, ಶರೀರಕ್ಕೆ (ಏನಾದರೂ ಆಗಿದ್ದರೆ), ಸಾಂತ್ವನ ದೊರಕಿಸಿ ಸಹಜ ಸ್ಥಿತಿಗೆ ಮರಳಿ ಕೆಲಸ ಮಾಡಲೆಂದು ಆರೋಪಿ ಮತ್ತು ದೂರುದಾರರನ್ನು ಬೇರ್ಪಡಿಸುವ ಹಾಗೂ ಗರಿಷ್ಠ ೩ ತಿಂಗಳವರೆಗೆ ವಿಶೇಷ ರಜೆ ನೀಡುವ ಅವಕಾಶವಿದೆ. ಸರ್ಕಾರಗಳು ಇದನ್ನು ಕುರಿತು ಆದೇಶವನ್ನೂ ಹೊರಡಿಸಿವೆ. ಆದರೆ ಇದನ್ನು ಹಲವು ಸಮಿತಿಗಳು ಗಮನಕ್ಕೆ ತೆಗೆದುಕೊಳ್ಳದಿರುವುದು ಕಂಡುಬಂದಿದೆ. ರಜೆ ಕೇಳಿ ಅರ್ಜಿ ನೀಡಿದಾಗಲೂ ಸಮಿತಿ ವೈದ್ಯಕೀಯ ಪ್ರಮಾಣ ಪತ್ರ ಬೇಡಿರುವುದನ್ನು ನೋಡಿದ್ದೇವೆ. ಇದು ಅಂತಹ ಸಮಿತಿ ಸದಸ್ಯೆಯರ ಲಿಂಗ ಅಸೂಕ್ಷ್ಮತೆಯನ್ನು ಎತ್ತಿ ಹಿಡಿಯುತ್ತದೆ.

ಉದ್ಯೋಗ ಸ್ಥಳದಲ್ಲಿ ಮಹಿಳೆಯ ಮೇಲಿನ ದೌರ್ಜನ್ಯ ಪ್ರಕರಣಗಳ ವಿಷಯದಲ್ಲಿ ದೂರು ನಿಜವೆಂದು ಕಂಡುಬಂದಲ್ಲಿ, ನೊಂದ ಮಹಿಳೆ ಸಂಧಾನ ಬೇಡವೆಂದಲ್ಲಿ, ಮೂರು ತಿಂಗಳೊಳಗಾಗಿ ವಿಚಾರಣೆ ಮುಗಿಸಿ ವರದಿಯನ್ನು ಸಂಸ್ಥೆಯ ಮುಖ್ಯಸ್ಥರಿಗೆ ನೀಡುವುದು. ಸಮಿತಿಯ ಶಿಫಾರಸ್ಸುಗಳನ್ನು ಆಡಳಿತ ಮಂಡಳಿಗಳು ಜಾರಿಗೊಳಿಸಬೇಕು.

**ಸುಳ್ಳು ದೂರುಗಳು**

ಸುಳ್ಳು ದೂರುಗಳನ್ನು ನೀಡಿ ಕಾಯಿದೆಯ ದುರುಪಯೋಗ ಮಾಡಿಕೊಳ್ಳುವುದನ್ನು ತಡೆಯಲು ಈ ಕಾನೂನು ನಿಬಂಧನೆಯನ್ನು ರೂಪಿಸಲಾಗಿದೆ. ಸುಳ್ಳು ದೂರುದಾರರ ಮೇಲೆ ಕ್ರಮ ಕೈಗೊಳ್ಳಲು ಸೂಚಿಸುತ್ತಲೇ ಸುಳ್ಳನ್ನು ಉದ್ದೇಶ ಪೂರ್ವಕವಾಗಿ ಹೇಳಲಾಗಿದೆ ಎಂದು ಸಾಬೀತುಪಡಿಸಿ, ಆನಂತರ ಈ ಕ್ರಮಕ್ಕೆ ಮುಂದಾಗಬೇಕೆಂದು ಸ್ಪಷ್ಟಪಡಿಸುತ್ತದೆ. ಕೇವಲ ದೂರನ್ನು ಸಾಬೀತುಪಡಿಸಲು ಅಥವಾ ಸಾಕಷ್ಟು ಸಾಕ್ಷ್ಯಾಧಾರಗಳನ್ನು ಒದಗಿಸಲು ಸಾಧ್ಯವಾಗದ ಕಾರಣಕ್ಕೆ ಈ ಕ್ರಮ ಕೈಗೊಳ್ಳತಕ್ಕದ್ದಲ್ಲ ಎಂಬ ಅತಿ ಮುಖ್ಯವಾದ ಅಂಶವನ್ನು ಸ್ಪಷ್ಟಪಡಿಸಲಾಗಿದೆ.

ಅನುಭವದ ಆಧಾರದಲ್ಲಿ ಹೇಳುವುದಾದರೆ, ಈವರೆಗೂ ಸುಳ್ಳು ದೂರುಗಳು ದಾಖಲಾಗಿರುವ ಸಂದರ್ಭಗಳೇ ಇಲ್ಲ ಎನ್ನಬಹುದು. ಆಗಿರುವ ದೌರ್ಜನ್ಯಗಳನ್ನೇ ಹೇಳಿಕೊಳ್ಳಲು ಹಿಂಜರಿಯುವ ಮಹಿಳೆಯರು ಈ ವಿಷಯದಲ್ಲಿ ಸುಳ್ಳು ಹೇಳಿ ಇರುವ ಕೆಲಸವನ್ನೂ ಕಳೆದುಕೊಳ್ಳುವುದು ದೂರದ ಮಾತು. ಅದರ ಸಾಧ್ಯತೆ ಇಲ್ಲವೆಂದೇನಲ್ಲ. ರಾಜಕೀಯ ಮತ್ತು ಅಧಿಕಾರದ ಹಗ್ಗಜಗ್ಗಾಟದಲ್ಲಿ ತಿಳುವಳಿಕೆ ಇಲ್ಲದ ಮಹಿಳೆಯರನ್ನು ಹೀಗೆ ದುರ್ಬಳಕೆ ಮಾಡಿಕೊಳ್ಳುವ ಕೆಟ್ಟ ಮನಃಸ್ಥಿತಿಯೂ ಸಮಾಜದಲ್ಲಿದೆ. ರಾಜಕೀಯ ದಾಳವಾಗಿ ಹೆಣ್ಣನ ಮತ್ತು ಹೆಣ್ಣಿನ ಶರೀರ ಬಳಕೆಯಾಗುವುದು ಸಮಾಜದ ಅತ್ಯಂತ ಹೀನ ಬೆಳವಣಿಗೆ.

**ಮಾಲೀಕರ ಕರ್ತವ್ಯ**

ಮಹಿಳೆಯರಿಗೆ ಸುರಕ್ಷಿತವಾದ ಕೆಲಸದ ವಾತಾವರಣ ಕಲ್ಪಿಸುವುದು, ದುಡಿಯಲು ಸಮಾನ ಅವಕಾಶ ನೀಡುವುದು, ಇವು ಮಾಲೀಕರ ಕರ್ತವ್ಯ. ಇದಕ್ಕಾಗಿ ವಿಚಾರಣೆಗಳಿಗೆ ಸಹಕರಿಸುವುದು, ಲೈಂಗಿಕ ದೌರ್ಜನ್ಯವನ್ನು ಗಂಭೀರವಾದ ಅಪರಾಧವೆಂದು ಪರಿಗಣಿಸಿ ಕಿರುಕುಳ ನೀಡುವವರ ವಿರುದ್ಧ ಸೂಕ್ತ ಶಿಸ್ತಿನ ಕ್ರಮ ಕೈಗೊಳ್ಳುವುದು, ಉದ್ಯೋಗಿಗಳಿಗೆ ಮತ್ತು ಸಮಿತಿ ಸದಸ್ಯರಿಗೆ ಸೇರಿದಂತೆ ಕಾಯಿದೆಯ ಕುರಿತು ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ಇವುಗಳಿಗೆ ಮಾಲೀಕರು ಹೊಣೆಗಾರರಾಗುತ್ತಾರೆ. ಮಾಲೀಕರು ಈ ನಿಬಂಧನೆಗಳನ್ನು ಪಾಲಿಸದಿದ್ದರೆ, ಕಾನೂನುರೀತ್ಯಾ ದಂಡ ತೆರಬೇಕಾಗುತ್ತದೆ. ಸರ್ಕಾರದ ಕಾರ್ಮಿಕ ಇಲಾಖೆಯ ಸ್ಥಾಯಿ ಆದೇಶಗಳಲ್ಲಿ ಈ ನಿಬಂಧನೆ ಅಳವಡಿಸಲಾಗಿದೆ.

ವಾಸ್ತವದಲ್ಲಿ, ಬಹುತೇಕ ಕಂಪನಿಗಳಲ್ಲಿ ಮತ್ತು ಸರ್ಕಾರಿ ಇಲಾಖೆಗಳಲ್ಲಿ ಆಂತರಿಕ ದೂರು ಸಮಿತಿಗಳ ರಚನೆಯಾಗಿರುತ್ತದೆ. ಆದರೆ ಲಿಂಗಸೂಕ್ಷ್ಮತೆ ಇರುವವರಾಗಲೀ, ವಿಷಯದ ಬಗ್ಗೆ ಪರಿಣತಿ ಇರುವವರಾಗಲೀ, ಮಹಿಳಾಪರ ದೃಷ್ಟಿಕೋನ ಹೊಂದಿರುವವರಾಗಲೀ ಸಮಿತಿಯ ಭಾಗವಾಗಿರುವುದಿಲ್ಲ. ಒಮ್ಮೆ ಮಹಿಳೆಯರಿಗೆ ಸಂಬಂಧಪಟ್ಟ ಸಭೆಯಲ್ಲಿ ಕಂಡುಬಂದ ನಿಜಾಂಶವೆಂದರೆ ಒಂದು ಜಿಲ್ಲೆಯಲ್ಲಿ ರಚಿಸಿದ್ದ ೧೪ ಸರ್ಕಾರಿ ಇಲಾಖೆಗಳ ಆಂತರಿಕ ದೂರು ಸಮಿತಿಗಳಲ್ಲಿ ಒಂದೇ ಸ್ವಯಂ ಸೇವಾ ಸಂಸ್ಥೆಯ ಪ್ರತಿನಿಧಿಯನ್ನು ಬಾಹ್ಯ ಸದಸ್ಯೆಯನ್ನಾಗಿಸಿ ಕೊಂಡಿದ್ದು. ಆದರೆ ಅದೇ ಜಿಲ್ಲೆಯಲ್ಲಿ ಪ್ರಗತಿಪರ ಮಹಿಳಾ ಸಂಘಟನೆಗಳು ಅತ್ಯಂತ ಸಕ್ರಿಯವಾಗಿದ್ದರೂ ಜಿಲ್ಲಾಡಳಿತ ಅವುಗಳನ್ನು ಹೊರಗಿಟ್ಟು ಇಂತಹ ಎನ್‌ಜಿಒಗಳನ್ನು ಪೋಷಣೆ ಮಾಡುತ್ತಿರುವುದರ ಹಿಂದೆ ಅಡಗಿರುವ ಮರ್ಮ ಯಾರಿಗಾದರೂ ತಿಳಿಯದೇ ಇರದು! ಆಂತರಿಕ ದೂರು ಸಮಿತಿಗಳು ಮತ್ತು ಸ್ಥಳೀಯ ದೂರು ಸಮಿತಿಗಳು (ರಚನೆಯಾಗಿರುವುದರ ಬಗ್ಗೆ ಖಚಿತ ಮಾಹಿತಿ ಇಲ್ಲ) ಕೇವಲ ಹೆಸರಿಗೆ ಮಾತ್ರ ಎನ್ನುವಂತಾಗಿರುವುದು ವಿಪರ್ಯಾಸ.

**ಕೆಲವು ಪ್ರಕರಣಗಳು**

ಗೃಹ ಸಚಿವಾಲಯದಡಿ ಕಾರ್ಯ ನಿರ್ವಹಿಸುವ ಒಂದು ಇಲಾಖೆಯಲ್ಲಿ ಮಹಿಳೆಯರು ಲೈಂಗಿಕ ದೌರ್ಜನ್ಯದ ದೂರು ನೀಡಿದ್ದು, ಆ ಕುರಿತು ಇಲಾಖಾ ವಿಚಾರಣೆ ನಡೆಸಲಾಗಿದೆ. ಬಹುಶಃ ಆಂತರಿಕ ದೂರು ಸಮಿತಿ ರಚನೆಯಾಗಿಲ್ಲವೋ ಏನೋ! ಸರ್ಕಾರದ ಗೃಹ ಇಲಾಖೆಯಲ್ಲೇ ಕಾನೂನು ಕಟ್ಟಳೆಗಳು ಬದಲಾದರೆ ಇನ್ನು ಇತರರ ಪಾಡೇನು? ಉದ್ಯೋಗಸ್ಥ ಮಹಿಳೆಯರ ಲೈಂಗಿಕ ದೌರ್ಜನ್ಯದ ದೂರುಗಳನ್ನು ಯಾರು ಹೇಗೆ ಸ್ವೀಕರಿಸಬೇಕು, ಹೇಗೆ ವಿಚಾರಣೆ ನಡೆಸಬೇಕೆಂಬ ಕನಿಷ್ಠ ಪರಿಜ್ಞಾನವೂ ಇಲ್ಲವಾದರೆ ಇಂತಹ ಸಂವೇದನಾರಹಿತ ಜೀವಿಗಳು ಜೈವಿಕವಾಗಿ ಹೆಣ್ಣಾದರೇನು ಗಂಡಾದರೇನು? ಲೈಂಗಿಕ ದೌರ್ಜನ್ಯವನ್ನು ಅನುಭವಿಸಿರುವ ಮಹಿಳೆಯರು ದೂರು ನೀಡಿದರೆ ಅವರನ್ನು ಯಾವುದಾದರೂ ಕುಂಟು ನೆಪವೊಡ್ಡಿ ಅಕ್ರಮವಾಗಿ ಕೆಲಸದಿಂದ ವಜಾ ಮಾಡುವ ದುಷ್ಟ ಕೆಲಸ ಸರ್ಕಾರಿ ಇಲಾಖೆಗಳಲ್ಲಿ ನಡೆಯುತ್ತಿದೆ. ಅದನ್ನು ಪ್ರಶ್ನಿಸುವ ನೊಂದ ಮಹಿಳೆಯರಿಗೆ ಕ್ಷಮಾಪಣೆ ಕೇಳಿಕೊಳ್ಳಿ ಎಂಬ ಬುದ್ಧಿಮಾತಿನ ಸುರಿಮಳೆ ಯಥೇಚ್ಛವಾಗಿ ಅಧಿಕಾರಸ್ಥರಿಂದ ಭೋರ್ಗರೆಯುತ್ತದೆ. ಶಾಸನವೇನೋ ಪುಸ್ತಕರೂಪದಲ್ಲಿ ಅದ್ಭುತವಾಗಿ ಕಂಡುಬರುತ್ತದೆ. ಆದರೆ ಶಾಸಕರು? ಶಾಸನವನ್ನು ಜಾರಿಗೊಳಿಸಬೇಕಾದ ಹೊಣೆ ಹೊತ್ತ ಅಧಿಕಾರಿಗಳು? – ಈ ಜನರು ನೊಂದ ಮಹಿಳೆಗೆ ಮತ್ತಷ್ಟು ನೋವು ನೀಡುತ್ತಿದ್ದಾರಷ್ಟೆ. ದುಷ್ಟ ರಕ್ಷಣೆ, ಶಿಷ್ಟ ಭಕ್ಷಣೆ ನಡೆಯುತ್ತಿದೆ. ಗೃಹ ಇಲಾಖೆಯ ಮಹಿಳಾ ಸಿಬ್ಬಂದಿ ಇತರರ ರಕ್ಷಣೆ ಮಾಡುವವರೇ ಹೊರತು ತಮಗೋಸ್ಕರ ಬೀದಿಗೆ ಇಳಿಯುವಂತಿಲ್ಲ. ಅವರಿಗೆ ನ್ಯಾಯ ನೀಡುವ ಒಳ್ಳೆಯತನವೂ ಸರ್ಕಾರಗಳಿಗಿಲ್ಲ. ಸದಾ ಬಾಯಿ ತೆರೆದಿರುವ ಮಾಧ್ಯಮಗಳು ಇಂತಹ ನೈಜ ಸಮಸ್ಯೆಗಳು ಉದ್ಭವಿಸಿದಾಗ ಕಿವಿ, ಕಣ್ಣು ಮುಚ್ಚಿಕೊಳ್ಳುತ್ತವೆ. ಪ್ರಭಾವಿಗಳ ಕುರುಡು ಕಾಂಚಾಣಕ್ಕೆ ಎಲ್ಲವೂ ಮಸುಕಾಗಿಬಿಡುವುದು ವ್ಯವಸ್ಥೆಯ ದುರಂತ.

ಒಮ್ಮೆ ಓರ್ವ ಮನೆಗೆಲಸದಾಕೆ ಬಂದು "ಅಕ್ಕಾ, ಒಂದು ವಿಷಯ ಹೇಳಬೇಕು, ಹೇಗೆ ಹೇಳುವುದೋ ತಿಳಿಯುತ್ತಿಲ್ಲ" ಎಂದಳು. ನೋಡಲು ಬೆಳ್ಳಗೆ, ತೆಳ್ಳಗಿದ್ದ ಎತ್ತರದ ಮಧ್ಯವಯಸ್ಕ ಮಹಿಳೆ, ಪಟಪಟನೆ ಕೆಲಸ ಮಾಡುತ್ತ, ಹೆಚ್ಚು ಓದಿಲ್ಲದಿದ್ದರೂ ಕೈಗೆ ಸಿಕ್ಕ ದಿನಪತ್ರಿಕೆಯನ್ನು ಬಿಡದೆ ಓದುತ್ತಿದ್ದವಳು. ಅಂದು ಅವಳ ಮುಖದಲ್ಲಿದ್ದ ಆತಂಕ, ದುಗುಡ ನೋಡಿ ಏನೋ ನಡೆದಿರಬೇಕು, ಆದ್ದರಿಂದಲೇ ನನ್ನ ಮನೆಯವರೆಗೂ ಆಕೆ ಬಂದಿದ್ದಾಳೆಂದು ತಿಳಿದು ಏನೆಂದು ವಿಚಾರಿಸಿದೆ. "ನಾನು ಕೆಲಸ ಮಾಡುವ ಮನೆಯಲ್ಲಿ ಒಬ್ಬ ತಾತಪ್ಪ ಇದ್ದಾರೆ. ನನಗೆ ಅಲ್ಲಿ ಕೆಲಸ ಮಾಡಲು ಇಷ್ಟವಾಗುತ್ತಿಲ್ಲ. ತುಂಬ ಹಿಂಸೆ ಆಗ್ತಿದೆ" ಎಂದಳು. "ಯಾಕಮ್ಮಾ, ಏನಾಯ್ತು?" ಎಂದು ಕೇಳಿದೆ. ಆಗವಳು, "ಅವರು ನನಗೆ ಏನೇನೋ ಮಾತಾಡ್ತಾರೆ. ಅಸಹ್ಯ ಆಗತ್ತೆ. ನನ್ನ ತಂದೆ ಸಮಾನ ಅಂತ ಸುಮ್ಮನಾಗಬಹುದು. ಆದರೆ ಮುಟ್ಟಬಾರದ ಜಾಗದಲ್ಲೆಲ್ಲಾ ಮುಟ್ಟಲು ಒತ್ತಾಯ ಮಾಡ್ತಾರೆ. ನೋವು ಅಂತ ಹೇಳ್ತಾರೆ. ಅವರ ಮನೆಯಲ್ಲಿ ಬೇರೆ ಯಾರೂ ಇಲ್ಲ. ನನಗೆ ಅರ್ಧರ್ಧ ಗಂಟೆ ಹೀಗೆ ಎದುರಿಗೆ ಕೂರಲು ಹೇಳ್ತಾರೆ. ನನಗೆ ಸ್ವಲ್ಪವೂ ಇಷ್ಟ ಆಗಲ್ಲ, ಭಯ ಆಗತ್ತೆ" ಎನ್ನುತ್ತ ಗೊಳೋ ಎಂದು ಅತ್ತಳು. "ಅವರ ಮಗಳು ಅಮೆರಿಕದಿಂದ ಫೋನ್ ಮಾಡಿ ನನಗೆ ನೀನೇ ಕೆಲಸ ಮಾಡು ಅಂತ ಹೇಳ್ತಾರೆ, ಆದರೆ ನನಗಿಷ್ಟ ಇಲ್ಲ. ನನಗೆ ಬೇರೆ ಮನೆ ಕೆಲಸ ಕೊಡಿಸಿ" ಎಂದು ಗೋಗರೆದಳು. ಆಕೆ ಬಹಳ ಪ್ರಾಮಾಣಿಕ ವ್ಯಕ್ತಿ. ಹಾಗಾಗಿ ಆಕೆ ವ್ಯಕ್ತಪಡಿಸಿದ ಇನ್ನೊಂದು ಆತಂಕವೆಂದರೆ ಅವರ ಮನೆ ಬಿಟ್ಟುಬಿಟ್ಟರೆ, ಕಳ್ಳತನದ ಆರೋಪ ಹೊರಿಸಿಬಿಟ್ಟಾರು ಎಂಬುದು. ಆದರೂ ಆಕೆ ಆ ಮನೆಯನ್ನು ಬಿಡಲೇಬೇಕೆಂದು ತೀರ್ಮಾನಿಸಿದಂತಿತ್ತು.

ಇಲ್ಲಿ, ಸಾಮಾನ್ಯವಾಗಿ ಯಾರೇ ನೋಡಿದರೂ ಆಕೆಯ ಪರಿಸ್ಥಿತಿಯನ್ನು ಅರಿತುಕೊಳ್ಳುವುದು ಕಷ್ಟವೇ. ಮನೆಗೆಲಸಗಾರರಲ್ಲಿ ವಿಶೇಷವಾಗಿ, ಅವರ ಅಸಹಾಯಕತೆಯನ್ನು ದುರ್ಬಳಕೆ ಮಾಡಿಕೊಂಡು ಬಹಳಷ್ಟು ಮನೆಗಳ ಮಾಲೀಕರು ಲೈಂಗಿಕ ಕಿರುಕುಳ ನೀಡುತ್ತಿರುವುದು ನಿತ್ಯನಿರಂತರವಾಗಿ ನಡೆಯುತ್ತಲೇ ಇದೆ. ಆದರೆ ಹೊಟ್ಟೆಪಾಡಿನಿಂದಾಗಿ ಆ ಹೆಣ್ಣುಮಕ್ಕಳಿಗೆ ಎಲ್ಲವೂ ಸಹನೀಯವಾಗಿಬಿಟ್ಟಿದೆ. ಇಂಥವರಿಗೆ ಸೂಕ್ಷ್ಮ ಸಂವೇದನೆಯುಳ್ಳ ಸ್ಥಳೀಯ ಸಮಿತಿಗಳು ಸಹಾಯಕವಾಗುತ್ತವೆ.

ಕೆಎಸ್‌ಆರ್‌ಟಿಸಿಯ ನಾಲ್ಕು ನಿಗಮಗಳಲ್ಲೂ ಮಹಿಳೆಯರ ವಿರುದ್ಧದ ದೌರ್ಜನ್ಯಗಳು ಮುಗಿಲು ಮುಟ್ಟಿವೆ. ನಿರ್ವಾಹಕಿಯರಾಗಿ, ಮೆಕಾನಿಕ್‌ಗಳಾಗಿ, ಗುಮಾಸ್ತೆಯರಾಗಿ, ಅಧಿಕಾರಿಗಳಾಗಿಯೂ ಹಲವು ಸ್ತರಗಳಲ್ಲಿ ದುಡಿಯುತ್ತಿರುವ ಮಹಿಳೆಯರು ಅನೇಕ ಸಮಸ್ಯೆಗಳಿಗೆ ತುತ್ತಾಗಿದ್ದಾರೆ. ಅಧಿಕಾರಿವರ್ಗದಿಂದ ನಡೆಯುವ ಲೈಂಗಿಕ ದೌರ್ಜನ್ಯಗಳಂತೂ ಹೇಳತೀರದು. ೮–೧೨ ಗಂಟೆಗಳ ಕಾಲ ದುಡಿದು ಡಿಪೋಗಳಿಗೆ ಹಿಂದಿರುಗುವ ಮಹಿಳಾ ನೌಕರರಿಗೆ ಸಮರ್ಪಕವಾದ ವಿಶ್ರಾಂತಿ ಗೃಹಗಳಿಲ್ಲದೆ, ಕೆಲವು ಬಸ್ ನಿಲ್ದಾಣಗಳಲ್ಲಿ ಶೌಚಾಲಯಗಳಿಗೂ ಸಮಸ್ಯೆ ಇದೆ ಎಂದು ಮಹಿಳಾ ನೌಕರರು ದೂರುತ್ತಾರೆ. ಹಾಲುಣಿಸುವ ತಾಯಂದಿರಿಗೆ ಅಗತ್ಯವಾದಾಗ ರಜೆ ನೀಡದಿರುವುದು, ಮಗುವಿಗೆ ಮೊಲೆಯುಣಿಸಲು ತೊಂದರೆ ಯಾಗಲೆಂದೇ ದೂರ ದೂರದ ಊರುಗಳಿಗೆ ತೆರಳುವಂತೆ ಮಾಡುವುದು, ಹೆರಿಗೆ ರಜೆ ನೀಡದಿರುವುದು, ಕೆಟ್ಟ ಮತ್ತು ಅಸಭ್ಯ ಭಾಷೆಯಲ್ಲಿ ಅಥವಾ ಏಕವಚನದಲ್ಲಿ ಮಾತನಾಡಿಸುವುದು, ಅಧಿಕಾರಿಗಳನ್ನು ಏನಾದರೂ ವಿಚಾರಿಸಲು ಹೋದಾಗ ಕೆಲವರು ವಿನಾಕಾರಣ ಕಾಯುವಂತೆ ಮಾಡುವುದು ಮತ್ತು ತಮ್ಮ ಜೊತೆ ಲೈಂಗಿಕ ಕ್ರಿಯೆಗೆ ಕರೆಯುವುದು, ಹೀಗೆ ಹತ್ತು ಹಲವು ರೀತಿಯ ಲೈಂಗಿಕ ದೌರ್ಜನ್ಯಗಳು ನಡೆಯುತ್ತಲೇ ಇವೆ. ಬೆರಳೆಣಿಕೆಯ ಅಪರಾಧಿಗಳ ವಿರುದ್ಧ ಕ್ರಮ ಕೈಗೊಂಡರೂ ಇನ್ನೂ ಬಹುತೇಕ ಮಂದಿ ಕಾಮುಕರು ರಾಜಾರೋಷವಾಗಿ "ಎಲ್ಲಾ" ಪ್ರಭಾವಗಳಿಂದ ಮೆರೆಯುತ್ತಲೇ ಇದ್ದಾರೆ. ಇದಕ್ಕೆ ಕಾರಣ, ಸಂಸ್ಥೆಯಲ್ಲಿ ಅಸ್ತಿತ್ವದಲ್ಲಿರುವ ಹಲ್ಲು ಕಿತ್ತ ಹಾವಿನಂತಿರುವ ಆಂತರಿಕ ದೂರು ಸಮಿತಿಗಳು. ಸಾರ್ವಜನಿಕರೊಡನೆ ಕೆಲಸ ಮಾಡುವ ನಿರ್ವಾಹಕಿಯರು ತಮ್ಮ ಕರ್ತವ್ಯದ ವೇಳೆ ಲೈಂಗಿಕ ಕಿರುಕುಳಕ್ಕೆ ತುತ್ತಾಗುವುದೂ ಇದೆ.

**ಕಾಯಿದೆಯ ಸಮರ್ಪಕ ಅನುಷ್ಠಾನ**

ಕಾಯಿದೆಯ ಅನುಷ್ಠಾನ ಸಮರ್ಪಕವಾಗಿ ನಡೆಯಬೇಕಾದರೆ ಆಂತರಿಕ ದೂರು ಸಮಿತಿ ಮತ್ತು ಸ್ಥಳೀಯ ದೂರು ಸಮಿತಿಗಳಲ್ಲಿ ಲಿಂಗ ಸಂವೇದನೆ ಮತ್ತು ಲಿಂಗ ಸೂಕ್ಷ್ಮತೆ ಇರುವ ಸದಸ್ಯರು ನೇಮಕಗೊಳ್ಳಬೇಕು. ಆ ಕೆಲಸವಾಗಬೇಕಾದರೆ ಸಮಾಜದಲ್ಲಿ ಲಿಂಗ ಸಮಾನತೆ ತರಬೇಕೆಂಬ ಸಾಮಾನ್ಯ ಕನಿಷ್ಠ ಆಸಕ್ತಿ ಮೂಡಬೇಕು. ಸಮಿತಿ ಸದಸ್ಯರಿಗೆ ಮೊದಲು ಸಂವೇದನಾಶೀಲತೆಯ ಕಾರ್ಯಾಗಾರಗಳು ನಡೆಯಬೇಕು. ದೌರ್ಜನ್ಯಕ್ಕೊಳಗಾದ ಮಹಿಳೆಯೊಬ್ಬಳು ಸದಸ್ಯೆಯಾದ ವೈದ್ಯಳೊಬ್ಬಳ ಬಳಿ ಹೋಗಿ "ನಾನು ಬಹಳ ನೊಂದಿದ್ದೀನಿ. ನಾನು ಈ ವಾತಾವರಣದಲ್ಲಿ ಇರಲು ಭಯವಾಗುತ್ತಿದೆ. ಮನಸ್ಸು ಆತಂಕಕ್ಕೊಳಗಾಗಿದೆ. ಕೆಲ ದಿನಗಳ ರಜೆ ನೀಡಿ. ಸುಧಾರಿಸಿಕೊಂಡು ಹಿಂದಿರುಗುತ್ತೇನೆ" ಎಂದರೆ, "ನೀನು ನೊಂದಿರುವ ಬಗ್ಗೆ ಪ್ರಮಾಣ ಪತ್ರ ತೆಗೆದುಕೊಂಡು ಬಾ, ನನಗೆ ಈ ಕಾಯಿದೆಯ ಬಗ್ಗೆ ಏನೂ ಗೊತ್ತಿಲ್ಲ" ಎನ್ನುವುದೇ! ಇದು ಸಮಿತಿ ಸದಸ್ಯೆಯರ ಮಟ್ಟ.

ಆಂತರಿಕ ದೂರು ಸಮಿತಿಯ ಓರ್ವ ಬಾಹ್ಯ ಸದಸ್ಯೆ ಕಾರ್ಯಾಗಾರ ನಡೆಸಿ, "ಮಹಿಳೆಯರನ್ನು ಹೆಸರು ಹಿಡಿದು ಕರೆಯಬಾರದು, ಅದು ಲೈಂಗಿಕ ದೌರ್ಜನ್ಯ ವೆಂದು ಪರಿಗಣಿಸಲ್ಪಡುತ್ತದೆ" ಎಂದು ಹೇಳಿಕೆ ಕೊಟ್ಟಿರುತ್ತಾರೆ. ಅದೇ ಮಹಿಳೆ ಇನ್ನೊಂದು ಸಂಸ್ಥೆಯಲ್ಲಿ ಮಹಿಳಾ ನೌಕರರಿಗೆ ವಸ್ತ್ರ ಸಂಹಿತೆ ಬೋಧಿಸುತ್ತ, ಹೆಣ್ಣುಮಕ್ಕಳು ಸರಿಯಾದ ಉಡುಪು ಧರಿಸಬೇಕೆಂದು, ಆಗ ಲೈಂಗಿಕ ದೌರ್ಜನ್ಯ ನಡೆಯುವುದಿಲ್ಲವೆಂದು ಪಾಠ ಹೇಳಿರುತ್ತಾರೆ! ಹೆಸರು ಸಹ ಮಾತನಾಡಬಾರದು ಎಂದು ಹೇಳುವ ಬದಲು ಇಟ್ಟ ಹೆಸರನ್ನೇ ಉಚ್ಚರಿಸಬಾರದೆಂದು ತಪ್ಪರ್ಥ ಮಾಡಿಕೊಂಡು ಅದನ್ನೇ ಹೇಳಿಕೊಡುವ ಮತ್ತು ಹೆಣ್ಣಿನ ಸ್ವಾತಂತ್ರ್ಯ, ಸಮಾನತೆ, ಸಾಂವಿಧಾನಿಕ ಹಕ್ಕುಗಳ ಪರಿಕಲ್ಪನೆಯೇ ಇಲ್ಲದ ಇಂತಹವರು ವಿಚಾರಣಾ ಸಮಿತಿಯಲ್ಲಿ ಪ್ರಧಾನ ಪಾತ್ರ ವಹಿಸುತ್ತಾರೆಂದರೆ ಶಾಸನದ ಉದ್ದೇಶ ಸಾರ್ಥಕ ವಾಗುವುದಾದರೂ ಹೇಗೆ?



ಆಂತರಿಕ ದೂರು ಸಮಿತಿಗಳಿಗೆ ವಿಚಾರಣೆ ನಡೆಸಲು ಶಾಸನವು ಸಿಪಿಸಿಯಂತೆ ಅಧಿಕಾರ ನೀಡಿದ್ದರೂ ಸರ್ಕಾರದ ಇಲಾಖೆಗಳಾಗಲೀ, ಅದರಲ್ಲೂ ವಿಶೇಷವಾಗಿ ಪೊಲೀಸ್ ಇಲಾಖೆಯೇ ಸಹಕರಿಸುವುದಿಲ್ಲ ಎಂಬುದು ನಮ್ಮ ಅನುಭವ. ಸರ್ಕಾರಿ ಇಲಾಖೆಗಳಲ್ಲೇ ಮಹಿಳಾ ಸಂವೇದನೆ ಕಾರ್ಯಾಗಾರಗಳು ಅತ್ಯಗತ್ಯವಾಗಿವೆ. ಇನ್ನೂ ದುರಂತವೆಂದರೆ ಈ ಕಾಯಿದೆಯನ್ನು ಅನುಷ್ಠಾನ ಮಾಡಬೇಕಾದ ಬಹಳಷ್ಟು ಜಿಲ್ಲಾಮಟ್ಟದ ಅಧಿಕಾರಿಗಳಿಗೆ ಅದರ ಬಗ್ಗೆ ತಿಳುವಳಿಕೆ ಇಲ್ಲದಿರುವುದು.

**ಕೆಲಸದ ಅಭದ್ರತೆ – ಲೈಂಗಿಕ ದೌರ್ಜನ್ಯದ ವಿರುದ್ಧ ಮೌನ**

ಇನ್ನು ಪೌರಕಾರ್ಮಿಕರು, ಗುತ್ತಿಗೆ ಕಾರ್ಮಿಕರು, ವಿ. ವಿ. ವಿದ್ಯಾರ್ಥಿನಿಯರು, ಕ್ಯಾಷ್ಯುಯಲ್ ಕಾರ್ಮಿಕರು, ಟ್ರೇನಿಗಳು, ಕೃಷಿಕೂಲಿ ಕಾರ್ಮಿಕರು, ಸಿನಿಮಾರಂಗದ ದಿನಗೂಲಿ ನೌಕರರು, ಕೆಲಸದ ಭದ್ರತೆ ಇಲ್ಲದವರು ಲೈಂಗಿಕ ದೌರ್ಜನ್ಯಕ್ಕೆ ಅತಿ ಹೆಚ್ಚು ತುತ್ತಾಗುವುದು ಸಾಮಾನ್ಯ ಸಂಗತಿ. ವಿ.ವಿ.ಗಳಲ್ಲಿ ಆಂತರಿಕ ಮೌಲ್ಯಮಾಪನ ಎಂದು ಹೇಳಿ ಯಾರೂ ಅನ್ಯಾಯದ ವಿರುದ್ಧ ಧ್ವನಿ ಎತ್ತದಂತೆ ಮಾಡಲಾಗಿದೆ. ಇನ್ನು, ಇರುವ ಸಣ್ಣಪುಟ್ಟ ಕೆಲಸ ಕಳೆದುಕೊಳ್ಳುವ ಭಯದಿಂದ ದೌರ್ಜನ್ಯಕ್ಕೊಳಗಾದ ಮಹಿಳೆಯರು ಮೌನಕ್ಕೆ ಶರಣಾಗು ತ್ತಿರುವುದು ವ್ಯವಸ್ಥೆಯ ಕ್ರೌರ್ಯ. ಒಂದು ಕೈಲಿ ಕೊಟ್ಟು ಮತ್ತೊಂದರಿಂದ ಕಸಿದುಕೊಳ್ಳುವುದು ಬಂಡವಾಳಶಾಹಿ ವ್ಯವಸ್ಥೆಯ ಲಕ್ಷಣ ಇದು. ಕಾಯಿದೆ ಇದ್ದಂತೆ ಇರಬೇಕು, ಪ್ರಯೋಜನವಾಗಬಾರದು ಎಂಬಂತಿದೆ. ೨೦೧೪ರಲ್ಲಿ ಒಟ್ಟು ೫೨೬ ಪ್ರಕರಣಗಳು ದಾಖಲಾಗಿದ್ದು, ಅವುಗಳಲ್ಲಿ ೫೭ ದೂರುಗಳು ಕಚೇರಿಯ ಒಳಗೆ ಸಂಬಂಧಿಸಿದ್ದು, ೪೬೯ ಪ್ರಕರಣಗಳು ಉದ್ಯೋಗ ಸ್ಥಳಕ್ಕೆ ಸಂಬಂಧಪಟ್ಟಿದ್ದೆಂದು ಮಹಿಳಾ ಮತ್ತು ಮಕ್ಕಳ ಖಾತೆ ಸಚಿವೆ ಶ್ರೀಮತಿ ಮೇನಕ ಗಾಂಧಿ ಅವರ ಹೇಳಿಕೆಯಿಂದ ತಿಳಿದುಬರುತ್ತದೆ.

**ಉದ್ಯೋಗಸ್ಥ ಮಹಿಳೆಗೆ ಬೇಕು ಸುರಕ್ಷತೆ**

ಆದ್ದರಿಂದ, ನಿಜವಾಗಿಯೂ ೨೦೧೩ರ ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ (ತಡೆ, ನಿಷೇಧ, ನಿವಾರಣೆ) ಕಾಯಿದೆ ಸಮರ್ಪಕವಾಗಿ ಜಾರಿಯಾಗಬೇಕಾದರೆ ಮಹಿಳೆಯರ ಉದ್ಯೋಗ ಭದ್ರತೆ ಖಾತರಿಯಾಗಬೇಕು, ವಿಚಾರಣೆಗಳು ನ್ಯಾಯಯುತವಾಗಿ ಲಿಂಗಸೂಕ್ಷ್ಮತೆಯಿಂದ ನಡೆದು ತಪ್ಪಿತಸ್ಥರಿಗೆ ಸೇವಾ ನಿಯಮಗಳ ಪ್ರಕಾರ ಶಿಕ್ಷೆಯಾಗಬೇಕು, ಸೇವಾ ನಿಯಮಗಳನ್ನು ತಕ್ಕಂತೆ ಬದಲಿಸಬೇಕು, ಸಮಾಜ ಸಂವೇದನಾಶೀಲತೆಯನ್ನು ರೂಢಿಸಿಕೊಳ್ಳುವತ್ತ ಹೆಜ್ಜೆ ಹಾಕಬೇಕು. ಸಾಂವಿಧಾನಿಕ ಹಕ್ಕುಗಳಾದ ಘನತೆಯಿಂದ ಬದುಕುವ ಹಕ್ಕು, ಸ್ವಾತಂತ್ರ್ಯದ ಹಕ್ಕು, ಅಭಿವ್ಯಕ್ತಿ ಸ್ವಾತಂತ್ರ್ಯ, ಉದ್ಯೋಗದ ಹಕ್ಕು, ಶೋಷಣೆಯ ವಿರುದ್ಧದ ಹಕ್ಕು... ಹೀಗೆ ಎಲ್ಲವೂ ಮಹಿಳೆಯರಿಗೂ ದೊರಕುವಂತಾದಾಗಲೇ ಸಮಾಜದ ಪ್ರಗತಿ ಸಾಧ್ಯ. ಕಾರ್ಲ್ ಮಾರ್ಕ್ಸ್ ಹೇಳಿದಂತೆ, ಹೆಣ್ಣಿನ ಸಾಮಾಜಿಕ ಸ್ಥಾನಮಾನ ಸಮಾಜದ ಪ್ರಗತಿಯನ್ನು ಸೂಚಿಸುತ್ತದೆ. ಮಹಿಳಾಪರ, ಸಮಾಜಮುಖಿ ಕಾಯಿದೆಗಳ ಪ್ರಾಮಾಣಿಕ ಅನುಷ್ಠಾನದಿಂದ ದೇಶದ ಏಳಿಗೆ ಸಾಧ್ಯ. ಉದ್ಯೋಗ ಸ್ಥಳಗಳಲ್ಲಿ ಮತ್ತು ಸಮಾಜದಲ್ಲಿ ಸುರಕ್ಷಿತವಾಗಿರುವ ಮಹಿಳೆ ಖಂಡಿತ ವಾಗಿಯೂ ದೇಶದ ಆರ್ಥಿಕ ಬೆಳವಣಿಗೆಗೆ ಮಹತ್ವದ ಕೊಡುಗೆ ನೀಡಬಲ್ಲಳು. ಉದ್ಯೋಗ ಭದ್ರತೆಯುಳ್ಳ ಸುರಕ್ಷಿತ ಮಹಿಳೆ ಸಮಾಜದ ಪ್ರಗತಿ ಸೂಚಕ.

**ಜ್ಯೋತಿ ಎ.**

ಎಸ್–೩, # ೩೭, ೧೬ನೇ ಮುಖ್ಯರಸ್ತೆ , ಎಂ. ಸಿ. ಬಡಾವಣೆ, ವಿಜಯನಗರ, ಬೆಂ. – ೫೬೦೦೪೦



# ಮ್ಯೆನ್ಮಾರ್–ರೋಹಿಂಗ್ಯಾ ಜನಾಂಗದ ಸಮಸ್ಯೆ

**ವ**ರ್ಷದ ಪ್ರಾರಂಭದಲ್ಲೇ ಭಯೋತ್ಪಾದಕರ ದಾಳಿ. ಅಮಾಯಕ ಜನರ ಹತ್ಯೆ. ಇರಾಕಿನ ರಾಜಧಾನಿ ಬಾಗ್ದಾದ್‌ನಲ್ಲಿ ಹೊಸ ವರ್ಷದ ಮುನ್ನಾದಿನ ನಡೆದ ಆತ್ಮಾಹುತಿ ದಾಳಿಯಲ್ಲಿ ಇಪ್ಪತ್ತೈದು ಮಂದಿ ಹತರಾದರು. ಹೊಸ ವರ್ಷಾಚರಣೆಯಲ್ಲಿ ತೊಡಗಿದ್ದ ಟರ್ಕಿಯ ರಾಜಧಾನಿ ಇಸ್ತಾನ್ ಬುಲ್‌ನ ನೈಟ್ ಕ್ಲಬ್ ಒಂದರ ಮೇಲೆ ನಡೆದ ಗುಂಡಿನ ಸುರಿಮಳೆಯಲ್ಲಿ ಮೂವತ್ತೊಂಬತ್ತು ಜನ ಅಸುನೀಗಿದರು. ಬರ್ಲಿನ್‌ನಲ್ಲಿ ಬಂದೂಕುಧಾರಿಯ ಗುಂಡಿಗೆ ಹನ್ನೆರಡು ಮಂದಿ ಪ್ರಾಣ ತೆತ್ತರು. ಇಸ್ಲಾಮಿಕ್ ರಾಜ್ಯ ಸ್ಥಾಪನೆಯ ಉಗ್ರರು ಪ್ರತೀಕಾರ ದಾಳಿಗೆ ಮುಂದಾಗಿರುವುದರಿಂದ ಈ ವರ್ಷ ಕೂಡ ದುರಂತ ತಪ್ಪದು. ಮ್ಯೆನ್ಮಾರ್, ಉತ್ತರ ಮತ್ತು ಪೂರ್ವ ಆಫ್ರಿಕಾಗಳಲ್ಲಿ ವಿವಿಧ ಜನಾಂಗಗಳ ಹತ್ಯೆ ಮುಂದುವರಿಯುತ್ತಿದೆ. ಇಸ್ಲಾಮಿಕ್ ಉಗ್ರರ ಜೊತೆಗೆ ಬೋಕೋ ಹರಮ್, ಅಲ್‌ಷಬಾಬ್, ಅಲ್‌ಖೈದಾ, ಇಸ್ಲಾಮಿಕ್ ಮುಘೆರ್ಬ್ ಮೊದಲಾದ ಸಂಘಟನೆಗಳು ಭಯೋತ್ಪಾದಕ ಕೃತ್ಯಗಳಲ್ಲಿ ತೊಡಗಿಕೊಂಡಿವೆ.

ಪಶ್ಚಿಮ ಮ್ಯೆನ್ಮಾರ್‌ನ ರೇಖಿನ್ ಪ್ರಾಂತದಲ್ಲಿ ರೋಹಿಂಗ್ಯಾ ಸಮುದಾಯದ ಹತ್ಯೆ ನಿರಂತರವಾಗಿ ಸಾಗುತ್ತಿದೆ ವಿಶ್ವಸಂಸ್ಥೆ ಹಾಗೂ ಅಂತರರಾಷ್ಟ್ರೀಯ ಪ್ರತಿಭಟನೆ ಇದ್ದಾಗ್ಯೂ. ಅಲ್ಲಿನ ಸರಕಾರ ಪೀಡಿತ ಜನಾಂಗಕ್ಕೆ ನೆರವು ನೀಡುವುದಕ್ಕೂ ಅವಕಾಶ ನೀಡುತ್ತಿಲ್ಲ. ರೋಹಿಂಗ್ಯಾಗಳು ಎಂದು ಕರೆಯುವ ಈ ಮುಸಲ್ಮಾನರು ಇನ್ನೂರು ವರ್ಷಗಳಿಂದ ನೆಲೆಸಿದ್ದರೂ ಪೌರತ್ವ ವಂಚಿತರಾಗಿದ್ದಾರೆ. ಯಾವುದೇ ಮಾನವಹಕ್ಕುಗಳೂ ಅವರ ಪಾಲಿಗೆ ಇಲ್ಲವಾಗಿದೆ. ಇವರ ಸಂಖ್ಯೆ ಸುಮಾರು ಹತ್ತು ಲಕ್ಷ. ಬ್ರಿಟಿಷ್ ಆಡಳಿತದ ಕಾಲದಲ್ಲಿ ಹತ್ತೊಂಬತ್ತನೇ ಶತಮಾನದಲ್ಲಿ ಬಂಗಾಳ ಪ್ರಾಂತದಿಂದ ಬಂದು ನೆಲೆಸಿದ ಮುಸಲ್ಮಾನರು ಇವರು. ಎರಡನೆ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷರೊಂದಿಗೆ ಕೈಜೋಡಿಸಿ ಜಪಾನೀ ಸೇನೆಯನ್ನು ಎದುರಿಸಿ ಕಾದಾಡಿದ್ದರು ರೋಹಿಂಗ್ಯಾಗಳು. ಆಗ ರೇಬಿನ್ ಪ್ರಾಂತದ ಮ್ಯೆನ್ಮಾರ್ ಜನಾಂಗ ಜಪಾನೀಯರಿಗೆ ಬೆಂಬಲ ನೀಡುತ್ತಿತ್ತು.

ಸ್ವಾತಂತ್ರ್ಯಾನಂತರ ಮೊದಲ ವರ್ಷಗಳಲ್ಲಿ ಯಾವ ಸಮಸ್ಯೆಯೂ ಇಲ್ಲದೆ ಬಾಳು ಸಾಗಿಸುತ್ತಿದ್ದ ಈ ಜನಾಂಗ ಆತಂಕಕ್ಕೀಡಾದದ್ದು ನಾಗರಿಕರ ಸರಕಾರ ಪಲ್ಲಟಗೊಂಡು ೧೯೮೨ರಲ್ಲಿ ಮಿಲಿಟರಿ ಸರ್ವಾಧಿಕಾರ ಪ್ರಾರಂಭವಾದ ಮೇಲೆ. ಆಗಲೇ ಬರ್ಮಾ ಹೆಸರು ಬದಲಾಗಿ ಮ್ಯೆನ್ಮಾರ್ ಆದದ್ದು ಕೂಡ. ಅಧಿಕಾರಕ್ಕೆ ಬಂದನಂತರ ಮಿಲಿಟರಿ ಸರ್ವಾಧಿಕಾರಿಗಳು ಬರ್ಮಾದಲ್ಲಿ ವಾಸವಾಗಿದ್ದ ೧೩೫ ಜನಾಂಗಗಳ ಪಟ್ಟಿಯಿಂದ ರೋಹಿಂಗ್ಯಾಗಳನ್ನು ಮಾತ್ರ ಹೊರಗಿಟ್ಟು ಕಾನೂನೊಂದನ್ನು ಮಾಡಿ ಅವರಿಗೆ ಯಾವ ಪೌರ ಸೌಲಭ್ಯ ಲಭಿಸದಂತೆ ಮಾಡಿತು. ಆಗಿನಿಂದ ಈ ಜನಾಂಗದ ಮೇಲೆ ಒಂದೇ ಸಮನಾಗಿ ದಾಳಿ ನಡೆಯುತ್ತಿದೆ.



ರೋಹಿಂಗಿಯ ಜನಾಂಗದ ಮೇಲೆ ದೊಡ್ಡ ಪ್ರಮಾಣದಲ್ಲಿ ಹಿಂಸಾಚಾರ ೨೦೧೨ರಲ್ಲಿ ಪ್ರಾರಂಭವಾಯಿತು. ಸಿಟ್ವೆ ಎಂಬ ನಗರದಲ್ಲಿ ಪ್ರಾರಂಭವಾದ ಜನಾಂಗೀಯ ಘರ್ಷಣೆಗಳಲ್ಲಿ ಒಂದು ಲಕ್ಷ ಮಂದಿ ರೋಹಿಂಗ್ಯಾಗಳು ನಿರಾಶ್ರಿತರಾದರು. ಮನೆಮಠ ಆಸ್ತಿಪಾಸ್ತಿಗಳನ್ನು ಕಳೆದುಕೊಂಡ ಅವರು ಸರಕಾರ ಸ್ಥಾಪಿಸಿದ್ದ ಶಿಬಿರಗಳಲ್ಲಿ ಆಶ್ರಯ ಪಡೆದರು. ಸಹಸ್ರಾರು ಮಂದಿ ನೆರೆಯ ದೇಶಗಳಿಗೆ ವಲಸೆ ಹೋದರು. ೨೦೧೫ರಲ್ಲಿ ಅಂಗ್‌ಸಾನ್ ಸೂಕಿಯ ನೇತೃತ್ವದಲ್ಲಿರುವ ನ್ಯಾಷನಲ್ ಲೀಗ್ ಆಫ್ ಡೆಮಾಕ್ರಸಿ ಪಕ್ಷ ಅಧಿಕಾರದಲ್ಲಿದ್ದರೂ ಮಿಲಿಟರಿ ಪ್ರಾಬಲ್ಯ ಕಡಿಮೆ ಏನಾಗಿಲ್ಲ. ಪ್ರಮುಖ ಸಚಿವಾಲಯಗಳು ಇನ್ನೂ ಮಿಲಿಟರಿಯ ವಶದಲ್ಲಿಯೇ ಇದೆ. ಸೇನೆಯನ್ನು ಮತ್ತೆ ಎದುರುಹಾಕಿಕೊಳ್ಳಲು ಅಧಿಕಾರ ಇದ್ದೂ ಏನೂ ಮಾಡಲಾಗದ ಸ್ಥಿತಿಯಲ್ಲಿದ್ದಾರೆ ಅಂಗ್‌ಸಾನ್ ಸೂಕಿ.

ಕಳೆದ ವರ್ಷ ಅಕ್ಟೋಬರ್ ತಿಂಗಳಲ್ಲಿ ರೋಹಿಂಗ್ಯಾಗಳ ಮೇಲೆ ದಾಳಿ ಮತ್ತೆ ಪ್ರಾರಂಭವಾಯಿತು. ಪೊಲೀಸರ ದೌರ್ಜನ್ಯವನ್ನೂ ತಾಳಲಾರದೆ ಹಿಂಸಾಚಾರಕ್ಕಿಳಿದ ರೋಹಿಂಗ್ಯಾಗಳು ಒಂಬತ್ತು ಮಂದಿ ಪೊಲೀಸರನ್ನು ಹತ್ಯೆಗೈದದ್ದೇ ಸರಕಾರ ಭೀಕರ ದಾಳಿಗೆ ಕಾರಣವಾಯಿತು. ಕಳೆದ ಎರಡು ತಿಂಗಳ ಅವಧಿಯಲ್ಲಿ ೧೦,೦೦೦ಕ್ಕೂ ಹೆಚ್ಚು ಮಂದಿ ರೋಹಿಂಗ್ಯಾಗಳು ಬಂಗ್ಲಾದೇಶಕ್ಕೆ ಓಡಿಹೋಗಿದ್ದಾರೆ. ೧೯೭೮ರಲ್ಲಿ ಸೇನೆ ದಾಳಿ ನಡೆಸಿದಾಗ ೨೦೦,೦೦೦ ಲಕ್ಷ ರೋಹಿಂಗ್ಯಾಗಳು ಬಂಗ್ಲಾದೇಶಕ್ಕೆ ವಲಸೆ ಹೋಗಿದ್ದರು. ಹೆಚ್ಚು ಕಡಿಮೆ ೫೬,೦೦೦ ರೋಹಿಂಗ್ಯಾಗಳು ಮಲೇಷಿಯಾಕ್ಕೆ ಪರಾರಿಯಾಗಿದ್ದಾರೆ. ಮುಂದಿನ ದಿನಗಳಲ್ಲಿ ಪರಿಸ್ಥಿತಿ ಹೀಗೇ ಮುಂದುವರಿದರೆ ನಿರಾಶ್ರಿತರ ಸಮಸ್ಯೆ ಈ ಭೂಭಾಗದಲ್ಲಿ ಉಲ್ಬಣಿಸುವುದರಲ್ಲಿ ಸಂಶಯವಿಲ್ಲ.

ಅಂಗ್‌ಸಾನ್ ಸೂಕಿ ಸಲಹೆಯಂತೆ ಪರಿಸ್ಥಿತಿ ಅಧ್ಯಯನ ಮಾಡಲು ವಿಶ್ವಸಂಸ್ಥೆ ಹಾಗೂ ಮ್ಯೆನ್ಮಾರ್ ಸರಕಾರದ ಪ್ರತಿಗಳ ಆಯೋಗ ರಚನೆಯಾಗಿದ್ದರೂ ಏನೂ ಪ್ರಯೋಜನವಾಗಿಲ್ಲ. ರೋಹಿಂಗ್ಯಾಗಳು ವಾಸಿಸುತ್ತಿರುವ ಪ್ರಾಂತ ಒಂದು ರೀತಿಯಲ್ಲಿ ಮಿಲಿಟರಿಯ ಆಕ್ರಮಣದಲ್ಲಿದೆ ಎಂದೇ ಹೇಳಬಹುದು. ಯಾವುದೇ ಬಗೆಯ ಅಂತರರಾಷ್ಟ್ರೀಯ ಸಮುದಾಯದ ನೆರವೂ ಅವರಿಗೆ ದೊರಕದ ಹಾಗೆ ಸೇನೆ ಕಾವಲಿದೆ. ಈ ಆರೋಪವನ್ನು ಅಂಗ್‌ಸಾನ್ ಸೂಕಿ ಸರಕಾರ ನಿರಾಕರಿಸಿದೆ. ಸುಮಾರು ೩೦,೦೦೦ ರೋಹಿಂಗ್ಯಾ ಸ್ತ್ರೀಯರು ಹಾಗೂ ಮಕ್ಕಳು ದಾರುಣ ಸ್ಥಿತಿಯಲ್ಲಿದ್ದಾರೆ. ಅವರಿಗೆ ಆಹಾರ ಮತ್ತು ಔಷಧೀಯ ಅವಶ್ಯಕತೆ ಇದೆ. ಇಷ್ಟೆಲ್ಲಾ ಆದರೂ ಮ್ಯೆನ್ಮಾರ್ ಸರಕಾರ ಮತ್ತು ಮಿಲಿಟರಿ ಅಧಿಕಾರಿಗಳು ಪಟ್ಟು ಸಡಿಲುಸುತ್ತಿಲ್ಲ. ರೋಹಿಂಗ್ಯಾಗಳ ಮೇಲೆ ಅತ್ಯಾಚಾರ ಮತ್ತು ದಬ್ಬಾಳಿಕೆ ಮುಂದುವರಿಯುತ್ತಿದೆ. ಸರಕಾರ ಮುಸ್ಲಿಮ್ ವಿರೋಧಿ ಭಾವವನ್ನು ಪ್ರಚೋದಿಸುತ್ತಿದೆ. ರೋಹಿಂಗ್ಯಾಗಳನ್ನು ಸಂಪೂರ್ಣವಾಗಿ ಹೊರಹಾಕುವುದೇ ಮ್ಯೆನ್ಮಾರ್ ಮಿಲಿಟರಿಯ ಗುರಿಯಾಗಿದೆ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ನಟ ಚೇತನ್ ಅವರು ಕಳೆದ ಕೆಲವು ವರ್ಷಗಳಲ್ಲಿ ಸದಭಿರುಚಿಯ ಚಿತ್ರಗಳಲ್ಲಿ ನಟಿಸುತ್ತಾ ತಮ್ಮ ಮನಮುಟ್ಟುವ ಅಭಿನಯದ ಕಾರಣಕ್ಕೆ ಮನೆಮಾತಾದವರು. ಜೊತೆಗೆ, ಅವರ ಸಾಮಾಜಿಕ ಕಳಕಳಿಯ ಬಗ್ಗೆಯೂ ಆಗಾಗ ಪತ್ರಿಕೆಗಳಲ್ಲಿ ಸುದ್ದಿ ಇದ್ದೇ ಇರುತ್ತಿತ್ತು. ಆದರೆ, ಇತ್ತೀಚೆಗೆ ನಡೆದ ಕೊಡಗಿನ ದಿಡ್ಡಳ್ಳಿಯ ಆದಿವಾಸಿಗಳ ಹೋರಾಟದ ಜೊತೆಗೆ ತಮ್ಮನ್ನು ತಾವು ಗುರುತಿಸಿಕೊಂಡ ಚೇತನ್, ತಮ್ಮ ಕಾಳಜಿ ಕೇವಲ ಮೇಲ್ಪದರದ್ದಲ್ಲ ಎಂಬುದನ್ನು ತೋರಿಸಿದರು. ದಿಡ್ಡಳ್ಳಿಯ ಆದಿವಾಸಿಗಳ ನ್ಯಾಯಬದ್ಧ ಹಕ್ಕಿಗಾಗಿ ದುಡಿಯುತ್ತಿದ್ದ ಸಂಘಟನೆಗಳ ಹೆಗಲಿಗೆ ಹೆಗಲಾಗಿ ನಿಂತು ದುಡಿದರು.

ಈ ಹಿನ್ನೆಲೆಯಲ್ಲಿ ಹೊಸತು ಪತ್ರಿಕೆಯ ಸಂಪಾದಕರ ಒತ್ತಾಸೆಯಿಂದ ನಮ್ಮ ತಂಡ ಚೇತನ ಅವರ ಸಂದರ್ಶನ ನಡೆಸಿತು. ಸಂದರ್ಶನ ಆರಂಭವಾಗಿ ಸ್ವಲ್ಪ ಹೊತ್ತು ಕಳೆದ ನಂತರ, ಚೇತನ್ ಅವರ ಅರಿವಿನ ಖಜಾನೆಯನ್ನು ಕನ್ನಡದ ಪ್ರಬುದ್ಧ ಓದುಗರಿಗೆ ಪರಿಚಯಿಸಲು ಸಂಪಾದಕರು ನೀಡಿದ ಪದಮಿತಿ ಮತ್ತು ನಾವು ಇಟ್ಟುಕೊಂಡಿದ್ದ ಸಮಯ ಮಿತಿ ಸಾಲದು ಎಂಬುದು ನಮ್ಮೆಲ್ಲರ ಅರಿವಿಗೆ ಬಂತು. ಆದರೂ, ಸಂಚಿಕೆಯ ಮುದ್ರಣದ ಗಡುವಿನೊಳಗೆ ಸಾಧ್ಯವಾದಷ್ಟು ಸಂಗ್ರಹರೂಪದಲ್ಲಿ ಈ ಸಂವಾದದ ಮುಖ್ಯ ಅಂಶಗಳನ್ನು ಮುಂದಿಡುತ್ತಿದ್ದೇವೆ.

**ಹೊಸತು :** ಅಮೇರಿಕಾದಲ್ಲಿ ಹುಟ್ಟಿ, ಬೆಳೆದು, ಶಿಕ್ಷಣ ಪೂರೈಸಿದವರು ನೀವು ಎಂದು ಕೇಳಿದ್ದೇವೆ. ಅಲ್ಲಿಂದ ಹಿಂತಿರುಗಿ ಬರಲು ಕಾರಣವೇನು ?

**ಚೇತನ್ :** ನಮ್ಮ ತಂದೆ ಮತ್ತು ತಾಯಿ ಅಮೇರಿಕಾದಲ್ಲಿ ನೆಲೆಸಿದ್ದರೂ, ಕುಟುಂಬಕ್ಕೆ ಇಲ್ಲಿ ಬಲವಾದ ಬೇರುಗಳಿವೆ. ನಮ್ಮ ಮುತ್ತಾತ ಬಸವಲಿಂಗಶೆಟ್ಟರು ಮೈಸೂರಿನಲ್ಲಿ ಹೆಲ್ತ್ ಇನ್ಸ್‌ಪೆಕ್ಟರ್ ಆಗಿದ್ದರು. ಅವರು ಸರ್. ಮಿರ್ಜಾ ಇಸ್ಮಾಯಿಲ್‌ರವರ ಸಮಕಾಲೀನರು ಮತ್ತು ಅವರ ಕೈಕೆಳಗೆ ಕೆಲಸ ಮಾಡಿದವರು. ತಾತ ಸದಾಶಿವಯ್ಯ ಸೆಂಟ್ರಲ್ ಲಾ ಕಾಲೇಜಿನ ಪ್ರಾಂಶುಪಾಲರಾಗಿದ್ದರು. ಬಂಗಾರಪ್ಪ , ವೀರಪ್ಪ ಮೊಯ್ಲಿ, ಎಂ. ಡಿ. ನಂಜುಂಡಸ್ವಾಮಿ ಮೊದಲಾದ ಗಣ್ಯರು ಓದಿದ ಕಾಲೇಜು ಅದು, ಅವರೆಲ್ಲಾ ನಮ್ಮ ತಾತನ ಶಿಷ್ಯರಾಗಿದ್ದವರು. ತಾಯಿಯ ಕಡೆಯಿಂದಲೂ ತಾತ ಶಿವಗಂಗೆಯ ಆರೋಗ್ಯ ಅಧಿಕಾರಿಯಾಗಿದ್ದರು. ಹೀಗೆ ಇಡೀ ದೊಡ್ಡ ಕುಟುಂಬ ಇಲ್ಲೇ ಇತ್ತು.

ತಂದೆ ಅಮರ್‌ಕುಮಾರ್ ಮತ್ತು ತಾಯಿ ಮಂಗಳಾ ಕುಮಾರ್ ಇಬ್ಬರೂ ವೃತ್ತಿಯಲ್ಲಿ ವೈದ್ಯರು. ನಾವಿಬ್ಬರು ಮಕ್ಕಳು, ನಾನು ಮತ್ತು ನನ್ನ ತಮ್ಮ ಅಶೋಕಕುಮಾರ್. ತಂದೆಯವರ ವೃತ್ತಿ ವೈದ್ಯಕೀಯವಾಗಿದ್ದರೂ ಅವರ ಆಸಕ್ತಿಗಳು ಸಾಮಾಜಿಕ ಕ್ಷೇತ್ರದೆಡೆ ಇದ್ದವು. ಅವರೊಬ್ಬ ಒಳ್ಳೆ ಚಿಂತಕರಾಗಿದ್ದರು. ಮಹಾನ್ ಅನ್ವೇಷಕ ಡಾ॥ ಎ. ಕೆ. ರಾಮಾನುಜನ್‌ರವರು ತಂದೆಗೆ ಅತ್ಯಂತ ಆತ್ಮೀಯರು, ಒಬ್ಬ ಗುರುವಿನಂತಿದ್ದರು. ಹಾಗೆಯೇ ಮನೆಯಲ್ಲಿ ಕನ್ನಡ ವೈಚಾರಿಕ ಲೋಕದ ಗಾಢವಾದ ಪ್ರಭಾವವಿತ್ತು. ನಮ್ಮ ಮನೆಯಲ್ಲಿ ಟಿ.ವಿ. ಇರಲಿಲ್ಲ. ನಾವು ಇಡೀ ಕುಟುಂಬ ಒಂದೆಡೆ ಇರುವಾಗ ಅನೇಕ ವಿಷಯಗಳ ಬಗ್ಗೆ ನಮ್ಮಲ್ಲಿ ಚರ್ಚೆ ನಡೆಯುತ್ತಿತ್ತು. ಹಾಗೆಯೇ ನನಗೆ ಕುವೆಂಪು, ಶಿವರಾಮ ಕಾರಂತ ಮೊದಲಾದ ಲೇಖಕರ ಬರಹಗಳ ಪರಿಚಯವಾಯಿತು. ವಚನ ಚಳವಳಿಯ ಬಗ್ಗೆ, ಬಸವಣ್ಣ ಅಕ್ಕಮಹಾದೇವಿ ಮೊದಲಾದ ವಚನಕಾರರ ಬಗ್ಗೆ, ಮಾರ್ಕ್ವೆಜ್, ಕೀಟ್ಸ್ , ಛಾಸರ್, ಚಿನುವಾ ಅಚೀಬೆ ಮೊದಲಾದ

# ಜನಪರ ಕಾಳಜಿಯ ನಟ ಚೇತನ್






ಸಂದರ್ಶಿಸಿದ ತಂಡ

**ಹುಲಿಕುಂಟೆ ಮೂರ್ತಿ, ಗೌರಿ, ಮಲ್ಲಿಗೆ, ಸರೋವರ್**

ಚಿತ್ರಗಳು

**ಮುತ್ತುರಾಜ್**

ಜಗತ್ತಿನ ಇನ್ನಿತರ ಭಾಗಗಳ ಖ್ಯಾತ ಚಿಂತಕರು, ಕವಿಗಳ ಬದುಕು-ಬರಹಗಳ ಬಗ್ಗೆ ತಿಳಿದೆವು. ಆದ್ದರಿಂದ ಪ್ರಗತಿಪರವಾದ ಆಲೋಚನೆಗಳ ಜೊತೆಗೆ ಕನ್ನಡದ ಸಾಂಸ್ಕೃತಿಕ ಜಗತ್ತಿನೊಂದಿಗೆ ಭಾವನಾತ್ಮಕವಾದ ಸಂಬಂಧವೂ ಏರ್ಪಟ್ಟಿತು. ಬೆಳೆಯುತ್ತಾ ಹೋದಂತೆ ನನ್ನಲ್ಲೇ ಎಷ್ಟೋಬಾರಿ ನನ್ನ ನಿಜವಾದ ಅಸ್ಮಿತೆ ಯಾವುದು, ಕನ್ನಡವೋ ಇಂಗ್ಲಿಷೋ ಎಂಬ ಪ್ರಶ್ನೆ ಹುಟ್ಟಿತ್ತು!

ಸಣ್ಣವನಾಗಿದ್ದಾಗ ನಾವು ಮಕ್ಕಳೂ ಪೋಷಕರೊಂದಿಗೆ ಸಾಕಷ್ಟು ಬಾರಿ ಊರಿಗೆ ಬಂದು ಹೋಗಿದ್ದೇವೆ. ಊರಿಗೆ ಬಂದರೆ ಹೋಗಲು ಮನಸ್ಸಾಗುತ್ತಿರಲಿಲ್ಲ, ಹೋಗುವಾಗ ನಾನು ಯಾವಾಗಲೂ ಅಳುತ್ತಿದ್ದೆ. ಬಹುಶಃ ಬಾಲ್ಯದ ಆ ಸೆಳೆತ ಹಾಗೂ ಇಲ್ಲಿನ ವೈಚಾರಿಕತೆಯೊಂದಿಗಿನ ನಂಟು ನಂತರ ನನ್ನನ್ನು ಇಲ್ಲಿಗೆ ಎಳೆತಂದಿರಬಹುದು.

**ಹೊಸತು :** 'ಇಲ್ಲಿನ ವೈಚಾರಿಕತೆಯೊಂದಿಗಿನ ನಂಟು' ಅಂದಿರಿ, ಹಾಗಾದರೆ ಭಾರತದ ವೈಚಾರಿಕತೆ ನಿಮ್ಮ ಬದುಕನ್ನು ರೂಪಿಸುವಲ್ಲಿ ಯಾವ ರೀತಿಯಲ್ಲಿ ಪಾತ್ರವಹಿಸಿದೆ ?

**ಚೇತನ್ :** ವ್ಯಕ್ತಿತ್ವ ರೂಪುಗೊಳ್ಳುವ ವಯಸ್ಸಿನಲ್ಲಿ ನನಗೆ ಗಾಂಧಿಯವರ 'ನನ್ನ ಸತ್ಯಾನ್ವೇಷಣೆ' ಕೃತಿ ಸಿಕ್ಕಿತು. ಅದನ್ನು ಓದಿದೆ. ಅದು ನನ್ನನ್ನು ಗಾಢವಾಗಿ ಪ್ರಭಾವಿಸಿತು. ಆ ನಂತರದಲ್ಲಿ ಗಾಂಧಿಯವರ ಸಿದ್ಧಾಂತದ ಜೊತೆ ವೈಚಾರಿಕ ಭೇದಗಳು ಉಂಟಾದರೂ ಮುಖ್ಯವಾದ ಮೂರು ಸಂಗತಿಗಳನ್ನು ಅವರಿಂದ ನಾನು ನನ್ನ ಬದುಕಿನಲ್ಲಿ ಅಳವಡಿಸಬೇಕೆಂದು ಭಾವಿಸಿದ್ದೇನೆ. ಆತ್ಮನಿರೀಕ್ಷಣೆ, ಸರಳತೆ ಮತ್ತು ಸ್ವಯಂ ನಿರಾಕರಣೆ.

ಅದೇ ರೀತಿ ಬಾಬಾಸಾಹೇಬ್ ಅಂಬೇಡ್ಕರ್ ಅವರ ವಿಚಾರಗಳು, ಪ್ರಜಾಪ್ರಭುತ್ವವನ್ನು ಕುರಿತ ಅವರ ಆಳವಾದ ನಿಲುವುಗಳು ನನ್ನನ್ನು ಪ್ರಭಾವಿಸಿವೆ.

**ಹೊಸತು :** ಸ್ವಯಂ ನಿರಾಕರಣೆ ಎಂಬುದನ್ನು ನೀವು ಹೇಗೆ ಪರಿಭಾವಿಸುತ್ತೀರಿ ?

**ಚೇತನ್ :** ಸ್ವಯಂ ನಿರಾಕರಣೆ ಎಂದರೆ ತನಗೆ ದಕ್ಕಿರುವುದನ್ನು ತಾನಾಗಿಯೇ ಬಿಟ್ಟುಕೊಡುವುದು ಅಥವಾ ತನ್ನನ್ನೇ ಕೇಂದ್ರವಾಗಿ ಭಾವಿಸದೆ ಬಿಟ್ಟುಕೊಡುವುದು ಎಂಬ ಅರ್ಥದಲ್ಲಿ.

ನನ್ನದೇ ಉದಾಹರಣೆ ತೆಗೆದುಕೊಂಡರೆ, ನನಗೆ ಸಾಕಷ್ಟು ಸವಲತ್ತುಗಳು ಸಿಕ್ಕಿವೆ. ತಂದೆ ತಾಯಿಗೆ ಉತ್ತಮ ಶಿಕ್ಷಣ ದೊರೆತದ್ದರ ಫಲವಾಗಿ ಅವರು ವಿದೇಶಕ್ಕೆ ಹೋಗಲು ಸಾಧ್ಯವಾಯಿತು, ನಮಗೆ ಆರ್ಥಿಕ ಭದ್ರತೆ ಇತ್ತು, ಅದರಿಂದ ಶಿಕ್ಷಣ ತಂದುಕೊಡುವ ವಿಶಾಲ ಜೀವನದೃಷ್ಟಿ ದೊರಕಿತು. ತಂದೆ ತಾಯಿಯ ಪ್ರೀತಿ ಸಿಕ್ಕಿತು. ಇದೆಲ್ಲವನ್ನೂ ಬಿಟ್ಟುಕೊಡುವುದು ಎಂದರೆ ಹೇಗೆ ?

ನನ್ನ ಪ್ರಕಾರ ನಮಗೆ ದೊರೆತ ಸವಲತ್ತುಗಳಿಗೂ ಸಮಾಜದ ಇನ್ನಿತರ ಅನೇಕರಿಗೆ ದೊರೆಯುತ್ತಿರುವುದಕ್ಕೂ ಅಂತರ ಇದ್ದಲ್ಲಿ ನಾವು ಅವರಿಗೆ ದೊರಕಬೇಕಾಗಿರುವುದರ ಪರವಾಗಿ ಹೋರಾಡಬೇಕು, ಇದೇ ಸ್ವಯಂ ನಿರಾಕರಣೆ. ನನಗೆ ಒಬ್ಬ ಪುರುಷನಾಗಿ ದೊರೆತಿರುವ ಸವಲತ್ತುಗಳನ್ನು ಮಹಿಳೆಯರ ಹಕ್ಕುಗಳಿಗಾಗಿ ಹೋರಾಡುವುದರ ಮೂಲಕ ಬಿಟ್ಟುಕೊಡಬೇಕು. ನಮಗೆ ದೊರೆತಿರುವ ಪ್ರೀತಿ-ವಾತ್ಸಲ್ಯಗಳನ್ನು ಅದು ದೊರೆಯದಿರುವವರೊಂದಿಗೆ ಹಂಚಿಕೊಳ್ಳಬೇಕು. ನಮಗೆ ಸಿಕ್ಕಿರುವುದು ಎಲ್ಲರಿಗೂ ಸಿಗಬೇಕು ಎಂಬುದಕ್ಕಾಗಿ ಒಬ್ಬ ವ್ಯಕ್ತಿ ನಡೆಸುವ ಪ್ರಯತ್ನವೇ ಆತನ ಸ್ವಯಂ ನಿರಾಕರಣೆ ಎಂದು ನಾನು ಭಾವಿಸುತ್ತೇನೆ. ಇದಕ್ಕಾಗಿ ಕಷ್ಟ ಬಂದರೂ ಪರವಾಗಿಲ್ಲ. ಕಷ್ಟಗಳ ಮೂಲಕ ಹಾದು ಒಳ್ಳೆಯ ಮನುಷ್ಯರು ಹೊರಹೊಮ್ಮುತ್ತಾರೆ ಮತ್ತು ಒಳ್ಳೆಯ ಸಮಾಜ ರೂಪುಗೊಳ್ಳುತ್ತದೆ!

**ಹೊಸತು :** ಸಾಮಾಜಿಕ ಅಂತರದ ಬಗ್ಗೆ ಮಾತನಾಡಿದಿರಿ. ನಿಮ್ಮ ಬದುಕಿನಲ್ಲಿ ಅಂತಹ ತಾರತಮ್ಯ ಅಥವಾ ಅಂತರದ ಅನುಭವ ಆಗಿದೆಯೇ ?

**ಚೇತನ್ :** ಸಾಮಾಜಿಕ ತಾರತಮ್ಯದ ಅನುಭವ ನನಗೆ ಅಮೇರಿಕಾದಲ್ಲೇ ಆಗಿತ್ತು. ಅಮೇರಿಕಾ ಸಮಾಜದಲ್ಲಿ ವರ್ಣಭೇದದ ಮನಸ್ಥಿತಿ ಬಹಳ ಆಳವಾಗಿದೆ. ಬಿಳಿಯರಲ್ಲದ ನಮ್ಮ ಮನೆಯ ಕಿಟಕಿಗೆ ಕಲ್ಲು ಹೊಡೆಯುವುದು, ನಾವು ಕಸದ ಗಾಡಿಗೆ ಹಾಕಲು ಮನೆಯ ಕಸ ಹೊರಗಿಟ್ಟಿದ್ದರೆ, ಅದನ್ನು ಮನೆಯೆದುರಿನ ಹೂತೋಟದಲ್ಲೆಲ್ಲ ಚೆಲ್ಲಿಬಿಟ್ಟು ಗಲೀಜು ಮಾಡುವುದು - ಇಂತಹ ಕಿಡಿಗೇಡಿ ಕೃತ್ಯಗಳು ಸಣ್ಣಂದಿನಿಂದ ನಾವು ನೋಡಿದ್ದೇ ಆಗಿದ್ದವು.

ಭಾರತದ ಮಟ್ಟಿಗೆ ನಾವು ಅನುಕೂಲವಂತರೇ ಆದರೂ, ಅಮೇರಿಕಾದಲ್ಲಿ ನಾವು ಶ್ವೇತವರ್ಣೀಯರಲ್ಲದ ವಲಸಿಗರು. ಇಂತಹವರ ಮೇಲೆ ಒಂದು ಬಗೆಯ ಅಸಹನೆ ಅಲ್ಲಿನ ಜನರಲ್ಲಿ ಬೆಳೆದಿರುತ್ತದೆ. ಆದ್ದರಿಂದ ಶಾಲೆಯಿಂದಲೇ ಬಿಳಿಯನಲ್ಲದ ಕಾರಣಕ್ಕೆ ನಾನು ಅವರ ಚುಡಾಯಿಸುವಿಕೆಯನ್ನು ಎದುರಿಸಬೇಕಾಗಿತ್ತು. ಪ್ರಾಥಮಿಕ ಶಿಕ್ಷಣ ಮುಗಿಸಿ, ಹದಿಹರೆಯದ ನಾನು ಪ್ರೌಢ ಶಿಕ್ಷಣಕ್ಕೆ (೯ರಿಂದ ೧೨ನೇ ತರಗತಿ) ಸೇರಿದೆ. ನಾವು ವಾಸವಿದ್ದದ್ದು ಅಮೇರಿಕಾದ ಷಿಕಾಗೋ ನಗರದ ಹೊರವಲಯದಲ್ಲಿ. ಅದು ಬಿಳಿ ಕಾರ್ಮಿಕವರ್ಗ ಹೆಚ್ಚಾಗಿದ್ದ ಸ್ಥಳ. ನಾನು ಆರಿಸಿಕೊಂಡ ಶಾಲೆ ಒಂದು ಕ್ಯಾಥೋಲಿಕ್ ಸಂಸ್ಥೆ ನಡೆಸುತ್ತಿದ್ದ ಹೈಸ್ಕೂಲ್. ಯಾಕೆಂದರೆ ಅಲ್ಲಿ ಒಂದು ಮ್ಯೂಸಿಕ್ ಬ್ಯಾಂಡ್ ಇತ್ತು, ನನಗೆ ಸಂಗೀತದಲ್ಲಿ ಆಸಕ್ತಿ, ಶಾಲೆಯಲ್ಲಿ ನಾನು ಸ್ಯಾಕ್ಸೋಫೋನ್ ನುಡಿಸುತ್ತಿದ್ದೆ.

ಆ ಶಾಲೆಗೆ ಪ್ರವೇಶ ಪಡೆದಾಗಿನಿಂದ ಅಲ್ಲಿನ ಬಿಳಿ ಹುಡುಗರ ರ್‍ಯಾಗಿಂಗ್ ಆರಂಭವಾಗಿತ್ತು. ನಾನು ಅದಕ್ಕೆ ತಿರುಗಿ ಬೀಳಲು ಸಾಧ್ಯವಾಗದೆ ತರಗತಿಯಲ್ಲಿ ಕಂಡೂ ಕಾಣದಂತೆ ಸುಮ್ಮನಿರುವುದನ್ನು ಅಭ್ಯಾಸ ಮಾಡಿಕೊಂಡೆ. ಕಷ್ಟಪಟ್ಟು ಓದುತ್ತಿದ್ದುದರಿಂದ ಓದಿನಲ್ಲಿ ಮುಂದಿದ್ದೆ. ವಿಷಯಗಳ ಗ್ರಹಿಕೆಯೂ ಚೆನ್ನಾಗಿತ್ತು. ಆದರೂ ನಾನು ಅಥವಾ ನನ್ನಂಥ ಎಲ್ಲಾ ವರ್ಣೀಯ (ಬಿಳಿಯರಲ್ಲದ, ವರ್ಣೀಯ) ಮಕ್ಕಳು ಎದುರಿಸುತ್ತಿದ್ದ ಕುಚೇಷ್ಟೆ, ರ್‍ಯಾಗಿಂಗ್ ಅಲ್ಲಿನ ಆಡಳಿತಕ್ಕೆ ಒಪ್ಪಿತವೇ ಆದಂತಿತ್ತು.

ಈ ಇಡೀ ಸಮತೋಲನದಲ್ಲಿ ಒಂದು ಭಾರೀ ಅಲ್ಲೋಲಕಲ್ಲೋಲ ಉಂಟಾದ ಒಂದು ಘಟನೆ ನಾನು ಪ್ರೌಢಶಾಲೆಯ ಕೊನೆ ವರ್ಷದಲ್ಲಿದ್ದಾಗ ನಡೆಯಿತು. ಭಾರತ ಆ ವರ್ಷ ಅಣುಬಾಂಬ್ ಪರೀಕ್ಷೆ ನಡೆಸಿತ್ತು. ಆಗ, ತರಗತಿಯಲ್ಲಿ ಪಾಠ ಮಾಡುತ್ತಿದ್ದ ಒಬ್ಬ ಬಿಳಿಯ ಉಪನ್ಯಾಸಕರು ಭಾರತದ ಈ ನಡೆಯನ್ನು ಬಹಳ ಕೇವಲವಾಗಿ ಹೀಯಾಳಿಸಿ ಮಾತನಾಡಿದರು. ಆಗ ಅಣುಬಾಂಬ್ ಬೇಕೇ ಬೇಡವೇ ಎಂಬುದಕ್ಕಿಂತ ಭಾರತದ ಬಗ್ಗೆ ಅವರಾಡಿದ ಮಾತು ಮಾತ್ರ ನನ್ನ ಮನಸ್ಸಿಗೆ ಘಾಸಿಮಾಡಿತು. ನಾನು "ಎರಡು ಬಾರಿ ಅಣುಬಾಂಬ್ ಹಾಕಿ ಇತರ ದೇಶಗಳನ್ನು ನಾಶ ಮಾಡಿರುವ ಅಮೇರಿಕಾಗೆ ಭಾರತದ ಅಣುಬಾಂಬ್ ಪರೀಕ್ಷೆಯನ್ನು ವಿರೋಧಿಸುವ ನೈತಿಕ ಹಕ್ಕು ಎಲ್ಲಿದೆ ?" ಎಂದು ಬಹಿರಂಗವಾಗಿ ಪ್ರಶ್ನಿಸಿದೆ. ಹೀಗೆ ಪ್ರಶ್ನೆ ಮಾಡಿದ ಕೂಡಲೇ, ಅದುವರೆಗೂ ತರಗತಿಯಲ್ಲಿ ಮೊದಲ ಸ್ಥಾನ ತೆಗೆದುಕೊಳ್ಳುತ್ತಿದ್ದ, ಯಾವಾಗಲೂ ಸದ್ದೇ ಇಲ್ಲದಂತಿರುತ್ತಿದ್ದ ವಿದ್ಯಾರ್ಥಿ ಎಂಬ ನನ್ನ ಇಮೇಜ್ ದಿಢೀರನೆ ಬದಲಾಗಿ 'ಬ್ಯಾಡ್ ಬಾಯ್' ಇಮೇಜ್ ತಗುಲಿಕೊಂಡಿತು. ಇಡೀ ಆಡಳಿತ ಮಂಡಳಿ ನನ್ನ ವಿರುದ್ಧವಾಯಿತು. ಅದುವರೆಗೆ ಏನು ತಪ್ಪು ಕಂಡರೂ ಸುಮ್ಮನಿರುತ್ತಿದ್ದ ನಾನು, ನಂತರ ಎಲ್ಲವನ್ನೂ ಪ್ರಶ್ನಿಸಲಾರಂಭಿಸಿದೆ. ಆಗಾಗ ಅದಕ್ಕಾಗಿ ಶಿಕ್ಷೆ ವಿಧಿಸುತ್ತಿದ್ದರು. ತರಗತಿಯಿಂದ ಹೊರಹೋಗಬೇಕಾಗುತ್ತಿತ್ತು. ನನ್ನಂತೆಯೇ ಇನ್ನಿತರ ತರಗತಿಗಳಿಂದ ಶಿಕ್ಷೆ ಪಡೆದು ಆಚೆ ಬರುತ್ತಿದ್ದ ಬಿಳಿಯ ಮತ್ತು ವರ್ಣೀಯ ಹುಡುಗರು ನನ್ನ ಸ್ನೇಹಿತರಾದರು. ಅದರಿಂದ ನನಗೆ ಅಲ್ಲಿನ

ಸಾಮಾಜಿಕ ವಾಸ್ತವಗಳ ಹತ್ತಿರದ ಪರಿಚಯವಾಯಿತು.

ಪ್ರೌಢ ಶಿಕ್ಷಣದ ಕೊನೆಯ ವರ್ಷದ ಅಂತ್ಯದಲ್ಲಿ, ವ್ಯಾಲೆಡಿಕ್ಟರಿ ಕಾರ್ಯಕ್ರಮ. ಅದರಲ್ಲಿ ಇಡೀ ೮ ಸೆಮಿಸ್ಟರ್‌ಗಳಲ್ಲಿ ಮೊದಲ ಸ್ಥಾನ ಪಡೆದವರಿಗೆ ಮಾತನಾಡುವ ಅವಕಾಶವಿತ್ತು. ನಾನು ಮೊದಲ ಸ್ಥಾನದಲ್ಲಿದ್ದೆ. ಆದರೆ, ನನ್ನ ಬದಲಿಗೆ ಬೇರೊಬ್ಬ ಬಿಳಿ ಹುಡುಗನಿಗೆ ಅವಕಾಶ ನೀಡಿದ್ದರು. ಇದನ್ನು ಪ್ರಶ್ನಿಸಿ ಒತ್ತಾಯಪೂರ್ವಕವಾಗಿ ಭಾಷಣ ಮಾಡುವ ಅವಕಾಶ ಪಡೆದುಕೊಂಡೆ ಹಾಗೂ ಅವರ ಎಲ್ಲಾ ಒತ್ತಡ ಬೆದರಿಕೆಗಳ ಹೊರತಾಗಿ ನನಗೆ ಹೇಳಬೇಕೆನಿಸಿದ್ದನ್ನೇ ಮಾತಾಡಿದೆ. ಆ ಸಮಯದಲ್ಲಿ ನಮ್ಮ ಶಾಲೆಯ ಮಕ್ಕಳು ಮತ್ತು ಪೋಷಕರ ವಲಯದಲ್ಲಿ ಇದೊಂದು ಚರ್ಚೆಯ ವಿಷಯವೇ ಆಗಿತ್ತು.

ಸಮಾಜ ಸೃಷ್ಟಿಸುವ ಅಂತರಗಳು ಮತ್ತು ಅದನ್ನು ಮೀರುವ ಪ್ರಯತ್ನದ ಅನುಭವ ಆಗಿದ್ದು ಹೀಗೆ.

**ಹೊಸತು :** ಈ ದೇಶದ ಒಟ್ಟು ವ್ಯವಸ್ಥೆಯೆ ಮನುಷ್ಯರ ನಡುವೆ ಸೃಷ್ಟಿಸಲಾದ ಅಂತರಗಳ ಮೇಲೆ ನಿಂತಿದೆ. ಭಾರತದ ಸಮಾಜದಲ್ಲಿ ಬೇರೂರಿರುವ ಜಾತಿ ಭೇದ ಮೊದಲಾದ ಸಾಮಾಜಿಕ ಅಸಮಾನತೆಗಳ ಅರಿವು ಇಲ್ಲಿಗೆ ಬರುವ ಮೊದಲೇ ಇತ್ತೇ ?

**ಚೇತನ್ :** ಸಾಮಾಜಿಕ ತಾರತಮ್ಯದ ಸಣ್ಣ ಪರಿಚಯ ಶಾಲೆಯಲ್ಲೇ ಆಗಿತ್ತು ಎಂದು ಹೇಳಿದೆ. ಆದರೆ, ಭಾರತಕ್ಕೆ ಬಂದ ನಂತರ ಅದರ ಅನೇಕ ಆಯಾಮಗಳ, ಆಳ–ವಿಸ್ತಾರಗಳ ಮತ್ತು ತೀವ್ರತೆಯ ಅನುಭವವಾಯಿತು. ಅಮೇರಿಕಾದಲ್ಲಾದರೆ ಬಿಳಿಯರು ಮತ್ತು ವರ್ಣೀಯರು ಎಂಬ ತಾರತಮ್ಯ, ಭಾರತದ ಅಸಮಾನತೆಯಲ್ಲಿ ಅನೇಕ ಶೇಡ್ಸ್ ಇರುವುದು ಅನುಭವಕ್ಕೆ ಬಂತು. ಆದರೆ, ಅಮೇರಿಕಾದಲ್ಲೇ ನಾನು ಗಮನಿಸಿದ್ದ ಒಂದು ಸಂಗತಿಯೆಂದರೆ, ವರ್ಣಭೇದದ ವಿರುದ್ಧ ನಾನು ಮಾತನಾಡಿದರೆ ದಾಳಿ ನಡೆಯುತ್ತದೆ, ಆದರೆ ಬಿಳಿಯರೊಬ್ಬರು ಮಾತನಾಡಿದರೆ ಹೆಚ್ಚಿನವರು ಕೇಳುತ್ತಾರೆ. ಇದನ್ನು ಭಾರತಕ್ಕೆ ಬಂದ ಮೇಲೂ ನೋಡಿದೆ. ಉದಾಹರಣೆಗೆ ದಿಡ್ಡಳ್ಳಿಯನ್ನೇ ತೆಗೆದುಕೊಳ್ಳಿ ; ಆದಿವಾಸಿಗಳು ದನಿಯೆತ್ತಿದರೆ, ನೀವು ಎಲ್ಲಿಂದಲೋ ಬಂದವರು ಎನ್ನುತ್ತಾರೆ, ಅಕ್ರಮವಾಗಿ ಜಾಗ ಕಬಳಿಸಲು ನೋಡುತ್ತಿದ್ದೀರಿ ಎನ್ನುತ್ತಾರೆ. ಆದರೆ, ನಾವು ಅವರ ಹಕ್ಕುಗಳ ಬಗ್ಗೆ ಮಾತನಾಡಿದರೆ ಸಮಾಜ ಗಮನಿಸುತ್ತದೆ. ಆದ್ದರಿಂದ, ಜಾತಿಯಂತಹ ಸಾಮಾಜಿಕ ಶೋಷಣೆಯ ವಿರುದ್ಧ ದನಿಯೆತ್ತುವುದು ಮೇಲ್ಜಾತಿಯಾಗಿ ಸವಲತ್ತುಗಳನ್ನು ಪಡೆದವರ ಹೊಣೆ ಎಂಬುದು ಅರ್ಥವಾಗಬೇಕು. ಆಗ ಪರಿಣಾಮ ಆಗುತ್ತದೆ.

ನಮ್ಮ ಮನೆಯಲ್ಲಿ ಅಮೇರಿಕಾದ ವರ್ಣಭೇದ, ಭಾರತದ ಜಾತಿಭೇದ ಎರಡರ ಬಗ್ಗೆಯೂ ಚರ್ಚೆಗಳಾಗುತ್ತಿದ್ದವು. ಅಂಬೇಡ್ಕರ್ ವಿಚಾರಗಳ ಬಗ್ಗೆಯೂ ಮಾತುಕತೆ ನಡೆಯುತ್ತಿತ್ತು. ಕಪ್ಪುಜನರ ವಿಮೋಚಕನೆಂದೇ ಕರೆಯಲ್ಪಡುವ ಮಾಲ್ಕಂ ಎಕ್ಸ್, ಬೆಕರ್‌ರ ಬರಹಗಳನ್ನು ಓದುತ್ತಿದ್ದೆವು. ಫ್ರೆಡರಿಕ್ ಡಗ್ಲಸ್ ಒಬ್ಬ ಮಾಜಿ ಗುಲಾಮ ಮತ್ತು ಒಳ್ಳೆಯ ವಿಚಾರವಾದಿ. ಅವರ ಮಾತುಗಳು ನನಗೆ ಬಹಳ ಇಷ್ಟ. "ಒಬ್ಬ ವ್ಯಕ್ತಿ ಎಷ್ಟು ಮೇಲೆ ಹೋಗಿದ್ದಾನೆ ಎಂಬುದರ ಮೇಲೆ ಆತನ ಅರ್ಹತೆಯನ್ನು ಅಳೆಯಬಾರದು; ಆತ ಎಷ್ಟು



ಕೆಳಗಿನಿಂದ ಬಂದಿದ್ದಾನೆ ಎಂಬುದರ ಮೇಲೆ ಅರ್ಹತೆ ನಿರ್ಧಾರವಾಗಬೇಕು" ಎಂದು ಹೇಳಿದ್ದಾರೆ. ಅಂಬೇಡ್ಕರ್ ಅವರ ಬರಹಗಳಲ್ಲಿ ಭಾರತದ ಜಾತಿಯ ಕುರಿತ ವಿಶ್ಲೇಷಣೆಗಳನ್ನು ಓದಿದ್ದೇನೆ.

ಹೀಗೆ, ಒಂದೊಂದು ರೀತಿಯ ತಾರತಮ್ಯದ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಸನ್ನಿವೇಶಗಳು ಬೇರೆಯಾಗಿರಬಹುದು; ಆದರೆ ತಾರತಮ್ಯ ವಾಸ್ತವ.

**ಹೊಸತು :** ಭಾರತಕ್ಕೆ ಬರುವಾಗ ಏನು ಯೋಜನೆಗಳಿದ್ದವು ?

**ಚೇತನ್ :** ದೊಡ್ಡ ಯೋಜನೆಗಳು ಅನ್ನುವುದಕ್ಕಿಂತ ಇಲ್ಲಿನ ಸಾಮಾಜಿಕ ವಾಸ್ತವಗಳ ಜೊತೆ ತೊಡಗಿಕೊಳ್ಳಬೇಕು ಎಂಬುದು ನನ್ನ ಆಶಯವಾಗಿತ್ತು. ಆದರೆ, ಅದಕ್ಕೆ ಏನು ಮಾಡಬೇಕು ಎಂಬ ದಾರಿಗಳ ಪರಿಚಯ ವಿರಲಿಲ್ಲ. ಸ್ವಲ್ಪಕಾಲ ಚಾಮರಾಜನಗರ ಜಿಲ್ಲೆಯಲ್ಲಿ ಮಹಿಳೆಯರ ಸ್ವಸಹಾಯ ಸಂಘದ ಜೊತೆ ತೊಡಗಿಕೊಳ್ಳುತ್ತಾ, ಮಹಿಳೆಯರ ಆರ್ಥಿಕ ಸ್ವಾವಲಂಬನೆಯ ಪ್ರಯತ್ನಗಳ ಜೊತೆ ಕೈಗೂಡಿಸಿದ್ದೆ. ಮಹಿಳಾ ದೌರ್ಜನ್ಯಗಳ ವಿರುದ್ಧ, ಲೈಂಗಿಕ ಅಲ್ಪಸಂಖ್ಯಾತರ ಹಕ್ಕುಗಳ ಪರವಾಗಿ, ಇಂತಹ ಪ್ರದರ್ಶನಗಳಲ್ಲಿ ಪಾಲ್ಗೊಳ್ಳುತ್ತಿದ್ದೆ. ಆದರೆ, ಎಲ್ಲಿಯೂ ನನ್ನನ್ನು ಒಳಗೊಳ್ಳುವಂತಹ ತಂಡ ಸಿಗಲಿಲ್ಲ. ನಿಧಾನವಾಗಿ ಒಂದು ವಿಷಯ ಅರ್ಥವಾಯಿತು. ಇಲ್ಲಿ ಜನರು ಏನು ಮಾತಾಡುತ್ತಾರೆ ಎಂಬುದಕ್ಕಿಂತ ಯಾವ ಸ್ಥಾನದಿಂದ ಮಾತನಾಡುತ್ತಾರೆ ಎಂಬುದಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ ! ಆಗ ನಾನು ನನ್ನದೇ ಆದ ಗುರುತನ್ನು ಕಂಡುಕೊಳ್ಳುವುದು ಅಗತ್ಯವಾಯಿತು.

ನನಗೆ, ಸಂಗೀತ ಮತ್ತು ರಂಗಭೂಮಿಯಲ್ಲಿ ಆಸಕ್ತಿ ಇದ್ದುದರಿಂದ ಕೆಲವು ಸ್ನೇಹಿತರು ಯಾಕೆ ನಟನಾಗಬಾರದು ಎಂದು ಕೇಳಿದರು. ಅದು ಸರಿ ಅನ್ನಿಸಿತು. ಬೆಂಗಳೂರಿನ 'ವಿಸ್ತಾರ' ತಂಡದೊಂದಿಗೆ ಸೇರಿ ನಾಟಕಗಳಲ್ಲಿ ಅಭಿನಯಿಸಿದೆ. ಆಗ ನರೇಂದ್ರಬಾಬು ಎನ್ನುವವರ ಮೂಲಕ ಸಿನಿಮಾ ಕಡೆ ತಿರುಗುವ ಅವಕಾಶ ಸಿಕ್ಕಿತು. ಹಾಗೆ 'ಆ ದಿನಗಳು' ಮೂಲಕ ಸಿನೆಮಾ ಕ್ಷೇತ್ರಕ್ಕೆ ಬಂದೆ.

ಇದೇ ಸಮಯದಲ್ಲಿ ಭ್ರಷ್ಟಾಚಾರದ ವಿರುದ್ಧ ಜನ ಲೋಕಪಾಲ್ ಮಸೂದೆಗಾಗಿ ಆಗ್ರಹಿಸಿ ಚಳುವಳಿ ನಡೆಯುತ್ತಿತ್ತು. ನಾನು ನನ್ನ ಫೇಸ್‌ಬುಕ್‌ನಲ್ಲಿ ಅದರ ಬಗ್ಗೆ ಒಂದು ಬರಹ ಹಾಕಿದ್ದೆ. ಅದನ್ನು ಗಮನಿಸಿ ಕೆಲವು ಟಿ.ವಿ. ಚಾನಲ್‌ಗಳಲ್ಲಿ ಪ್ಯಾನೆಲ್ ಚರ್ಚೆಗೆ ಕರೆದರು. ಅಲ್ಲಿಂದ ಒಂದು ರೀತಿ ನನ್ನ ಸಾಮಾಜಿಕ ಕೆಲಸದ ಆಸಕ್ತಿಗೆ ಇಂಬು ಸಿಕ್ಕಂತಾಯಿತು.

ಇದೇ ಅವಧಿಯಲ್ಲಿ 'ಮೈನಾ'ದಲ್ಲಿ ಅವಕಾಶ ಸಿಕ್ಕಿತು. ನನಗೆ ಬಹಳ ಇಷ್ಟವಾದ ನನ್ನ ಕೆಲಸ ಮೈನಾ.

ಇದರ ನಂತರ ಲಕ್ಷ್ಮಣ್ ಹೂಗಾರ್, ಜ್ಯೋತಿ ಇರ್ವತ್ತೂರು ಮೊದಲಾದವರ ಪರಿಚಯವಾಯಿತು. ಅವರ ಮೂಲಕ ಸಿಕ್ಕಿದ ಒಂದು ವಿಡಿಯೋದಲ್ಲಿ ಕರ್ನಾಟಕದ ಎಂಡೋಸಲ್ಫಾನ್ ಪೀಡಿತರ ಪರಿಸ್ಥಿತಿ ನೋಡಿದೆ. ಅದು ಊಹೆಗೂ ನಿಲುಕದ್ದು; ದಿಗ್ಭ್ರಾಂತಿಯಾಯಿತು. ನೇರವಾಗಿ ರೈಲು ಹತ್ತಿ ಮಂಗಳೂರಿಗೆ ಹೋದೆ. ಅಲ್ಲಿನ ಎಂಡೋಸಲ್ಫಾನ್ ವಿರೋಧಿ ಹೋರಾಟಗಾರರ ಜೊತೆ ಸಾಕಷ್ಟು ಓಡಾಡಿದೆ. ಒಂದಷ್ಟು ಕೆಲಸ ಮಾಡಲು ಸಾಧ್ಯವಾಯಿತು. ಸರ್ಕಾರ ೮೦–೯೦ ಕೋಟಿ ಬಿಡುಗಡೆ ಮಾಡಿ ಎಂಡೋಸಲ್ಫಾನ್ ಪೀಡಿತರಿಗೆ ಮಾಸಾಶನ ವ್ಯವಸ್ಥೆ ಮಾಡಿದರು.

ಆದರೆ ಈ ದುರಂತದ ಹಿಂದೆ ಎಕ್ಸೆಲ್ ಕ್ರಾಪ್ ಕೇರ್, ಹಿಂದೂಸ್ಥಾನ್ ಪೆಸ್ಟಿಸೈಟ್ಸ್ ಲಿಮಿಟೆಡ್, ಕೋರಮಂಡಲ್ ಇಸೆಕ್ಟಿಸೈಡ್ ಮೊದಲಾದ ದೊಡ್ಡ ಕಾರ್ಪೊರೇಟ್ ಕ್ರಿಮಿನಾಶಕಗಳ ಕಂಪೆನಿಗಳ ಕೈವಾಡವಿತ್ತು. ಆದ್ದರಿಂದ ನಾವು, ಇವರುಗಳಿಗೆ ದಂಡ ವಿಧಿಸಿ ಅದರಿಂದ ಪೀಡಿತರಿಗೆ ಪರಿಹಾರ ಮತ್ತು ಶಾಶ್ವತ ಆರೋಗ್ಯ ಸುರಕ್ಷೆ ಸಿಗುವಂತೆ ಮಾಡಬೇಕೆಂದು ಪ್ರಯತ್ನಿಸಿದೆವು. ಸರ್ಕಾರ ಅದನ್ನು ಮಾಡಲಿಲ್ಲ. ಇತ್ತೀಚೆಗೆ ಎಂಡೋಸಲ್ಫಾನ್ ದುರಂತದ ಕಾರಣಕ್ಕೆ ಒಂದೇ ಕುಟುಂಬದ ನಾಲ್ವರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇನ್ನೂ ಕೆಲಸ ಮುಂದುವರಿಯುತ್ತಿದೆ.

ಈ ಅವಧಿಯಲ್ಲಿ ಎಸ್‌ಎಫ್‌ಐ, ಡಿವೈಎಫ್‌ಐ, ಬಿವಿಎಸ್ ಮೊದಲಾದ ಸಂಘಟನೆಗಳ ಸಂಪರ್ಕ ಸಿಕ್ಕಿತು. ಅವರ ಜೊತೆ ಸಾಕಷ್ಟು ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಂಡೆ. ಇತ್ತೀಚೆಗೆ ಬೆಂಗಳೂರಿನ ಉಕ್ಕಿನ ಸೇತುವೆ ವಿರೋಧಿ ಹೋರಾಟದಲ್ಲಿ ಪಾಲೊಳ್ಳುವ ಅವಕಾಶ ಸಿಕ್ಕಿತು. ಆಗ ಪರಿಸರದ ಬಗ್ಗೆ ಬಹಳ ಚರ್ಚೆಯಾಗುತ್ತಿತ್ತು. ಪರಿಸರ ಉಳಿಸಲೇಬೇಕು, ಆದರೆ

ಮನುಷ್ಯ ಸಮಾಜದ ಅಭಿವೃದ್ಧಿ ಮತ್ತು ಪರಿಸರದ ಉಳಿವು ಎರಡೂ ಹೇಗೆ ಜೊತೆಯಾಗಿ ಸಾಗಬೇಕು ಎಂಬ ಚಿಂತನೆಯಲ್ಲಿದ್ದಾಗಲೇ ದಿಡ್ಡಳ್ಳಿಯ ಕುರಿತ ಒಂದು ಬರಹ ಸಾಮಾಜಿಕ ಜಾಲತಾಣದಲ್ಲಿ ನೋಡಿದೆ. ಆ ಜನರು ಅಲ್ಲಿನ ಮೂಲನಿವಾಸಿಗಳು. ಇದುವರೆಗೆ ಆ ಪರಿಸರವನ್ನು ಉಳಿಸಿಕೊಂಡು ಬಂದವರು. ಅವರಿಗೆ ನೆಲೆಯೊದಗಿಸದೆ ಸರ್ಕಾರ ಇನ್ನೇತರ ಅಭಿವೃದ್ಧಿ ಮಾಡಬಲ್ಲದು ಎಂಬ ಪ್ರಶ್ನೆ ಕಾಡಿತು.

ದಿಡ್ಡಳ್ಳಿಯ ಆದಿವಾಸಿಗಳ ಹೋರಾಟದಲ್ಲಿ ಪಾಲ್ಗೊಳ್ಳಲು ಹೊರಟೆ. ಅಲ್ಲಿ ಆಗಲೇ ಪ್ರಗತಿಪರ ಸಂಘಟನೆಗಳು ಎಲ್ಲ ಪ್ರತಿಕೂಲ ಪರಿಸ್ಥಿತಿಗಳ ನಡುವೆ ಕೆಲಸ ಮಾಡುತ್ತಿದ್ದರು. ಆ ಸಂಘಟನೆಗಳ ಜೊತೆ ಸೇರಿದೆ. ಅತ್ಯಂತ ಕಡಿಮೆ ಅವಧಿಯಲ್ಲಿ ಸಾಕಷ್ಟು ಪರಿಣಾಮ ಉಂಟುಮಾಡಲು ಸಾಧ್ಯವಾಯಿತು.

**ಹೊಸತು :** ದಿಡ್ಡಳ್ಳಿ ನಿಮ್ಮ ಬದುಕಿಗೆ ಸೇರಿಸಿದ ಹೊಸ ಆಯಾಮಗಳು ?

**ಚೇತನ್ :** ನನಗೆ ದಿಡ್ಡಳ್ಳಿಯಲ್ಲಿ ಬಹಳ ಪ್ರಭಾವ ಬೀರಿದ ಎರಡು ಸಂಗತಿಗಳೆಂದರೆ, ಮೊದಲನೆಯದು ಆ ಆದಿವಾಸಿಗಳ ಒಗ್ಗಟ್ಟು , ಎರಡನೆಯದು ಪ್ರಗತಿಪರ ಶಕ್ತಿಗಳ ಒಗ್ಗಟ್ಟು .

ಆದಿವಾಸಿಗಳಲ್ಲಿ ೫-೬ ಬೇರೆ ಬೇರೆ ಸಮುದಾಯ ಗಳಿದ್ದರೂ, ಅವರು ಅಚಲವಾದ ಒಗ್ಗಟ್ಟನ್ನು ಪ್ರದರ್ಶಿಸುತ್ತಿರುವುದು ಬಹಳ ಸ್ಫೂರ್ತಿ ನೀಡುವ ವಿಷಯ. ಅವರಿಗೆ ಜಿಲ್ಲಾ ಆಡಳಿತದ ವತಿಯಿಂದ ಟಾರ್ಪಾಲಿನ್‌ಗಳನ್ನೇನೋ ನೀಡಲು ಹೋಗಿದ್ದಾರೆ. ಆದರೆ ಅಲ್ಲಿರುವುದು ೫೭೭ ಕುಟುಂಬಗಳು, ಇವರು ಕೊಟ್ಟಿರುವುದು ೨೮೦ ಮಾತ್ರ. ಆಗ, ಅವರು ಕೊಟ್ಟರೆ ಎಲ್ಲರಿಗೂ ಕೊಡಿ, ಇಲ್ಲದಿದ್ದರೆ ಯಾರಿಗೂ ಬೇಡ; ಎಲ್ಲರೂ ಚಳಿ, ಬಿಸಿಲಿನಲ್ಲಿ ಹೀಗೆಯೇ ಇರುತ್ತೇವೆ ಎಂದು ತಿರಸ್ಕರಿಸಿದ್ದಾರೆ. ಇತ್ತೀಚೆಗೆ ಪುನರ್ವಸತಿಗೆ ಭೂಮಿ ತೋರಿಸಿದಾಗಲೂ ಎಲ್ಲರಿಗೂ ಒಂದೇ ಕಡೆ ಕೊಡಬೇಕು ಎಂದು ಆಗ್ರಹಿಸಿದ್ದಾರೆ. ಇದೊಂದು ಅದ್ಭುತವಾದ ಮಾದರಿ.

ಅದೇ ರೀತಿ ಅಲ್ಲಿ ಸಕ್ರಿಯವಾಗಿ ತೊಡಗಿಕೊಂಡ ಎಲ್ಲಾ ಪ್ರಗತಿಪರ ಶಕ್ತಿಗಳೂ ಸಹ ಎಲ್ಲ ಭಿನ್ನಾಭಿಪ್ರಾಯ ಗಳನ್ನು ಮರೆತು ಶ್ರಮಿಸಿದ್ದು ಮತ್ತು ಅವರಿಗೆ ಹೊರಗಿನಿಂದಲೂ ಎಲ್ಲಾ ರೀತಿಯ ಸಂಘಟನೆಗಳ ಬೆಂಬಲ ಸಿಕ್ಕಿದ್ದು ತುಂಬ ಖುಷಿಯಾಯಿತು. ಮಾಧ್ಯಮಗಳೂ ಕೂಡ ವಿಚಾರಕ್ಕೆ ಒಳ್ಳೆ ಪ್ರಚಾರ ನೀಡಿದವು.

ಇದೆಲ್ಲವೂ ಸೇರಿ, ಇಂದು ಆದಿವಾಸಿಗಳ ಪರಿಸ್ಥಿತಿ ಹಾಗೂ ಬಡಜನರ ಭೂಮಿ ಹಕ್ಕಿನ ಹೋರಾಟ ಕೇವಲ ದಿಡ್ಡಳ್ಳಿಗೆ ಸೀಮಿತವಾಗಿ ಉಳಿದಿಲ್ಲ. ಆ ಚರ್ಚೆ ಕೊಡಗಿನ ಗಡಿ ದಾಟಿ ಇಡೀ ರಾಜ್ಯಕ್ಕೇ ವ್ಯಾಪಿಸುತ್ತಿದೆ.

**ಹೊಸತು :** ಭೂಮಿ ವಿಚಾರ ಬಹಳ ಬೇಗ ರಾಜಕೀಕರಣ ಆಗಿಬಿಡುತ್ತದೆ. ಈ ಸಂದರ್ಭದಲ್ಲಿ ಪ್ರಗತಿಪರರ ನಿಲುವೇನಾಗಬೇಕು ಎಂದು ಭಾವಿಸುತ್ತೀರಿ ?

**ಚೇತನ್ :** ಹೌದು, ಭೂಮಿ ವಿಚಾರ ಬೇಗ ಸಂಕೀರ್ಣಗೊಳ್ಳುತ್ತದೆ. ಏಕೆಂದರೆ, ಭೂಮಿ ಪ್ರಶ್ನೆ ಬಹಳ ಮೂಲಭೂತವಾದ ವಿಚಾರ. ಇಂದಿಗೂ ಭಾರತದಲ್ಲಿ ೪೯% ಜನಸಂಖ್ಯೆ ಗ್ರಾಮೀಣ ಭಾಗದಲ್ಲಿ, ಕೃಷಿಯನ್ನೇ ಹೆಚ್ಚಾಗಿ ಅವಲಂಬಿಸಿ ಬದುಕಿದ್ದಾರೆ. ಅದೇ ಸಮಯದಲ್ಲಿ ನಗರ ಆರ್ಥಿಕತೆಯಲ್ಲಿ ಹೆಚ್ಚು ಸಂಪನ್ಮೂಲಗಳನ್ನು ತೊಡಗಿಸಲಾಗುತ್ತಿದೆ. ಇದು ಅಪಾಯಕಾರಿ. ಇಂದು ಕಾರ್ಪೊರೇಟ್‌ಗಳಲ್ಲಿ ದುಡ್ಡಿದ್ದರೆ ಅದಕ್ಕೆ ತೆರಿಗೆ ವಿಧಿಸಿ ಕೃಷಿಕ್ಷೇತ್ರಕ್ಕೆ ಕೊಡಬೇಕು. ಸಂಪನ್ಮೂಲಗಳನ್ನು ಎಲ್ಲಿ ಕೊರತೆಯಿದೆಯೋ ಅಲ್ಲಿಗೆ ಹರಿಸಬೇಕು.

ಈಗಿನ ಆರ್ಥಿಕ ಮಾದರಿಯಲ್ಲೇ ಸಮಸ್ಯೆಯಿದೆ. ೧% ಜನರ ಬಳಿ ೫೪-೫೮% ಆಸ್ತಿಯ ಒಡೆತನ ಇದೆ. ನಾವು ಪಕ್ಷಗಳನ್ನು ಬದಲಿಸುತ್ತೇವೆ. ಆದರೆ ಆರ್ಥಿಕ ಮಾದರಿ ಗಮನಿಸಿದಾಗ ನಮಗೆ ತಿಳಿಯುತ್ತದೆ, ಕಾಂಗ್ರೆಸ್, ಬಿಜೆಪಿ, ಜೆಡಿಎಸ್ ಎಲ್ಲವೂ ಒಂದೇ. ಆರ್ಥಿಕ ಸಮಾನತೆ ಬಹಳ ಮುಖ್ಯವಾದ ಸಂಗತಿ.

ಆರ್ಥಿಕ ಅಸಮಾನತೆ ಹೆಚ್ಚುತ್ತಲೇ ಇದ್ದರೆ, ಸಾಮಾಜಿಕವಾದ ಕಾರ್ಯಕ್ರಮಗಳನ್ನು ಘೋಷಿಸಿ ಪ್ರಯೋಜನವಿಲ್ಲ ! ಅವೆರಡನ್ನು ವಿಂಗಡಿಸಿ ನೋಡಲು ಸಾಧ್ಯವಿಲ್ಲ. ಆದ್ದರಿಂದಲೇ ಈಗಲೂ ಬಡವರಾಗಿದ್ದರೆ ಸವಲತ್ತುಗಳನ್ನು ದಕ್ಕಿಸಿಕೊಳ್ಳುವುದು ಕಷ್ಟ; ಬಡವರಾಗಿ ದಲಿತರಾಗಿದ್ದರೆ ಇನ್ನೂ ಕಷ್ಟ ; ಬಡವರೂ, ದಲಿತರೂ ಆಗಿ ಮಹಿಳೆಯರಾಗಿದ್ದರಂತೂ ತೀರಾ ಕಷ್ಟ !!

**ಹೊಸತು :** ಜನವಿರೋಧಿ ರಾಜಕೀಯ ಪಕ್ಷಗಳೆ ನಮ್ಮನ್ನು ಆಳುತ್ತಿರುವ ದುರಂತದಲ್ಲಿ ನಾವಿದ್ದೇವೆ. ಇದನ್ನು ಸರಿಪಡಿಸಲು ಪ್ರಪಂಚದ ಬೇರೆಡೆಗಳಲ್ಲಿ ಹಲವು ಹೊಸ ಬಗೆಯ ರಾಜಕಾರಣದ ಮಾದರಿಗಳು ಬಂದಿವೆ. ಭಾರತದಲ್ಲಿ ಯಾಕೆ ಸಾಧ್ಯವಾಗಿಲ್ಲ ಎನ್ನುತ್ತೀರಿ ?

**ಚೇತನ್ :** ನನ್ನ ಅಬ್ಸರ್ವೇಶನ್ ಪ್ರಕಾರ, ಭಾರತದ ರಾಜಕಾರಣದಲ್ಲಿ ಒಂದು ಸಮಸ್ಯೆಯಿದೆ. ನಾವು ಅಸ್ಮಿತೆ ಮತ್ತು ಸಿದ್ಧಾಂತ ಎರಡನ್ನೂ ಒಂದೇ ಮಾಡಿಕೊಂಡು ಬಿಟ್ಟಿದ್ದೇವೆ. ಅಸ್ಮಿತೆ ನಮ್ಮ ಸಾಮಾಜಿಕ ರಾಜಕೀಯ ಜೀವನದ ಒಂದು ಅಂಶ. ಆದರೆ, ಸಿದ್ಧಾಂತ ಮುಖ್ಯ. ಅದರಲ್ಲೂ ಸಿದ್ಧಾಂತ ಎಂದರೆ ಹೇಳುವುದು, ಆಚರಿಸುವುದಲ್ಲ ಎಂಬಂತಹ ವಾತಾವರಣವೂ ಇದೆ. ವಾಸ್ತವದಲ್ಲಿ ನಾವು ಹೇಗೆ ಆಲೋಚಿಸುತ್ತೇವೆ, ಏನು ಮಾತಾಡುತ್ತೇವೆ ಮತ್ತು ಏನನ್ನು ಆಚರಿಸುತ್ತೇವೆ ಎಂಬುದರಲ್ಲಿ ಕನ್ಸಿಸ್ಟೆನ್ಸಿ ಇರಬೇಕು. ಭಾರತದ ಬಹುತೇಕ ರಾಜಕಾರಣಿಗಳಲ್ಲಿ ನನಗೆ ಈ ಕನ್ಸಿಸ್ಟೆನ್ಸಿಯ ಕೊರತೆ ಕಾಣುತ್ತದೆ.

ಇದು ಕೇವಲ ಭಾರತದ ವಿದ್ಯಮಾನವಲ್ಲ. ಅಮೇರಿಕದಲ್ಲೂ ಈ ಬಾರಿಯ ಅಧ್ಯಕ್ಷೀಯ ಚುನಾವಣೆಯ ಸಂದರ್ಭದಲ್ಲಿ ಡೆಮಾಕ್ರಟಿಕ್ ಪಕ್ಷದಿಂದ ಸ್ಪರ್ಧಿಸಲು ಬಯಸಿದ್ದ ಬರ್ನಿ ಸ್ಯಾಂಡರ್ಸನ್ ಅವರನ್ನು ಹಿಲರಿಯನ್ನು ಮುಂದಿಟ್ಟು ತುಳಿಯಲಾಯಿತು. ಸ್ಯಾಂಡರ್ಸನ್ ಅವರು ೫೫ ವರ್ಷಗಳಿಂದ ಜನಪರ ಹೋರಾಟಗಳನ್ನು ಮಾಡಿಕೊಂಡು ಬಂದಂತಹವರು. ಅವರಿಗೆ ಅವಕಾಶ ಸಿಕ್ಕಿದ್ದರೆ ಬಹುಶಃ ಟ್ರಂಪ್ ಗೆಲ್ಲುತ್ತಿರಲಿಲ್ಲ. ಈಗ ಟ್ರಂಪ್ ಗೆದ್ದಿರುವ ರೀತಿ ಮತ್ತು ಆತ ಅನುಸರಿಸಿದ ರೀತಿ ನೋಡಿ. ಸರ್ವಾಧಿಕಾರಿ ಜನಪ್ರಿಯತೆಯ ಅಪವಿತ್ರ ಮಿಶ್ರಣದ ನೀತಿಯ ಮಾದರಿ ಮುಂದಿಟ್ಟಿದ್ದಾನೆ. ಅಂದರೆ, ಜನಸಮುದಾಯಗಳ ಬಗ್ಗೆ





ಅತ್ಯಂತ ಸರ್ವಾಧಿಕಾರಿ ಧೋರಣೆ, ದ್ವೇಷದ ಭಾಷಣಗಳು, ಅದೇ ಸಮಯದಲ್ಲಿ ಈಗ ಜನರು ಬಯಸುತ್ತಿರುವಂತಹ ಆರ್ಥಿಕ ನೀತಿಗಳು – ಎಲ್ಲವೂ ಒಂದೇ ಪ್ಯಾಕೇಜ್‌ನಲ್ಲಿ ! ಇದು ಅತ್ಯಂತ ಅಪಾಯಕಾರಿ ಮಿಶ್ರಣ !!

ಇಲ್ಲಿ ಹಿಲರಿಯನ್ನು ಮಹಿಳಾ ಅಸ್ಮಿತೆಯ ಪ್ರತಿನಿಧಿ ಎಂದು ನೋಡಲು ಸಾಧ್ಯವೇ ? ಆದ್ದರಿಂದ ಸಿದ್ಧಾಂತ ವನ್ನು ಅಸ್ಮಿತೆಯೊಂದಿಗೆ ಗೊಂದಲಗೊಳಿಸಬಾರದು. ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ – ಎಲ್ಲಾ ರೀತಿಯ ಬದ್ಧತೆ ಇದ್ದಾಗ ಮಾತ್ರ ಬಹುಸಂಖ್ಯಾತರು ನಮ್ಮೊಂದಿಗೆ ಬರುತ್ತಾರೆ.

**ಹೊಸತು :** ನಮ್ಮಲ್ಲಿ ಸಾಮಾನ್ಯವಾಗಿ ಚಿತ್ರನಟರು ಅಂದಕೂಡಲೇ ಅವರಿಗೆ ಹೆಚ್ಚು ವಿಚಾರವಂತಿಕೆ ಇರುವುದಿಲ್ಲವೇನೋ ಎಂಬ ಅನುಮಾನದಲ್ಲೇ ನೋಡ ಲಾಗುತ್ತದೆ. ಇಷ್ಟು ಹೊತ್ತು ನೀವು ಮಾತನಾಡುವುದು ನೋಡಿದಾಗ, ನಿಮ್ಮ ತಿಳುವಳಿಕೆಯ ಹರಹು ಬಹಳ ವಿಸ್ತಾರವಾಗಿರುವುದು ಗೊತ್ತಾಗುತ್ತದೆ. ಇದು ಹೇಗೆ ಸಾಧ್ಯವಾಯಿತು ?

**ಚೇತನ್ :** ಕುಟುಂಬದ ವಾತಾವರಣದ ಜೊತೆ ಅಮೇರಿಕಾದಲ್ಲಿ ಸಿಕ್ಕಿದ ಉನ್ನತ ಶಿಕ್ಷಣದ ಪರಿಣಾಮ ಇರಬಹುದು. ಅಮೇರಿಕಾದಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳು ಅತ್ಯುತ್ತಮವಾಗಿವೆ. ನನ್ನ ಪ್ರೌಢಶಿಕ್ಷಣದ ನಂತರ ಯೇಲ್ ಯೂನಿವರ್ಸಿಟಿಗೆ ಸೇರಿದೆ. ಅದೊಂದು ಅಸಾಮಾನ್ಯವಾದಂತಹ ಲೋಕ. ವೈದ್ಯಕೀಯ ಪದವಿಯ ಸೀಟ್ ಸಿಕ್ಕಿದ್ದರೂ ನನ್ನ ಮನಸ್ಸು ಲಿಬರಲ್ ಆರ್ಟ್ಸ್ ಕಡೆಗೆ ತುಡಿಯುತ್ತಿತ್ತು. ಮನೆಯಲ್ಲಿ ಕೇಳಿದಾಗ, "ವೈದ್ಯವೃತ್ತಿ ಏನಿದ್ದರೂ ಸ್ವಲ್ಪ ವ್ಯಾಪಾರದಂತಾಗಿ ಬಿಟ್ಟಿದೆ, ವಿಶ್ವವಿದ್ಯಾಲಯಕ್ಕೇ ಹೋಗು, ಸಂಪೂರ್ಣ ಮನೋವಿಕಾಸ ಸಾಧ್ಯವಾಗುತ್ತದೆ" ಎಂದು ಬೆಂಬಲಿಸಿದರು, ಅಲ್ಲಿ ಇತಿಹಾಸ, ಸಾಹಿತ್ಯ, ಮಾನವಶಾಸ್ತ್ರ , ರಂಗಭೂಮಿ, ಮಹಿಳಾ ಅಧ್ಯಯನ – ಎಲ್ಲವನ್ನೂ ಒಂದೊಂದು ಕೋರ್ಸ್ ಆರಿಸಿಕೊಂಡು ಪದವಿ ಮಾಡಲು ಅವಕಾಶ ಇತ್ತು; ನಾನು ಅದನ್ನೇ ಮಾಡಿದೆ. ಈ ಎಲ್ಲವೂ ಸೇರಿದರೆ ದಕ್ಷಿಣ ಏಷಿಯನ್ ಅಧ್ಯಯನದ ಚೌಕಟ್ಟು ಪೂರ್ಣವಾಗುತ್ತದೆ ಎಂಬ ಆಶಯದಿಂದ.

ವಿಶೇಷವಾಗಿ ರಂಗಭೂಮಿ ಮತ್ತು ಕಲೆ ನನ್ನ ಅತ್ಯಂತ ನೆಚ್ಚಿನ ವಿಷಯಗಳು. ಕೊನೆ ವರ್ಷದಲ್ಲಿ ಅದನ್ನೇ ಮಾಡಿ, ಪ್ರಾಯೋಗಿಕ ಪ್ರಬಂಧ ಮಂಡಿಸಿದೆ. ಅದರ ವಿಷಯ 'ಕರ್ನಾಟಕದಲ್ಲಿ ಕಲೆಯ ಮೂಲಕ ಕ್ರಾಂತಿ–ಪಶ್ಚಿಮ ಬಂಗಾಳದ ರುಸ್ತುಂ ಭರೂಚಾ ಅನುಭವದ ಮೂಲಕ ಕಂಡಂತೆ' !

ಇದರ ನಂತರ ಅಮೇರಿಕದಿಂದ ಭಾರತಕ್ಕೆ ನನಗೆ 'ಫುಲ್ ಬ್ರೈಟ್ ಸ್ಕಾಲರ್‌ಶಿಪ್' ಸಿಕ್ಕಿತು.

ಯೇಲ್ ವಿಶ್ವವಿದ್ಯಾಲಯ ಈಸ್ಟ್ ಇಂಡಿಯಾ ಕಂಪನಿಯಿಂದ ಪ್ರಯೋಜನ ಪಡೆದು ರೂಪುಗೊಂಡಿದ್ದರೂ ಈಗ ವಸಾಹತುವಿರೋಧಿ ಮೌಲ್ಯಗಳನ್ನೇ ಹರಡುತ್ತಿದೆ. ಅಲ್ಲಿನ ಪ್ರಾಧ್ಯಾಪಕರೂ ಅಷ್ಟೇ ಆಳವಾದ ಜೀವಪರ ಅಧ್ಯಯನದ ಆಸಕ್ತಿಗಳನ್ನು ಉಳ್ಳವರು. ನನ್ನ ಒಬ್ಬರು ಪ್ರೊಫೆಸರ್ ಬಾರ್ನಿ ಬೇಡ್. ಅವರು ಬಿಳಿಯರು. ಆದರೆ ತಮಿಳು ಮಾನವಶಾಸ್ತ್ರಜ್ಞ ! ಅವರು ಬೋಧಿಸುತ್ತಿದ್ದ ವಿಷಯ 'ಸಮಕಾಲೀನ ದಕ್ಷಿಣ ಏಷಿಯಾ ಮತ್ತು ಜೆಂಡರ್, ಮಾಧ್ಯಮ ಅಧ್ಯಯನ'. ಇಲ್ಲಿ ಲಿಂಗ ತಾರತಮ್ಯದ ಕುರಿತು ಸಾಕಷ್ಟು ಕಲಿತೆ. ಮತ್ತೊಬ್ಬರು ಅಲ್ ಮುಕ್ತಾರ್ ಗ್ಯಾಂಬೋ. ಇವರು ಮೊರಕ್ಕೋಯಿಂದ ಬಂದಿದ್ದರು. ಫ್ರೆಂಚ್ ಭಾಷಾ ತಜ್ಞರು. ವಸಾಹತೋತ್ತರ ಸಾಹಿತ್ಯದ ಬಗ್ಗೆ ಕಲಿಸುತ್ತಿದ್ದರು. ಇದರಲ್ಲಿ ಭಾರತ ಮಾತ್ರವಲ್ಲದೆ ದಕ್ಷಿಣ ಆಫ್ರಿಕಾ ಮತ್ತು ಲ್ಯಾಟಿನ್ ಅಮೇರಿಕಾದ ಬರಹಗಾರರ ಬಗ್ಗೆ ಕಲಿಯುತ್ತಿದ್ದೆವು. ಚಿನುವಾ ಅಚಿಬೆ ಮೊದಲಾದವರ ಬರಹ ಓದಿದ ಪ್ರಭಾವದಿಂದ ನಮ್ಮ ನಮ್ಮ ವರ್ನಾಕ್ಯುಲರ್ (ಸ್ಥಾನೀಯ ಭಾಷೆ ಅಥವಾ ಸಮುದಾಯಗಳ ಭಾಷೆ) ಉಳಿಸಿ ಕೊಳ್ಳುವುದು, ಬೆಳೆಸುವುದು ಹೇಗೆ ಎಂಬ ವಿಚಾರ ನಮ್ಮೆಲ್ಲರ ತಲೆಯಲ್ಲೂ ಮೂಡಿತ್ತು.

**ಹೊಸತು :** ಹಾಗಾದರೆ ಕರ್ನಾಟಕವನ್ನೇ ಹುಡುಕಿಕೊಂಡು ಬರುವುದಕ್ಕೆ ಈ ಅಂಶವೂ ಕಾರಣವಾಗಿರಬಹುದು ?

**ಚೇತನ್ :** ಹೌದು. ಕರ್ನಾಟಕದೊಂದಿಗೆ ಬಾಲ್ಯದ ನಂಟಿದ್ದದ್ದು ಒಂದು ವಿಚಾರ. ಅದಕ್ಕಿಂತ ಹೆಚ್ಚಾಗಿ ನನ್ನಲ್ಲೇ ಒಂದು ಕನ್ನಡದ ಅಸ್ಮಿತೆಯೂ ರೂಪುಗೊಳ್ಳುತ್ತಿತ್ತು ಅನ್ನಿಸುತ್ತದೆ. ಮನೆಯಲ್ಲಿ ಕನ್ನಡ ವಾತಾವರಣ, ಇಂಗ್ಲಿಷ್ ಜ್ಞಾನ ಎರಡೂ ಇತ್ತು. ಭಾರತಕ್ಕೆ ಬಂದಾಗೆಲ್ಲಾ ನನಗೆ ವಿಶೇಷ ಅನ್ನಿಸುತ್ತಿದ್ದ ವಿಚಾರ, ಇಲ್ಲಿ ೧೦ನೇ ತರಗತಿ ದಾಟದಿದ್ದರೂ ಸುಮಾರು ೭–೮ ಭಾಷೆಗಳ ಶ್ರೀಮಂತ ಭಾಷಾಜ್ಞಾನ ಪಡೆದಿರುತ್ತಾರೆ. ಆದರೆ, ಅಲ್ಲಿ ತುಂಬ ಓದಿ ಪುಸ್ತಕಗಳನ್ನು ಬರೆದು ಪ್ರಕಟಿಸಿದರೂ, ಎಲ್ಲಾ ಇಂಗ್ಲಿಷ್; ಬದುಕೇ ಇಂಗ್ಲಿಷ್‌ಮಯ ! ಇದೇಕೋ ಸರಿ ಹೋಗುತ್ತಿರಲಿಲ್ಲ.

ಅಲ್ಲದೆ, ಕನ್ನಡ ಪರಿಸರಕ್ಕೆ ಹೋಗಲು ವಿಶ್ವದ ಬೇರಾವುದೇ ದೇಶಕ್ಕೂ ಹೋಗಲು ಆಗುವುದಿಲ್ಲ; ಅದಕ್ಕೇ ಹಿಂತಿರುಗಿ ಬಂದೆ. ಇಲ್ಲಿ ಕನ್ನಡಕ್ಕಾಗಿ ಸಾಕಷ್ಟು ಕೆಲಸ ಆಗಬೇಕು. ಕನ್ನಡ ಅಷ್ಟೇ ಅಲ್ಲ, ತುಳು, ಕೊಡವ, ಕೊಂಕಣಿ, ಲಮಾಣಿ ಮೊದಲಾಗಿ ಭಾಷೆಗಳ ಸಂಪತ್ತನ್ನೂ ರಕ್ಷಿಸುವ ಅಗತ್ಯವಿದೆ. ಭಾಷೆ ಅಂದರೆ ಒಂದು ಸಾಂಸ್ಕೃತಿಕ ಜಗತ್ತು.

**ಹೊಸತು :** ಮುಂದೆ ಏನು ಮಾಡಬೇಕೆಂದಿದ್ದೀರಿ ?

**ಚೇತನ್ :** ಜನಪರ ಹೋರಾಟಗಳ ಜೊತೆ ಸಾಂಗತ್ಯ ಮುಂದುವರಿದೇ ಇರುತ್ತದೆ. ಜೊತೆಗೆ ಚಿತ್ರರಂಗದ ಸುಧಾರಣೆಯ ಕೆಲಸಕ್ಕೂ ನಾವೊಂದಷ್ಟು ಮಂದಿ ಸೇರಿ ಕೈ ಹಾಕಿದ್ದೇವೆ. ೩W ಅಂತ ಈ ಪರಿಕಲ್ಪನೆ. Women, Writers, Worker – ಈ ಮೂರೂ ಅಂಗಗಳನ್ನು ಬಲಗೊಳಿಸಬೇಕು. ಅದಕ್ಕಾಗಿ ಮೊದಲು ಮಹಿಳೆಯರನ್ನು ಕೀಳಾಗಿ ನೋಡುವುದು, ಲೈಂಗಿಕ ಕಿರುಕುಳ ನಿಲ್ಲಬೇಕು. ಬರಹಗಾರರ ಬಳಗಗಳು ರೂಪುಗೊಂಡು ಚಿತ್ರರಂಗಕ್ಕೆ ಒಳ್ಳೆಯ ಕಥೆಗಳು ಸಿಗುವಂತಾಗಲು ಸ್ಕ್ರಿಪ್ಟ್ ರಿಜಿಸ್ಟ್ರೇಷನ್ ಆರಂಭವಾಗಬೇಕು. ಹಾಗೆಯೇ ಸಹನಟ–ನಟಿಯರು ಹಾಗೂ ಕಾರ್ಮಿಕರಿಗೆ ಭದ್ರತೆ ಸಿಗಬೇಕು. ಈ ಮೂರೂ ದಿಕ್ಕಿನಲ್ಲಿ ಪ್ರಯತ್ನ ಸಾಗಿದೆ. ಒಳ್ಳೆಯ ಸ್ಪಂದನೆ ಸಿಗುತ್ತದೆ ಎಂಬ ನಿರೀಕ್ಷೆ ಇದೆ.

**ಹೊಸತು :** ಸಿನಿಮಾ ಕ್ಷೇತ್ರದ ಬಗ್ಗೆ ಏನು ಹೇಳುತ್ತೀರಿ ?

**ಚೇತನ್ :** ನನ್ನ ಪ್ರಕಾರ ಸಿನಿಮಾ ಒಂದು ಜನಪರ ಕಲೆ. ಅದೇ ಭಾವನೆಯಿಂದ ನಾನು ಈ ಕ್ಷೇತ್ರದಲ್ಲಿ ತೊಡಗಿಸಿಕೊಂಡೆ. ಆದರೆ ಇದು ಬಿಸಿನೆಸ್ ರೀತಿ ಆಗಿದೆ. ಇದನ್ನು ಬದಲಾಯಿಸಬೇಕು. ಸಿನಿಮಾ ರಂಗದಲ್ಲೂ ತಾರತಮ್ಯ ಇದೆ. ಜಾತಿ ಅಥವಾ

**ಅಭಿನಂದನೆಗಳು .............**

ರಾಷ್ಟ್ರಕವಿ ಡಾ॥ ಜಿ. ಎಸ್. ಶಿವರುದ್ರಪ್ಪ ಅವರ ಹೆಸರಿನಲ್ಲಿ ನೀಡುವ ಈ ಸಾಲಿನ 'ಜಿ. ಎಸ್. ಎಸ್. ಪ್ರಶಸ್ತಿ'ಯು ವಿಮರ್ಶಕರಾದ ಎಸ್. ಆರ್. ವಿಜಯಶಂಕರ್ ಅವರಿಗೆ ಲಭಿಸಿದೆ. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಧರ್ಮದ ತಾರತಮ್ಯವೂ ಇರಬಹುದು; ಲಿಂಗ ತಾರತಮ್ಯ ತುಂಬ ಇದೆ. ಇದನ್ನು ಬದಲಿಸುವುದು ನಮ್ಮೆಲ್ಲರ ಹೊಣೆಗಾರಿಕೆ.

**ಹೊಸತು :** ನಿಮಗೆ ಮಾದರಿ ವ್ಯಕ್ತಿತ್ವ ಅಂದರೆ ಯಾರನ್ನು ನೆನಪು ಮಾಡಿಕೊಳ್ಳುತ್ತೀರಿ ?

**ಚೇತನ್ :** ತುಂಬ ಜನ ಇದ್ದಾರೆ; ಅಮೇರಿಕಾದ ಕಪ್ಪು ಹೋರಾಟಗಾರರಾದ ಫ್ರೆಡರಿಕ್ ಡಗ್ಲೆಸ್, ಜಿಮ್ ಥಾರ್ಪ್ ಮೊದಲಾದವರಿಂದ ಹಿಡಿದು, ಭಾರತದಲ್ಲಿ ವಚನಕಾರರು, ಬಿಜಾಪುರವನ್ನು ಆಳಿದ ರಾಜ ಇಬ್ರಾಹಿಂ, ಬಾಬಾಸಾಹೇಬರು, ಸಾವಿತ್ರಿಬಾಯಿ ಮತ್ತು ಜ್ಯೋತಿಬಾ ಫುಲೆ, ಫಾತಿಮಾ ಶೇಕ್, ಗಾಂಧೀಜಿ, ಮೇಧಾ ಪಾಟ್ಕರ್, ಇರೋಮ್ ಶರ್ಮಿಳಾ ಮತ್ತು ಎಲ್ಲ ಪ್ರಾಮಾಣಿಕ ಜನಪರ ಹೋರಾಟಗಾರರು ನನಗೆ ಆದರ್ಶ. ಸರ್ವಜ್ಞ ಹೇಳುವಂತೆ 'ಸರ್ವರೊಳಗೊಂದೊಂದು ನುಡಿಗಲಿತು...' ಎಂಬಂತೆ ಇವರೆಲ್ಲರಲ್ಲೂ ಸರಿಯೆನ್ನಿಸಿದ್ದನ್ನು ಅಳವಡಿಸಿಕೊಳ್ಳಬೇಕು.

**ಹೊಸತು :** ಈ ಸಾಮಾಜಿಕ ವ್ಯವಸ್ಥೆಯನ್ನು ಸರಿ ಪಡಿಸಬಹುದು ಎಂಬ ವಿಶ್ವಾಸ ?

**ಚೇತನ್ :** ಖಂಡಿತ ! ಎಲ್ಲಾ ಸಮಸ್ಯೆಗಳೂ ಒಂದರೊಳಗೊಂದು ಹೆಣೆದು ಕೊಂಡಿರುವಂಥದ್ದು; ಜೇಡರ ಬಲೆಯಂತೆ. ಯಾವುದಾದರೂ ಒಂದರಲ್ಲಿ ಭಾರೀ ಬದಲಾವಣೆ ಬಂದರೆ ಉಳಿದೆಲ್ಲವೂ ಸರಪಳಿಯಂತೆ ಸರಿಹೋಗುತ್ತವೆ. ಅದಕ್ಕಾಗಿಯೇ ಆಳುವವರು ಇವುಗಳಲ್ಲಿ ಯಾವುದರಲ್ಲೂ ಮೂಲಭೂತ ಬದಲಾವಣೆ ತರಲು ಬಿಡುವುದಿಲ್ಲ, ಹಾಗೇನಾದರೂ ಪ್ರಯತ್ನಿಸಿದರೆ ಎಲ್ಲರೂ ಸೇರಿ ಮೇಲೆ ಬೀಳುತ್ತಾರೆ.

ಆದರೆ, ಜನರಿಂದ ಅಸಾಧ್ಯವಾದುದು ಯಾವುದೂ ಇಲ್ಲ. ರೋಜರ್ ಬ್ಯಾನಿಸ್ಟರ್ ಅಂತ ಒಬ್ಬ ಬ್ರಿಟಿಷ್ ಓಟಗಾರ. ಅದುವರೆಗೆ ೪ ನಿಮಿಷದಲ್ಲಿ ೧ ಮೈಲಿ (ಅಂದರೆ ೧೬೦೦ ಮೀ.) ಓಡುವುದು ಮನುಷ್ಯರಿಂದ ಸಾಧ್ಯವಿಲ್ಲ ಎಂದು ಭಾವಿಸಲಾಗಿತ್ತಂತೆ. ಒಂದು ಸ್ಪರ್ಧೆಯಲ್ಲಿ ರೋಜರ್ ೪ ನಿಮಿಷದಲ್ಲಿ ಆ ಅಂತರವನ್ನು ಓಡಿಬಿಟ್ಟ. ಆಸಕ್ತಿಕರವಾದ ಸಂಗತಿಯೆಂದರೆ, ಅವನು ಓಡಿ ದಾಖಲೆ ಮಾಡಿದ ಅದೇ ವರ್ಷ ಇನ್ನೂ ಹಲವು ಮಂದಿ ಆ ಅಂತರವನ್ನು ಅಷ್ಟೇ ಸಮಯದಲ್ಲಿ ಓಡಿ ಗುರಿ ಮುಟ್ಟಿದರಂತೆ. ಅಂದರೆ, ಇದು ನಮ್ಮಿಂದ ಸಾಧ್ಯ ಎಂಬ ದೃಢನಿಶ್ಚಯ ಮಾನವರಲ್ಲಿ ಹುಟ್ಟಬೇಕು ಅಷ್ಟೇ; ಆಗ ಖಂಡಿತ ಮಾಡುತ್ತೇವೆ !



ಸಂದರ್ಶನ ಸಿದ್ಧಪಡಿಸಿದವರು : **ಮಲ್ಲಿಗೆ**
ಕೇರಾಫ್. ಕರ್ನಾಟಕ ಜನಶಕ್ತಿ, ಹಳೇ ಪೌರವಾಣಿ ಕಟ್ಟಡ
೪ನೇ ಅಡ್ಡರಸ್ತೆ, ಅಶೋಕನಗರ, ಮಂಡ್ಯ

## ಸಾದರ ಸ್ವೀಕಾರ

**ಸ್ವಾಭಿಮಾನದ ಮದುವೆಗಳು** *ಮೂಲ : ಪೆರಿಯಾರ್*
*ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*
***ಪುಟ : xii + ೮೬ ಬೆಲೆ : ರೂ. ೭೦***

**ಎಸ್ಸಿ, ಎಸ್ಟಿ ಅನುದಾನ ಹಂಚಿಕೆ–ವಾಪಸಾತಿ**
*ತೆಲುಗು ಮೂಲ : ಬೊಜ್ಜಾ ತಾರಕಂ*
*ಕನ್ನಡಕ್ಕೆ : ಸುಜ್ಞಾನಮೂರ್ತಿ*
***ಪುಟ : xviii + ೧೦೨ ಬೆಲೆ : ರೂ. ೭೦***

**ಬಹುಜನ ಸಂಸ್ಕೃತಿವಾದ ಮತ್ತು ಲೇಖಕ**
*ಜಯಂತ ಪವಾರ*
*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*
***ಪುಟ : xii + ೪೬ = ೫೮ ಬೆಲೆ : ರೂ. ೪೦***

**ಮನುಸ್ಮೃತಿ – ಅಪರಾಧ ಶಿಕ್ಷೆ**
*ತೆಲುಗು ಮೂಲ : ಕೆ. ಬಾಲಗೋಪಾಲ್*
*ಅನು : ಬಿ. ಸುಜ್ಞಾನಮೂರ್ತಿ*
***ಪುಟ : xvi + ೧೨೪ ಬೆಲೆ : ರೂ. ೮೦***

**ಇಬ್ಬನಿಯ ಕಾವು** (ಲೇಖನಗಳು) *ಬಾನು ಮುಷ್ತಾಕ್*
***ಪುಟ : ೧೧೮ ಬೆಲೆ : ರೂ. ೯೦***

*ಮೇಲಿನ ಐದು ಪುಸ್ತಕಗಳ ಪ್ರಕಾಶಕರು*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಓದುವ ವೈಭವ – ನಕ್ಷತ್ರ ಕೊಟ್ಟ ಪುಸ್ತಕಗಳು**
*ಚೈತ್ರಾ ಅರ್ಜುನಪುರಿ*
***ಪುಟ : ೧೬ + ೧೮೪ = ೨೦೦ ಬೆಲೆ : ರೂ. ೧೬೦***
**ಶ್ರೀ ಸಿದ್ಧಾರೂಢ ಪ್ರಕಾಶನ,** ಕೆಂಗಲ್ ಹನುಮಂತಯ್ಯ ಬಡಾವಣೆ, ಮದ್ದೂರು – ೫೭೧ ೪೨೮, ಮಂಡ್ಯ ಜಿಲ್ಲೆ

**ಪುನರಪಿ** *ಕಾವ್ಯಾ ಕಡಮೆ ನಾಗರಕಟ್ಟೆ*
***ಪುಟ : ೧೬ + ೧೪೨ ಬೆಲೆ : ರೂ. ೧೩೦***
**ಪಲ್ಲವ ಪ್ರಕಾಶನ,** ಚನ್ನಪಟ್ಟಣ ಪೋಸ್ಟ್, ಎಮ್ಮಿಗನೂರು, ಬಳ್ಳಾರಿ – ೫೮೩ ೧೧೩

**ಅವಳ ಹೆಜ್ಜೆಯ ಹಾದಿ ಹಿಡಿದು** *ಇಂದಿರಾ ಕೃಷ್ಣಪ್ಪ*
***ಪುಟ : xvi + ೧೪೮ ಬೆಲೆ : ರೂ. ೧೧೫***
**ಪ್ರೊ|| ಬಿ. ಕೃಷ್ಣಪ್ಪ ಟ್ರಸ್ಟ್,** ಸಂ. ೨೫, ೩ನೇ ತಿರುವು, ೩ನೇ ವಾರ್ಡ್, ಸಂತೋಷ್ ನಗರ, ೨ನೇ ಹಂತ ಅಟ್ಟೂರು, ಯಲಹಂಕ, ಬೆಂಗಳೂರು – ೬೪

**ಚಿಲಿಪಿಲಿ** (ಮಕ್ಕಳಿಗಾಗಿ ಚುಟುಕುಗಳು)
*ಕಾಸರಗೋಡು ಅಶೋಕ್ ಕುಮಾರ್*
***ಪುಟ : ೪೮ ಬೆಲೆ : ರೂ. ೩೦***
**ಗಾಯತ್ರಿ ಪ್ರಕಾಶನ, ಐ.ಎಚ್. – ೫೯,** "ಗಾಯತ್ರಿ", ೨ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ಲ್ಯಾಂಡ್ ಲಿಂಕ್ಸ್, ದೇರೆಬೈಲು, ಕೊಂಚಾಡಿ, ಮಂಗಳೂರು–೫೭೫೦೦೮

**ನಿತ್ಯಸತ್ಯ** (೫೦೦ ಚುಟುಕುಗಳ ಸಂಗ್ರಹ) *ವಿಡಂಬಾರಿ*
***ಪುಟ : ೧೧೨ ಬೆಲೆ : ರೂ. ೮೦***
**ಕೆ. ಕೆ. ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್,** ೮೩೩/ಜಿ, ೬ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಹಂಪಿನಗರ, ಬೆಂಗಳೂರು – ೫೬೦ ೧೦೪

**ಮೌಢ್ಯಾಚರಣೆ ನಿಷೇಧ ಕಾಯ್ದೆ ಔಚಿತ್ಯ** (ತತ್ವಜ್ಞಾನ, ನ್ಯಾಯಶಾಸ್ತ್ರ ದೃಷ್ಟಿಯಿಂದ ವಿಶ್ಲೇಷಣೆ) ***ಕೋಚೆ***
***ಪುಟ : ೭೨ ಬೆಲೆ : ರೂ. ೪೦***
**ಶ್ರೀ ಅರವಿಂದ ಪ್ರಕಾಶನ,** ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ಮಹಾಲಕ್ಷ್ಮೀಪುರ, ಬೆಂಗಳೂರು–೮೬

**ದರಗಾ** *ಬಸವರಾಜ ಕೋಡಗುಂಟಿ*
***ಪುಟ : x + ೭೮ = ೮೮ ಬೆಲೆ : ರೂ. ೭೦***

**ಊರು** *ಬಸವರಾಜ ಕೋಡಗುಂಟಿ*
***ಪುಟ : x + ೮೬ = ೯೬ ಬೆಲೆ : ರೂ. ೭೦***

**ಪ್ರತಿಬಿಂಬ** (ಶಬ್ದಮಣಿದರ್ಪಣ ವಿವೇಚನೆ)
*ಎಂ. ಎಂ. ಕಲಬುರ್ಗಿ*
***ಪುಟ : vi + ೧೦೬ = ೧೧೨ ಬೆಲೆ : ರೂ. ೮೦***

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಪರಶುರಾಮ ಕೋಡಗುಂಟಿ, ಪ್ರಕಾಶಕ, ಬಂಡಾರ ಪ್ರಕಾಶನ,** ಮಸ್ಕಿ – ೫೮೪ ೧೨೪, ರಾಯಚೂರು ಜಿಲ್ಲೆ

**ಮಣ್ಣಿಗೆ ಬಿದ್ದ ಹೂಗಳು** (ಕವನ ಸಂಕಲನ)
*ಬಿದಲೋಟಿ ರಂಗನಾಥ್*
***ಪುಟ : xii + ೭೯ = ೯೧ ಬೆಲೆ : ರೂ. ೮೫***
**ನಿಶಾಂತ್ ಪ್ರಕಾಶನ,** ಬಿದಲೋಟಿ, ಹೊಳವನಹಳ್ಳಿ ಅಂಚೆ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ – ೫೭೨ ೧೨೧

**ಒಡಲ ನೂಲ ನೇಯ್ದು** ಎಂ. ಮಂಜುನಾಥ ಬಮ್ಮನಕಟ್ಟಿ
***ಪುಟ : ೨೪೮ + xxiv ಬೆಲೆ : ರೂ. ೨೫೦***

**ಮಿರ್ಚಿ–ಮಂಡಕ್ಕಿ** (ಅಂಕಣ ಬರಹಗಳು)
*ಎಂ. ಮಂಜುನಾಥ ಬಮ್ಮನಕಟ್ಟಿ*
***ಪುಟ : xiv + ೧೧೪ ಬೆಲೆ : ರೂ. ೧೨೦***

**ಶ್ರಮಜೀವಿ** (ಡಾ|| ದೊಡ್ಡರಂಗೇಗೌಡ ಅವರ ಗ್ರಾಮೀಣ ಪರಿಸರದ ಗೀತೆಗಳು) *ಸಂ. : ಎಂ. ಮಂಜುನಾಥ ಬಮ್ಮನಕಟ್ಟಿ*
***ಪುಟ : ೨೪೮ + xxiv ಬೆಲೆ : ರೂ. ೨೭೫***

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಧನ್ಯಾ ಪಬ್ಲಿಕೇಷನ್,** ಕೆ. ಸಿ. ರಾಣಿ ರಸ್ತೆ, ಗದಗ – ೫೮೨ ೧೦೧

# ಗಿಣಿ ಪಾಠ

ಪ್ರೊ॥ ಎಚ್. ಕೆ. ರಾಮಚಂದ್ರಮೂರ್ತಿ



'ಗಿಣಿ ಪಾಠ' – 'ಗಿಣಿ ಮಾತು' – ಈ ಶಬ್ದಗಳಿಗೆ ಈಗ ವಿಶಿಷ್ಟವಾದ ಅರ್ಥ ಬಂದಿದೆ. ಇನ್ನೊಬ್ಬರು ಹೇಳಿಕೊಟ್ಟ ಮಾತುಗಳನ್ನು 'ಮಕ್ಕಿಕಾ ಮಕ್ಕಿ' ಎನ್ನುವಂತೆ ಒಪ್ಪಿಸಿದಾಗ ಅದು ಗಿಣಿ ಪಾಠವಾಗುತ್ತದೆ.

ಬಹುಕಾಲದಿಂದ ಗಿಣಿಗಳನ್ನು ಮನೆಯಲ್ಲಿ ಸಾಕಿ ಅವುಗಳಿಗೆ ಮಾತುಗಳನ್ನು ಕಲಿಸಿ ಅವು ಮಾತನಾಡುವುದನ್ನು ಕೇಳಿ ಖುಷಿಪಡುವುದು ವಾಡಿಕೆ. ಆದರೆ ಹಿಂದೊಂದು ಕಾಲದಲ್ಲಿ ಗಿಣಿಗಳಿಗೆ ಬದಲಾಗಿ 'ಲಾರಿಕೀಟ್' ಎಂಬ ಹಕ್ಕಿಯನ್ನು ತಂದು ಮನೆಯಲ್ಲಿ ಸಾಕಿ ಅದಕ್ಕೆ ಮಾತು ಕಲಿಸುತ್ತಿದ್ದರು. ಇದು ಸಹ ಗಿಣಿಯ ಜಾತಿಯ ಕೆಂಪು ಬಣ್ಣದ ಹಕ್ಕಿ. ಅತ್ಯಂತ ಚುರುಕಾದ ಬುದ್ಧಿಯುಳ್ಳ ಈ ಹಕ್ಕಿ ಮನುಷ್ಯರು ಆಡಿದ ಮಾತನ್ನು ತಕ್ಷಣ ಕಲಿತು ಆಡುತ್ತದಂತೆ. ಇದರ ಬಗ್ಗೆ ಹಲವಾರು ಕಥೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಥೈಲೆಂಡಿನಲ್ಲಿ ಜನಪ್ರಿಯವಾಗಿರುವ ಕಥೆ ಇದು.

ಒಂದು ದಿನ ಒಬ್ಬ ರೈತ ತನ್ನ ಭತ್ತದ ಗದ್ದೆಯಲ್ಲಿ ನೆರೆಮನೆಯವರ ಎಮ್ಮೆಯೊಂದು ಅಡ್ಡಾಡುತ್ತಿರುವುದನ್ನು ನೋಡಿದ. ಅದನ್ನು ಹಿಡಿದು ತಂದು ಕಡಿದು ಮಾಂಸವನ್ನು ಸ್ವಲ್ಪ ತಿಂದು ಉಳಿದುದನ್ನು ಮುಚ್ಚಿಟ್ಟ. ಸ್ವಲ್ಪ ಭಾಗವನ್ನು ಭತ್ತದ ಕಣಜದಲ್ಲಿ ಉಳಿದುದನ್ನು ಬೇರೊಂದು ಗುಡಾಣದ ಮೇಲೆ ಯಾರಿಗೂ ಕಾಣದಂತೆ ಅಡಗಿಸಿಟ್ಟ.

ಮಾರನೆಯ ದಿನ ನೆರೆಮನೆಯಾತ ತನ್ನ ಎಮ್ಮೆಯನ್ನು ಹುಡುಕುತ್ತಾ ಬಂದು ಆ ರೈತನನ್ನು "ನನ್ನ ಎಮ್ಮೆಯನ್ನು ನೀನೇನಾದರೂ ನೋಡಿದೆಯಾ ?" ಎಂದು ಕೇಳಿದ.

> ನೀನು ಮನುಷ್ಯರಂತೆ ಮಾತನಾಡಬಲ್ಲೆಯೆಂದು ತಿಳಿದಾಗ ಅವನು ನಿನ್ನನ್ನು ಹಿಡಿದು ಪಂಜರದಲ್ಲಿಟ್ಟು ಸಾಕುತ್ತಾನೆ. ನೀನು ಅವನು ಹೇಳಿಕೊಟ್ಟ ಮಾತುಗಳನ್ನು ಮಾತ್ರ ಆಡಬೇಕು. ಮತ್ತೆ ಮತ್ತೆ ಅದೇ ಮಾತುಗಳನ್ನು ಆಡುತ್ತಿರು. ಯಾಕೆಂದರೆ ಮನುಷ್ಯರಿಗೆ ತಮ್ಮ ಯೋಚನೆಗಳನ್ನೂ, ಮಾತುಗಳನ್ನೂ ಮತ್ತೆ ಮತ್ತೆ ಕೇಳುವುದೆಂದರೆ ಅತಿ ಆಸೆ... ಅವನಿಗೆ ಬೇರೆಯವರು ಆಡುವ ಸತ್ಯ, ವಿವೇಕದ ಮಾತುಗಳು ಬೇಕಿಲ್ಲ.''

"ಇಲ್ಲ, ನಾನು ನೋಡಲಿಲ್ಲ – ನನಗೆ ಗೊತ್ತಿಲ್ಲ" ತಕ್ಷಣ ಆ ರೈತನ ಮನೆಯಲ್ಲಿದ್ದ ಲಾರಿಕೀಟ್ ಹಕ್ಕಿ ಬಡಬಡಿಸುತ್ತ, "ನನ್ನ ಯಜಮಾನ ಎಮ್ಮೆಯನ್ನು ಕಡಿದು ಮಾಂಸದ ಭಾಗಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಅಡಗಿಸಿಟ್ಟಿದ್ದಾನೆ" ಎಂದು ಹೇಳಿತು. ನೆರೆಮನೆಯಾತ ರೈತನ ಮನೆಯಲ್ಲಿ ಹುಡುಕಿ ತನ್ನ ಎಮ್ಮೆ ಮಾಂಸವನ್ನು, ಮುಚ್ಚಿಟ್ಟಿರುವುದನ್ನು ಪತ್ತೆ ಮಾಡಿದ. ರೈತ ಏನೂ ತಿಳಿಯದವನಂತೆ ನಟಿಸುತ್ತಾ, "ನಾನು ಯಾವಾಗಲೂ ತಿಂದು ಉಳಿದುದನ್ನು ಇಡುವುದೇ ಅಲ್ಲಿ. ನಿನ್ನ ಎಮ್ಮೆ ಬಗ್ಗೆ ನನಗೇನೂ ಗೊತ್ತಿಲ್ಲ. ಅದು ಬೇರೆ ಪ್ರಾಣಿಯ ಮಾಂಸ" ಎಂದು ದಬಾಯಿಸಿದ.

ಲಾರಿಕೀಟ್ ಮತ್ತೆ ವಟಗುಟ್ಟಿತು. "ನಿಮ್ಮ ಎಮ್ಮೆಯನ್ನು ಕೊಂದವನು ಇವನೇ. ತಿಂದು ಉಳಿದ ಭಾಗಗಳನ್ನು ನೀವು ನೋಡಿದ ಅದೇ ಸ್ಥಳದಲ್ಲಿ ಅಡಗಿಸಿಟ್ಟಿದ್ದಾನೆ."

ನೆರೆಮನೆಯಾತನಿಗೆ ದಿಗ್ಭ್ರಮೆಯಾಯಿತು. ರೈತನ ಮಾತನ್ನು ನಂಬಬೇಕೋ, ಹಕ್ಕಿಯ ಮಾತನ್ನು ನಂಬಬೇಕೋ ತಿಳಿಯದಾಯಿತು. ಆದ್ದರಿಂದ ಈ ವಿವಾದವನ್ನು ನ್ಯಾಯಾಲಯದ ಮುಂದಿಟ್ಟ. ಮಾರನೆಯ ದಿನವೇ, ವಿಚಾರಣೆ ಸಿದ್ಧವಾಯಿತು.

ಎಮ್ಮೆಯನ್ನು ಕದ್ದ ರೈತ "ಇದೇನು ಅನ್ಯಾಯ. ಇವನು ನನ್ನ ಮಾತನ್ನು ನಂಬಬೇಕೋ, ಹಕ್ಕಿಯ ಮಾತನ್ನು ನಂಬಬೇಕೋ ?" ಎಂದೆಲ್ಲಾ ಕೂಗಾಡಿದ.

ರೈತ ಪಂಜರದಿಂದ ಹಕ್ಕಿಯನ್ನು ತೆಗೆದು ಒಂದು ದೊಡ್ಡ ಅಗಲವಾದ ಪಾತ್ರೆಯಲ್ಲಿಟ್ಟು ಅದನ್ನು ಬಟ್ಟೆಯಿಂದ ಮುಚ್ಚಿದ, ಪಾತ್ರೆಯ ಒಳಗಡೆ ಕತ್ತಲಾಯಿತು. ಆಮೇಲೆ ಆ ಪಾತ್ರೆಯನ್ನು ಬೇರೆ ಬೇರೆ ರೀತಿಯಲ್ಲಿ ಬಡಿಯುತ್ತಾ ನೀರು ಚಿಮುಕಿಸುತ್ತಾ ಒಳಗಿದ್ದ ಹಕ್ಕಿಗೆ ಹೊರಗಡೆ ಜೋರಾಗಿ ಇಡೀ ರಾತ್ರೆ ಮಳೆ ಬೀಳುತ್ತಿರುವ, ಸಿಡಿಲುಗುಡುಗುಗಳು ಬರುತ್ತಿರುವ 'ಭ್ರಮೆ' ಕಲ್ಪಿಸಿದ. ಬೆಳಗಾದ ಮೇಲೆ ಹಕ್ಕಿಯನ್ನು ಪುನಃ ಪಂಜರದೊಳಕ್ಕೆ ಸೇರಿಸಿದ.

ನ್ಯಾಯಾಲಯದಲ್ಲಿ ವಿಚಾರಣೆಯ ಹೊತ್ತಿಗೆ ರೈತ ಹಕ್ಕಿಯನ್ನು ಜತೆಯಲ್ಲಿ ಕೊಂಡೊಯ್ದ. ನೆರೆಮನೆಯವ ನ್ಯಾಯಾಧೀಶನಿಗೆ ಎಮ್ಮೆಯನ್ನು ಕೊಂದ ರೈತ ಅದರ ಮಾಂಸದ ಭಾಗಗಳನ್ನು ಎಲ್ಲೆಲ್ಲಿ ಅಡಗಿಸಿಟ್ಟಿರುವ ಸಂಗತಿಯನ್ನು ತನಗೆ ರೈತನ ಮನೆಯ ಲಾರಿಕೀಟ್ ತಿಳಿಸಿರುವುದಾಗಿ ಹೇಳಿದ. ನ್ಯಾಯಾಧೀಶ ಹಕ್ಕಿಯನ್ನು ಪ್ರಶ್ನಿಸಲು ಅದು ಪುನಃ ತಾನು ಕಂಡ ಸತ್ಯವನ್ನೇ ಹೇಳಿತು. ಎಮ್ಮೆಯನ್ನು ಕೊಂದ ಬಳಿಕ ತಿಂದುಳಿದ ಭಾಗಗಳನ್ನು ಭತ್ತದ ಕಣಜದಲ್ಲೂ, ಗುಡಾಣದ ಹಿಂಬದಿಯಲ್ಲೂ ಅಡಗಿಸಿಟ್ಟಿದ್ದಾನೆಂದು ಸಾಕ್ಷ್ಯ ನುಡಿಯಿತು.

ರೈತ, ಅದು ಬೇರೆ ಪ್ರಾಣಿಯ ಮಾಂಸ. ಆದರೆ, ಮಹಾಸ್ವಾಮಿ! ನೀವು ನನ್ನ ಮಾತಿಗಿಂತ ಈ ದರಿದ್ರ ಮೂರ್ಖ ಹಕ್ಕಿಯ ಮಾತಿಗೆ ಹೆಚ್ಚು ಬೆಲೆ ಕೊಡುತ್ತಿರುವಿರಲ್ಲಾ, ಇದು ನ್ಯಾಯವೆ ? ಎಂದು ಜೋರು ಮಾಡಿದ.

"ಈ ಲಾರಿಕೀಟ್ ಹಕ್ಕಿಗೆ ಅಸಾಧಾರಣ ಚುರುಕು ಬುದ್ಧಿ ಇದೆ" ಎಂದು ನ್ಯಾಯಮೂರ್ತಿ.

‘ತಥ್’ ! ಈ ಹಕ್ಕಿ ತನಗೆ ತೋಚಿದುದನ್ನು ಬೊಗಳುತ್ತದೆ. ಸತ್ಯಕ್ಕಿಂತ ಸುಳ್ಳೇ ಹೆಚ್ಚು ಈ ಪ್ರಾರಬ್ಧ ಹಕ್ಕಿಗೆ ಇದನ್ನು ಪರೀಕ್ಷಿಸಲು ತಾವು ಬೇರೊಂದು ಪ್ರಶ್ನೆ ಹಾಕಿ ನೋಡಿ ನಿನ್ನೆ ರಾತ್ರೆ ಹವಾ ಹೇಗಿತ್ತು ಕೇಳಿ ನೋಡಿ !’ ಎಂದ.

ನ್ಯಾಯಾಧೀಶ ಅದೇ ಪ್ರಶ್ನೆ ಕೇಳಿದ. ಹಕ್ಕಿ ಹೇಳಿತು. ‘ರಾತ್ರೆ’ ವಿಪರೀತ ಕತ್ತಲು. ರಾತ್ರೆ ಇಡೀ (ಜೋರಾಗಿ) ಮಳೆ ಬಂತು – ಸಿಡಿಲು–ಗುಡುಗು ಭಯಂಕರವಾಗಿದ್ದವು.

ರೈತ ಹೇಳಿದ : ನಿನ್ನೆ ರಾತ್ರೆ ಕೂಡ ಪ್ರಶಾಂತ ಬೆಳದಿಂಗಳಿತ್ತು. ಹವಾ ಸೊಗಸಾಗಿತ್ತು. ಮಳೆ, ಸಿಡಿಲು–ಗುಡುಗು ಎಲ್ಲಿ ಬಂತು. ನೀವೇ ಹೇಳಿ ಸ್ವಾಮಿ. ಈ ಹಕ್ಕಿಯ ಅಸಂಬದ್ಧ ಮಾತುಗಳನ್ನು ನಂಬಿ ನನ್ನನ್ನು ಖಂಡಿಸುವುದು ಎಷ್ಟು ಸಮಂಜಸ...?

ನ್ಯಾಯಾಧೀಶ ಮತ್ತು ಅಲ್ಲಿ ಬಂದಿದ್ದವರಿಗೆಲ್ಲಾ ರೈತನ ಮಾತಿನಲ್ಲಿ ನಂಬಿಕೆಯುಂಟಾಯಿತು. ರೈತನು ನಿರಪರಾಧಿಯೆಂದು ಘೋಷಿಸಲಾಯಿತು. ಜನರೆಲ್ಲ ಹೇಳಿದರು : “ಇನ್ನು ಮೇಲೆ ಈ ಹಕ್ಕಿಯನ್ನು ಮನೆಯಲ್ಲಿಟ್ಟುಕೊಂಡು ಸಾಕುವುದಿಲ್ಲ.” ಲಾರಿಕೀಟ್ ಹಕ್ಕಿಯನ್ನು ಆಚೆ ಕಾಡಿಗೆ ಅಟ್ಟಲಾಯಿತು. ಎಂದಿನಂತೆ ಅದು ತನ್ನಪಾಡಿಗೆ ತಾನು ಕಾಡಿನಲ್ಲಿ ವಾಸವಾಗಿತ್ತು. ಒಂದು ದಿನ ಲಾರಿಕೀಟ್ ಹಕ್ಕಿ ಕಾಡಿನಲ್ಲಿ ಹೊಸದೊಂದು ಹಕ್ಕಿಯನ್ನು ಕಂಡಿತು. ಅದು ತನಗಿಂತ ದೊಡ್ಡ ಆಕಾರದ ಹಕ್ಕಿಯಾಗಿದ್ದು ಫಳಫಳ ಹೊಳೆಯುವ ಹಸಿರು ರೆಕ್ಕೆಗಳು ಮತ್ತು ಕೆಂಪು ಮೂತಿಯಿಂದ ರಾರಾಜಿಸುತ್ತಿತ್ತು. ಲಾರಿಕೀಟ್ ಈ ಹೊಸ ಹಕ್ಕಿಯೊಡನೆ ಮಾತುಕತೆ ಪ್ರಾರಂಭಿಸಿ, “ನೀನು ಯಾರು ?” ಎಂದು ಕೇಳಿತು.

ಆ ಹಕ್ಕಿ ಹೇಳಿತು : “ನಾನು ಗಿಣಿ. ನಾನು ದಕ್ಷಿಣ ದಿಕ್ಕಿನಿಂದ ಬಂದೆ. ಇನ್ನು ಇಲ್ಲೇ ವಾಸಿಸುತ್ತೇನೆ. ನಾನು ಮನುಷ್ಯರಂತೆಯೇ ಮಾತನಾಡಬಲ್ಲೆ.”

ಲಾರಿಕೀಟ್ ಹೊಸ ಹಕ್ಕಿಗೆ ಸ್ವಾಗತ ಬಯಸಿ, “ನೀನು ಇಲ್ಲಿಗೆ ಹೊಸಬ. ನನ್ನ ಬುದ್ಧಿವಾದವನ್ನೂ ಎಚ್ಚರಿಕೆಯನ್ನು ಗಂಭೀರವಾಗಿ ಪಾಲಿಸಬೇಕು ಕೇವಲ ನಿನ್ನ ಕ್ಷೇಮಕ್ಕಾಗಿ ತಿಳಿಯಿತೇ ? ನಾನೂ ಸಹ ಮನುಷ್ಯರ ಭಾಷೆಯಲ್ಲಿ ಮಾತನಾಡಬಲ್ಲೆ. ನನ್ನನ್ನು ಒಬ್ಬ ವ್ಯಕ್ತಿ ಬಹುಕಾಲ ಮನೆಯಲ್ಲಿಟ್ಟುಕೊಂಡು ಸಾಕಿದ. ನಾನು ನನ್ನ ಸ್ವಂತ ಕಣ್ಣುಗಳಿಂದ ನೋಡುತ್ತಿದ್ದೆ, ಸ್ವಂತ ಕಿವಿಗಳಿಂದ ಕೇಳಿಸಿಕೊಳ್ಳುತ್ತಿದ್ದೆ. ನಾನು ಮನುಷ್ಯ ಹೇಳಿಕೊಟ್ಟ ಮಾತುಗಳನ್ನು ಆಡುತ್ತಿದ್ದೆ. ಜತೆಗೆ ನನ್ನ ಮನಸ್ಸಿನಲ್ಲಿದ್ದುದನ್ನೂ ನುಡಿಯುತ್ತಿದ್ದೆ. ಆದರೆ ನನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದಾಗ ಮನುಷ್ಯನಿಗೆ ಕೋಪ ಬಂದು ಅತೃಪ್ತಿ, ಅಸಮಾಧಾನಗಳು ಉಂಟಾಗುತ್ತಿದ್ದವು. ನನ್ನನ್ನು ಮನೆಯಿಂದಾಚೆ ಅಟ್ಟಿದ, ಇದು ನಾನು ಕೊಡುವ ಎಚ್ಚರಿಕೆ, ಬುದ್ಧಿಯ ಮಾತು, ನೀನು ಮನುಷ್ಯರಂತೆ ಮಾತನಾಡಬಲ್ಲೆಯೆಂದು ತಿಳಿದಾಗ ಅವನು ನಿನ್ನನ್ನು ಹಿಡಿದು ಪಂಜರದಲ್ಲಿಟ್ಟು ಸಾಕುತ್ತಾನೆ. ನೀನು ಅವನು ಹೇಳಿಕೊಟ್ಟ ಮಾತುಗಳನ್ನು ಮಾತ್ರ ಆಡಬೇಕು. ಮತ್ತೆ ಮತ್ತೆ ಅದೇ ಮಾತುಗಳನ್ನು ಆಡುತ್ತಿರು. ಯಾಕೆಂದರೆ ಮನುಷ್ಯರಿಗೆ ತಮ್ಮ ಯೋಚನೆಗಳನ್ನೂ, ಮಾತುಗಳನ್ನೂ ಮತ್ತೆ ಮತ್ತೆ ಕೇಳುವುದೆಂದರೆ ಅತಿ ಆಸೆ... ಅವನಿಗೆ ಬೇರೆಯವರು ಆಡುವ ಸತ್ಯ, ವಿವೇಕದ ಮಾತುಗಳು ಬೇಕಿಲ್ಲ.”

ಗಿಣಿ ಈ ಮಾತುಗಳನ್ನು ಕೃತಜ್ಞತೆಯಿಂದ ಕಿವಿಗೊಟ್ಟು ಕೇಳಿತು. ಆಮೇಲೆ ಎಲ್ಲವೂ ಲಾರಿಕೀಟ್ ಹೇಳಿದಂತೆಯೇ ನಡೆಯಿತು. ಮನುಷ್ಯ ಗಿಣಿಯನ್ನು ಹಿಡಿದು ತಂದು ಅದಕ್ಕೆ ತನಗೆ ಬೇಕಾದುದನ್ನು ಮಾತ್ರ ಆಡುವ ಹಾಗೆ ಹೇಳಿಕೊಟ್ಟು ಸಾಕಿದ.

ಸಾಕಿದವನನ್ನು ಸಂತೋಷಪಡಿಸಲು ಅವನು ಎಂದೂ ಅಸಮಾಧಾನ ಪಡದಂತೆ ಗಿಣಿಗೆ ಅಂದಿನಿಂದ ಇಂದಿನವರೆಗೂ ಕಲಿಸಿದ ಮಾತುಗಳನ್ನು ಮಾತ್ರ (ಯಾಂತ್ರಿಕವಾಗಿ) ಮರು ಒಪ್ಪಿಸುವ ಪರಿಪಾಠ ಬೆಳೆಸಿಕೊಂಡಿತು.

*(ಥೈಲೆಂಡ್ ಜಾನಪದ ಲೋಕದಿಂದ)*

**ಪ್ರೊ॥ ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೦೨, ‘ಶರಾವತಿ ಪ್ಯಾಲೇಸ್’, ೩ನೇ ಅಡ್ಡರಸ್ತೆ, ಸಿ. ಆರ್. ಲೇಔಟ್
ಜೆ. ಪಿ. ನಗರ ೧ನೇ ಹಂತ, ಬೆಂಗಳೂರು – ೫೬೦ ೦೭೮

ಕಾವ್ಯಲೋಕ

# ಮುಕ್ತ – ಮುಕ್ತ



ಅವಳು ಕಪ್ಪೆಚಿಪ್ಪಿನೊಳಗೊಂದು
ಬಿಂದು ಜೀವಧಾರೆ
ಪಂಚವರ್ಣ, ತಪಸ್ಸಿಗೆ
ಒಲಿದಂತೆ ಮುತ್ತುಗಳು
ಒಂದೊಂದು ಸ್ವಾತಿಹನಿ
ಕಡಲ ಕಾಲಗರ್ಭದಲ್ಲಿ ಅವಿತು
ಯಾರಿಗೂ ತಿಳಿಯದ ಹಾದಿಯಲ್ಲಿ
ಬೆಳಕಾಯ್ತು !...
ಎಚ್ಚೆತ್ತ ! ಅವಳು ಪಾತಾಳವೆಲ್ಲಾ
ತದಕಿ ಮುತ್ತುಗಳ ಎಣಿಸಿ
ಪೋಣಿಸಿ ಮಾಲೆ ಧರಿಸಿ
ಕಡಲ ಅಲೆಅಲೆಗಳ ನಡುವೆ
ಶೃಂಗಾರ ಗೀತೆ ಹಾಡಿದಳು.
ಕ್ಷೀರಸಾಗರವನ್ನೆ ಅಪ್ಪಿದಳು
ಮುದ್ದಾಡಿದಳು ಮಂಥನದಿಂದೆದ್ದ
ಹಾಲಾಹಲವನ್ನೆ ಕುಡಿದು ತೇಗಿದಳು.
ಸೂರ್ಯ ಚಂದ್ರರ ನುಂಗಿದಳು
ನಕ್ಷತ್ರಗಳ ಕೈಯಲ್ಲಿ ಹಿಡಿದು
ತನ್ನ ಕೇಶರಾಶಿಗೆ ಸವರಿದಳು
ಮೇಘಗಳನ್ನೊಮ್ಮೆ ಸ್ಪರ್ಶಿಸಿದಳು
ವರ್ಷಧಾರೆ ಓಕುಳಿ ಹಾಡಿತು !
ಈಗ...
ಅವಳು ತಾಯಿ
ತೊಟ್ಟಿಲು ತೂಗುವವಳು
ಅವಳ ಎದೆಗೂಡಲ್ಲಿ
ಎಲ್ಲೋ ನೋವುಗಳ ಸಪ್ಪಳ
ಸತ್ತವರ ಅತ್ತವರ ಎರಡೂ
ಕೈ ಚಾಚಿ ಅಮ್ಮಾ ಎಂದವರ
ಕೂಗೂ !...
ಅರೆಸತ್ತ ತೊಗಲು ಅಂಗಿಗಳ
ತೊಟ್ಟ ಕಂದಮ್ಮಗಳ
ಜೀವವಿಲ್ಲದ ಲಾಲಿ ಹಾಡು !..
ಬೇಸತ್ತ ಅವಳ ಮನಸ್ಸು ಕಲ
ಗಿಲಕಿ ಆಡಿತು – ಆಡಿತು...
ಭೂಮಿ ಆಕಾಶದಗಲ ! ಅವ
ಒಮ್ಮೆ ಕೇಶರಾಶಿಯ ಬಿಡಿಸಿ
ನಕ್ಷತ್ರ ರಾಶಿಯ ಹರಿಬಿಟ್ಟಳು
ಆ ನಕ್ಷತ್ರಗಳು ನೊಂದವರಲ್ಲಿ
ಮನೆ ಮಾಡಿ ಸಾಂತ್ವನ ಹೇಳ
ತಾಯಿ ಕರುಳು ಹೂವಾಗಿ
ನಗುವಾಗಿ ಅರಳಿತು.

**ಆರ್. ಹಂಸಾ**
‘ಅನ್ನಪೂರ್ಣ ನಿಲಯ’, ನಂ. ೬೭೩/ಎ, ‘ಡಿ’ ಬ್ಲಾಕ್,
ಒಂದನೇ ಮುಖ್ಯರಸ್ತೆ, ೨ನೇ ಹಂತ ರಾಜಾಜಿನಗರ,
ಬೆಂಗಳೂರು– ೫೬೦೦೧೦

ಸ್ಮಿತಾ ಅಮೃತರಾಜ್. ಸಂಪಾಜೆ



# ಮಳೆಯೆಂದರೆ... ಬರಿ ಮಳೆಯಲ್ಲ...

**ಸು**ಡುವ ಧಗೆಗೆ ಆಕಾಶಕ್ಕೆ ಮುಖ ಕೊಟ್ಟು ಬಾ ಮಳೆಯೇ.. ಬಾ... ಅಂತ ಹಲುಬದ ಜೀವಗಳೇ ಇಲ್ಲ ಎನ್ನಬಹುದು. ಹಾಯ್ ಎನ್ನಿಸುವ ತಂಪು ತಂಪು ಗಾಳಿ, ತುಂತುರು ಹನಿಗಳೆಲ್ಲಾ ಲಯಬದ್ಧವಾಗಿ ಧಾರಾಕಾರವಾಗಿ ಸುರಿಯುವ ಪರಿಗೆ ಮೈಯೊಡ್ಡಿಕೊಂಡು ನಿಂತ ಪ್ರಕೃತಿ. ಗತಕಾಲದ ಚಿತ್ರಗಳೆಲ್ಲಾ ಸೂರಿನಡಿಯಲ್ಲಿ ದೋ ಎಂದು ಸುರಿಯುವ ಮಳೆಯ ಚಿತ್ರಣ ಒಂದು ಕಡೆಯಾದರೆ, ಮಳೆ ಬರುವ ಮುಂಚೆ ಅಬ್ಬರಿಸುವ ಗುಡುಗು, ಅಪ್ಪಳಿಸುವ ಸಿಡಿಲು ಇವುಗಳು ಆ ಕ್ಷಣಕ್ಕೆ ಬಂದೆರಗುವ ಭಯಾನಕ ಸನ್ನಿವೇಶಗಳಾದರೂ ತದನಂತರ ಇವುಗಳ ಬಗ್ಗೆ ಯಾರೂ ಯಾಕಾಗಿ ಅಷ್ಟೊಂದು ಗಂಭೀರವಾಗಿ ಪರಿಗಣಿಸುವುದಿಲ್ಲವೋ ನಾ ಕಾಣೆ. ಗುಡುಗು-ಮಿಂಚುಗಳು ಹುಟ್ಟಿಸುವ ಭಯ-ಆತಂಕ, ಅಪಘಾತಗಳೆಲ್ಲವನ್ನೂ ಅದು ಹೇಗೆ ನಿಶ್ಚಿಂತವಾಗಿ ಸುರಿಯುವ ಮಳೆ ನಿರಾತಂಕವಾಗಿ ತೊಡೆದುಹಾಕುತ್ತದೆ ಎಂಬುದನ್ನು ನೆನೆದರೆ ಈಗಲೂ ಅಚ್ಚರಿಯಾಗುತ್ತದೆ.

ನಮ್ಮದು ಬಂಟಮಲೆಯೆಂಬ ಮಹಾ ಕಾನನದ ತಪ್ಪಲಿನಲ್ಲಿರುವ ಊರು. ಸೆಖೆಗೆ ಬಸವಳಿದು ಬೆಂಡಾಗಿರುವ ಹೊತ್ತಲ್ಲಿ ಇಲ್ಲಿ ಮಳೆ ಸುರಿಯಿತೆಂಬ ಸಂತಸ ಒಂದು ಕಡೆಯಾದರೆ, ಹೇಳದೆ ಕೇಳದೆ ಅಚಾನಕ್ಕಾಗಿ ಅಪ್ಪಳಿಸುವ ಗುಡುಗು-ಸಿಡಿಲುಗಳ ಪೌರುಷ ಇನ್ನೊಂದು ಕಡೆ. ಅದನ್ನು ಪ್ರತ್ಯಕ್ಷ ಅನುಭವಿಸಿದವರಿಗಷ್ಟೇ ಗೊತ್ತು. ಅದಕ್ಕೆ ಪೂರಕವೆಂಬಂತೆ ಎಳವೆಯಲ್ಲಿ ನಮ್ಮ ಕಿವಿ ತುಂಬಿಹೋಗಿದ್ದ ಕತೆಗಳನ್ನು ಆಗಾಗ್ಗೆ ಮೆಲುಕು ಹಾಕಿದ್ದ ಕಾರಣ ಗುಡುಗು-ಸಿಡಿಲೆಂದರೆ ಒಬ್ಬೊಬ್ಬರೇ ಇರುವ ಹೊತ್ತಲ್ಲಿ... ಅಬ್ಬಾ! ಆ ಅನುಭವ ಭಯಾನಕವಾಗಿರುತ್ತಿತ್ತು.

ಸರಿ ನೆನಪಿದೆ. ಒಮ್ಮೆ ಬಾಲ್ಯದಲ್ಲಿ ಜೋರಾಗಿ ಸುರಿದ ಮಳೆ ಜಿಡಿಗುಟ್ಟಿ ಹೊಯ್ಯುತ್ತಿತ್ತು. ಅದು ಎಂಥ ಮಳೆಯೆಂದರೆ, ಅದರ ಜೊತೆಗೆ ರಭಸವಾಗಿ ಬೀಸುವ ಗಾಳಿ ಬೇರೆ. ಜೊತೆಗೆ ಬೆಂಕಿಯಂತೆ ಹಾಯುವ ಸಿಡಿಲ ಮಿಂಚು. ಇನ್ನೇನು ಮನೆಯ ಮಾಡಿನ ಹೆಂಚುಗಳೆಲ್ಲಾ ಹಾರಿ ಹೋಗುತ್ತವೆಯೇನೋ ಅನ್ನುವಷ್ಟರಮಟ್ಟಿಗಿನ ಬಿರುಸು ಮಳೆ. ನಾವುಗಳು ಮನೆಮಂದಿಯೆಲ್ಲಾ ಹಜಾರದಲ್ಲಿ ಮರದ ಬೆಂಚಿನ ಮೇಲೆ ಕುಳಿತುಕೊಂಡು ಮಳೆಯ ಲೀಲೆಯನ್ನು ಬೆರಗುಗಣ್ಣಿನಿಂದ ನೋಡುತ್ತಿದ್ದೆವು. ಅಪ್ಪ-ಅಮ್ಮನ ಬಳಿಯಲ್ಲಿ ನಾವು ಕುಳಿತುಕೊಂಡ ಕಾರಣ ನಮಗೆ ಅದೇನೋ ಸುರಕ್ಷತೆಯ ಭಾವ. ಆದರೆ ಹೆತ್ತವರ ಕಣ್ಣಲ್ಲಿ ಇದ್ದದ್ದು ತೀರದ ದಿಗಿಲು. ಅದೆಂಥ ರಣ ಮಳೆಯಾಗಿತ್ತೆಂಬುದನ್ನ ಕಲ್ಪಿಸಿಕೊಂಡರೆ ಅದರ ಚಿತ್ರಣ ಈಗಲೂ ಕೂಡ ಕಣ್ಣೆವೆಯ ಮುಂದೆ ಹಸಿ ಹಸಿ ಅನ್ನಿಸುವಷ್ಟು ತಾಜಾ ಆಗಿ ತೇಲಿಹೋಗುತ್ತದೆ. ಬಹುಶಃ ಮನದಾಳದಲ್ಲಿ ಗಟ್ಟಿಯಾಗಿ ನೆಲೆಯೂರಿ ನಿಂತ ಮಳೆಯೇ ಇರಬೇಕು ಅದು ಅಥವಾ ಬಾಲ್ಯದ ಬೆರಗು ಕಣ್ಣುಗಳಿಗೆ ಮಳೆಯನ್ನೆಲ್ಲಾ ಮನದೊಳಗೆ ತುಂಬಿಟ್ಟು ಕೊಳ್ಳುವಷ್ಟು ತಾಕತ್ತು ಇತ್ತೋ ಏನೋ. ಅಪ್ಪನೋ, ಇದೆಂಥಾ ಹುಚ್ಚು ಮಳೆ ಹಿಡಿದಿದೆಯಪ್ಪಾ ಎನ್ನುತ್ತಾ ಜೊತೆಗೆ ರಾಮಾ...ರಾಮಾ... ಎಂದು ಉಸುರಿ ಕೊಳ್ಳುತ್ತಲೇ ಒಳಗಿನಿಂದ ಅನ್ನ ತಂದು ಅಂಗಳಕ್ಕೆ ಹಾಕುತ್ತಿದ್ದ ದೃಶ್ಯ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಅಪ್ಪ ಯಾವ ದೇವರನ್ನು ನಂಬುತ್ತಿದ್ದರೋ ? ಅಪ್ಪನ ಇಷ್ಟ ದೇವರು ಯಾರೋ ಗೊತ್ತಿಲ್ಲ. ಆದರೆ ಇಂತಹ ಮಳೆ ಸುರಿದಾಗ ಮಾತ್ರ ರಾಮಾ...ರಾಮಾ... ಅನ್ನುತ್ತಾ ಅನ್ನ ಹಾಕುತ್ತಿದ್ದದಂತೂ ಹೌದು. ಹಸಿವಿನಿಂದ ಕಂಗೆಟ್ಟು ರಚ್ಚೆ ಹಿಡಿದು ಕೂಗುವ ಮಳೆರಾಯನಿಗೆ ಅನ್ನವೆಂಬ ಆಹಾರವನ್ನು ಕೊಡುವ ಮೂಲಕ ಮಳೆ ಶಾಂತವಾಗುತ್ತದೆ, ಅದರ ಹಸಿವು ಇಂಗುತ್ತದೆ, ಅದರ ಕೋಪ ಆರುತ್ತದೆ, ಅದರ ಆವೇಶ ಆರ್ಭಟ ಕಡಿಮೆಯಾಗುತ್ತದೆ ಎಂಬ ನಂಬಿಕೆ ಅವರಿಗೆ. ಆದರೆ ಕ್ಷಣಾರ್ಧದಲ್ಲಿ ದೊಡ್ಡ ತೆಂಗಿನಮರವೊಂದು ಬುಡ ಸಮೇತ ನಮ್ಮ ಇದಿರು ದಡದಡನೆಂದು ಬೀಳುವಾಗಲೂ ಅಪ್ಪ ಅಂಗಳಕ್ಕೆ ಅನ್ನ ಉದುರಿಸುತ್ತಲೇ ಇದ್ದರು. ರಾಮನಾಮವನ್ನು ಜಪಿಸುತ್ತಲೇ ಇದ್ದರು. ಮಾರನೆ ದಿನ ನೋಡುವಾಗ ಸಿಡಿಲು ಬಡಿದ ತೆಂಗಿನ ಮರವೊಂದು ಅರೆ ಸುಟ್ಟು ನಿಂತ ಚಿತ್ರ, ಅಡ್ಡಾದಿಡ್ಡಿಯಾಗಿ ಅನಾಥರಂತೆ ಬಿದ್ದ ಬಾಳೆಗಳು, ಲಟಲಟನೆಂದು ಮುರಿದುಬಿದ್ದು ಅಂಗಾತ ಮಲಗಿದ ಅಡಿಕೆ ಮರದ ದೃಶ್ಯ ಮಾತ್ರ ಕರುಳು ಚುರುಕ್ ಎನ್ನಿಸುವಂತಿರುತ್ತಿತ್ತು. ಪ್ರಕೃತಿಯ ವಿಕೋಪದ ಮುಂದೆ ಹುಲುಮಾನವರಾದ ನಾವೆಷ್ಟು ಕುಬ್ಜರು ಮತ್ತು ಅಸಹಾಯಕರು ! ಬದುಕು ಇಷ್ಟೆಯಾ... ಅನ್ನುವಷ್ಟು ತಳಮಳ. ಆದರೂ ಮಳೆ ಬಂದಾಕ್ಷಣ ಓಡಿ ಹೋಗಿ ನಿಲ್ಲುವುದು ಸೂರಿನಡಿಯೇ. ಧಾರೆಯಾಗಿ ಸುರಿಯುವ ನೀರಿಗೆ ಅಂಗೈ ಹಿಡಿದು ಹನಿ ಬಿಂದುಗಳೆಲ್ಲಾ ಸಿಡಿದು ಚೂರಾಗಿಹೋಗುವ ಸುಂದರ ನೋಟವನ್ನು ತದೇಕಚಿತ್ತದಿಂದ ನೋಡುತ್ತಾ ನಿಲ್ಲುತ್ತಿದ್ದೆವು. ಯಾವುದೋ ಲೋಕದಲ್ಲಿ ತೇಲಿಹೋಗುತ್ತಿದ್ದ ನಮ್ಮ ಸಪ್ನಗಳ ಸರಮಾಲೆಯನ್ನು ಅಚಾನಕ್ಕಾಗಿ ಆಗಮಿಸುವ ಗುಡುಗು-ಸಿಡಿಲುಗಳು ಕಡಿದುಹಾಕುತ್ತಿದ್ದವು. ಅಷ್ಟಕ್ಕೇ ಬೆಚ್ಚಿ ಬೆದರಿ ಆಗ ತಾನೇ ವಿಹರಿಸುತ್ತಿದ್ದ ಕನಸಿನ ಲೋಕದಿಂದ ಜಾರಿ ವಾಸ್ತವ ಲೋಕಕ್ಕೆ ಬಂದು ಉದುರುತ್ತಿದ್ದೆವು.

ಪ್ರತೀ ಬಾರಿ ಮಳೆ ಹುಯ್ಯುವಾಗ, ಅದರ ಸುಖವನ್ನು ಸಡಗರದಿಂದ ಸಂಭ್ರಮಿಸುತ್ತಿರುವಾಗ ಹಿಂದಿನಿಂದ ದೂರದಲ್ಲೆಲ್ಲೋ ಕೇಳಿಸುವ ಸಣ್ಣದೊಂದು ಗುಡುಗಿನ ಸದ್ದು, ಮಿಂಚಿನ ಬೆಳಕು ನಮ್ಮ ಕನಸಿಗೆ ಹಠಾತ್ ಭಂಗ ತಂದು ನಮ್ಮ ಸಂಭ್ರಮವನ್ನು ನೀರುಪಾಲು ಮಾಡಿಬಿಡುತ್ತಿದ್ದವು. ಇನ್ನು ನಮ್ಮ ಎಳೆಯರ ರಗಳೆಗಳು ಮಿತಿ ಮೀರಿದಾಗ ಹಿರಿಯರು ಬೇರೆ ಉಪಾಯ ಕಾಣದೆ ಗುಡುಗುಡು ಗುಮ್ಮಟನೆಂಬ ಗುಮ್ಮ ರಾಕ್ಷಸನನ್ನು ನಮ್ಮ ಎದುರು ಎಳೆದು ತರುತ್ತಿದ್ದದ್ದು ಇದೇ ಕಾರಣಕ್ಕಾಗಿ. ಗುಡುಗಜ್ಜ ಬಂದು ನಮ್ಮನ್ನೆಲ್ಲಾ ಎಳೆದೊಯ್ಯುತ್ತಾನೆ ಅಂತ ಹೇಳಿದಾಗಲೆಲ್ಲಾ ನಮ್ಮ ಪುಟ್ಟ ಎಳೆ ಹೃದಯಗಳು

ಅರೆಗಳಿಗೆ ಸ್ತಬ್ಧವಾಗಿಬಿಡುತ್ತಿದ್ದದಂತೂ ಹೌದು. ಮತ್ತದೇ ಸಾಲುಗಳನ್ನು ನಾವು ಮನದ ಮೂಲೆಯಲ್ಲೆಲ್ಲೋ ಕಾಯ್ದಿರಿಸಿಕೊಂಡು, ಈಗ ಅದೇ ಅಸ್ತ್ರವನ್ನು ನಮ್ಮ ಮಕ್ಕಳ ಗಲಾಟೆಯನ್ನು ಹತ್ತಿಕ್ಕಲು ನಿರಾಯಾಸವಾಗಿ ಬಳಸುತ್ತಿರುವುದಂತೂ ನಿಜ.

ಒಮ್ಮೆ ಶಾಲೆಯಿಂದ ಹಿಂದಿರುಗುವ ಹೊತ್ತು. ಜೋರು ಮಳೆ ಸುರಿಯುತ್ತಿತ್ತು. ಮಳೆಯ ರಭಸದ ಮುಂದೆ ನಾವು ಹಿಡಿದ ಕೊಡೆ ಹುಲ್ಲುಕಡ್ಡಿಯಂತೆ. ಹಾಗಾಗಿ ಕೊಡೆಯನ್ನ ಮಡಚಿ ಕೈಯಲ್ಲಿ ಹಿಡಿದುಕೊಂಡು ಅದನ್ನು ಬಿಡಿಸುವ ಗೋಜಿಗೆ ಹೋಗದೆ ಓಡಿ ಹೋಗಿ ಯಾವುದೋ ಒಂದು ದೊಡ್ಡ ಗಾತ್ರದ ಮರದ ಆಸರೆ ಪಡೆದು ಅದರ ಬುಡದಲ್ಲಿ ನಿಂತಿದ್ದೆನಷ್ಟೆ. ಅಷ್ಟರಲ್ಲಿ ಭೂಮಿ ಅದುರಿದಂತೆ ಗುಡುಗಿನ ಸದ್ದು. ಫಳಾರೆಂದು ಸೀಳಿ ಬಂದ ಸಿಡಿಲು. ಸುರಿವ ಬಿರುಮಳೆಯನ್ನೂ ಲೆಕ್ಕಿಸದೆ ಒಂದೇ ಸಮನೆ ಮನೆಯವರೆಗೂ ಓಟ ಕಿತ್ತಿದ್ದು ಈಗಲೂ ಎದೆ ಡವಡವ ಅನ್ನಿಸುವಷ್ಟು ನಿಚ್ಚಳವಾಗಿದೆ. ಹಸಿಮರಕ್ಕೆ ಸಿಡಿಲು ಬೇಗ ಬಡಿಯುತ್ತೆ ಅಂತ ಹಿರಿಯರು ಹೇಳುತ್ತಿದ್ದ ಎಚ್ಚರಿಕೆಯ ಮಾತುಗಳು ಕಿವಿಯೊಳಗೆ ಹಾಗೆ ಗುಂಯಿಗುಡುತ್ತಲೇ ಇದ್ದುವು. ಅದೂ ಅಲ್ಲದೆ, ಒಮ್ಮೆ ಮಳೆಯಿಂದ ರಕ್ಷಿಸಿಕೊಳ್ಳಲೋಸುಗ ಮರದ ಬುಡದಲ್ಲಿ ನಿಂತ ಮೂರು ಮಕ್ಕಳೂ ಸಿಡಿಲಿಗೆ ಆಹುತಿಯಾಗಿ ಸುಟ್ಟು ಭಸ್ಮವಾಗಿದ್ದರು ಎಂಬ ದಾರುಣ ಘಟನೆಯನ್ನು ಪಕ್ಕದ ಮನೆ ಅಜ್ಜಿಯೊಬ್ಬರು ನಮ್ಮೆದಿರು ವ್ಯಾಕುಲ ಭರಿತರಾಗಿ ಹೇಳಿದ್ದ ಕಾರಣ, ಗುಡುಗು ಮಿಂಚೆಂದರೆ ಬೆಂಕಿ, ಬೂದಿ, ಭಸ್ಮ ಇಂತಹ ಚಿತ್ರಗಳೇ ಕಣ್ಣಮುಂದೆ ಹಾದು ಮನಸು ತಲ್ಲಣಿಸಿ ತತ್ತರಿಸಿಹೋಗುತ್ತಿದ್ದವು.

ಹಳ್ಳಿಗಳಲ್ಲಿ ಈಗಲೂ ಮಳೆ, ಸಿಡಿಲುಗಳಿಂದ ಆಗುವ ಅನಾಹುತಗಳು ಅಷ್ಟಿಷ್ಟಲ್ಲ. ಆದರೂ ಮಳೆ ದೇವತೆ ನಮ್ಮನ್ನೆಲ್ಲಾ ಪೊರೆಯುತ್ತಾಳೆ ಎಂಬ ಅಗಾಧ ನಂಬಿಕೆ ಕೂಡ ಅಷ್ಟೇ ಇದೆ. ಬಹುಶಃ ಆ ನಂಬಿಕೆಯೇ ಪ್ರತೀ ಮಳೆಗಾಲವೂ ನಮ್ಮನ್ನೆಲ್ಲಾ ಬಿಡದೇ ಕಾಯುವುದು ಅಂತನ್ನಿಸುತ್ತದೆ. ಈಗಲೂ ಅಷ್ಟೇ, ದೂರದಲ್ಲೆಲ್ಲೋ ಗುಡುಗ ಸದ್ದು ಕೇಳಿಸಿತು ಅಂದಾಕ್ಷಣ ನಾವೆಲ್ಲಾ ಓಡಿ ಹೋಗಿ ಫೋನಿನ ವಯರನ್ನು ಮತ್ತು ಟಿ.ವಿ. ಸಂಪರ್ಕವನ್ನೆಲ್ಲಾ ತೆಗೆದಿಟ್ಟುಬಿಡುತ್ತೇವೆ. ಇಲ್ಲದಿದ್ದರೆ ಅಚಾನಕ್ ಆಗಿ ಬಡಿದ ಸಿಡಿಲಿನಿಂದ ನಮ್ಮ ಮನೆಗಳ ವಿದ್ಯುತ್ ಸಾಧನಗಳೆಲ್ಲಾ ನಿಷ್ಕ್ರಿಯಗೊಂಡು ಮಳೆಗಾಲವಿಡೀ ಫೋನಿಲ್ಲದೆ, ಟಿ.ವಿ. ಇಲ್ಲದೆ ಕಾಲ ಕಳೆಯಬೇಕಾದ ಪ್ರಸಂಗ ಕಟ್ಟಿಟ್ಟ ಬುತ್ತಿ. ಒಮ್ಮೊಮ್ಮೆ ಎಷ್ಟೇ ಮುನ್ನೆಚ್ಚರಿಕೆಯಿಂದ ಇವುಗಳನ್ನೆಲ್ಲಾ ತೆಗೆದಿರಿಸಿದರೂ ಇದನ್ನೆಲ್ಲಾ ಈ ಸಲ ಹಾಳು ಮಾಡಿಯೇ ತೀರುವೆನೆಂದು ಪಣ ತೊಟ್ಟಂತೆ ಸಿಡಿಲು ಹೊಡೆದೇ ತೀರುತ್ತದೆ. ಆಗೆಲ್ಲಾ ಹಾಳು ಮಳೆಗಾಲ ಎಂದು ಶಪಿಸಿಕೊಳ್ಳದ ದಿನಗಳೇ ಇಲ್ಲ. ಒಮ್ಮೆಯಂತೂ ಯಾವುದೇ ಮುನ್ಸೂಚನೆಯಿಲ್ಲದೆ ಏಕಾಏಕಿ ಕತ್ತಲಾವರಿಸಿದಂತಾಗಿ ಫಳಾರೆಂದು ಮಿಂಚಿನ ಕಿಡಿ ಹಾಯ್ದನಂತರ ಸಿಡಿಲ ಶಬ್ದ. ಅಷ್ಟರಲ್ಲೇ ನಾವೆಲ್ಲಾ ಎಚ್ಚೆತ್ತುಕೊಂಡವರಂತೆ ದಡಬಡನೆ ಓಡಿ ಹೋಗಿ ಫೋನಿನ ವಯರನ್ನು, ಟಿ.ವಿ.ಯ ವಯರನ್ನು ಬೇರೆ ಬೇರೆ ಮಾಡತೊಡಗಿದೆವು. ನನ್ನ ತಂಗಿಯೊಬ್ಬಳಿಗೆ ಅದೇ ಹೊತ್ತಿಗೆ ಫೋನಿನ ಕನೆಕ್ಷನ್ ತಪ್ಪಿಸಲು ಹೋಗುವಾಗ, ಸಿಡಿಲು ಬಡಿದುದರಿಂದ ಹೆದರಿ ನೆಲಕ್ಕುರುಳಿ ಪ್ರಜ್ಞೆ ತಪ್ಪಿತ್ತು. ಅವಳನ್ನು ಆಸ್ಪತ್ರೆಯವರೆಗೂ ಕರೆದೊಯ್ದಿದ್ದರು. ಇನ್ನೊಂದು ಮನೆಯಲ್ಲಿ ಅದೇ ಸಿಡಿಲು ಸೋಫಾದ ಮೇಲೆ ಮಲಗಿದ್ದ ದೊಡ್ಡಮ್ಮನನ್ನು ಅಲ್ಲಾಡಿಸಿ ಮೇಲಕ್ಕೆ ಹಾರಿಸಿ ಕೆಳಗುರುಳಿಸಿತ್ತು. ಅದೃಶ್ಯ ಬೆಳಕಿನ ಪ್ರಚಂಡ ಶಕ್ತಿಯೇ...? ಅರೆಪ್ರಜ್ಞೆಯಲ್ಲಿದ್ದ ದೊಡ್ಡಮ್ಮನಿಗೆ ಆಗ ಅನ್ನಿಸಿದ್ದು ತನ್ನ ಮನೆಯವರು, ನೆರೆಹೊರೆಯವರು, ಸಂಬಂಧಿಕರು ಎಲ್ಲರೂ ಇಹಲೋಕ ತ್ಯಜಿಸಿರಬಹುದು: ತಾನೂ ಇನ್ನೇನು ಅವರನ್ನು ಕೂಡಿಕೊಳ್ಳುವ ಹೊತ್ತು, ಇದು ಪ್ರಳಯವೇ ಆಗಿರಬೇಕು ಎಂದು. ಆ ಕ್ಷಣಕ್ಕೆ ಅವರ ಮನಸ್ಸಿನಲ್ಲಿ ಹಾದು ಹೋದದ್ದನ್ನ ಮಳೆಗಾಲ ಬರುವಾಗಲೆಲ್ಲಾ ವಿಸ್ಮಯದಿಂದ, ಕೆಲವೊಮ್ಮೆ ನಸುನಗುತ್ತಾ ನೆನೆದು ನೆನಸಿಕೊಳ್ಳುತ್ತಲಿರುತ್ತಾರೆ. ಹಿಂದೊಮ್ಮೆ ಭೂಮಿ ಅದುರುವಂತೆ ಗುಡುಗಿದ್ದಕ್ಕೆ ಹೆದರಿ ಅಲ್ಲೇ ಆಟವಾಡುತ್ತಿದ್ದ ಪುಟ್ಟಮಗನನ್ನು ಎದೆಗವಚಿಕೊಂಡು ಒಳಗೆ ಅಡಿಯಿಟ್ಟಿದ್ದೆ. ಆ ಸಿಡಿಲಿನ ಶಬ್ದಕ್ಕೆ ಗೋಡೆ ಒಡೆದು ಮಣ್ಣೆಲ್ಲಾ ಹೊರಗೆ ರಟ್ಟಿಯಾಗಿತ್ತು. ನೆಲದ ಮೇಲೆ ಹೆಜ್ಜೆ ಊರುವಂತೆಯೇ ಇರಲಿಲ್ಲ. ಚಟಪಟನೆಂದು ಮಿಂಚಿನ ಪ್ರವಾಹ ದೇಹದ ಮೇಲೆಲ್ಲಾ ಪ್ರವಹಿಸಿದಂತಾಗುತ್ತದೆ. ಹಳ್ಳಿಗರಾದ ನಮಗೆ ಇವೆಲ್ಲಾ ಮಾಮೂಲಿ ಸಂಗತಿ. ಆದರೆ ನಗರದಿಂದ ಬಂದವರಿಗೆ ಇಂತಹ ಅನುಭವಗಳ ಅಭ್ಯಾಸವಿಲ್ಲ. ಹೇಳಿದರೂ ಕಟ್ಟುಕತೆಯೇನೋ ಎಂದು ಭ್ರಮಿಸುತ್ತಾರೆ. ಆದರೆ ಮೊನ್ನೆ ಮೊನ್ನೆ ನಗರದಿಂದ ಬಂದ ಒಂದಷ್ಟು ಮಂದಿ ಸ್ನೇಹಿತರು ಸುರಿಯುವ ಮಳೆ ನೋಡುತ್ತಾ ನಿಂತಿರಬೇಕಾದರೆ ಕಾಲಿಗೆ ಛಳ್ಳನೆ ವಿದ್ಯುತ್ ಪ್ರವಹಿಸಿದಂತಾಗಿ ಅಯ್ಯಮ್ಮಾ... ಹೀಗೂ ಉಂಟೆ! ಎಂಬಂತೆ ಭಯಭೀತರಾಗಿ, ಇಲ್ಲಿಯ ಮಳೆಗಾಲದಲ್ಲಿ ಪ್ರತ್ಯಕ್ಷ ಅನುಭವಿಸಿದ, ಮೈನವಿರೇಳಿಸುವ ರೋಚಕ ಹೊಸತೊಂದು ಅನುಭವವನ್ನು ತಮ್ಮೊಂದಿಗೆ ಹೊತ್ತೊಯ್ದಿದ್ದಾರೆ. ಸದಾ ಮನೆಯ ಹೊರವಲಯದಲ್ಲೇ ಇರುವ ಪ್ರಾಣಿ-ಪಕ್ಷಿಗಳಿಗೆ ಗುಡುಗು-ಮಳೆಗಳ ಭಯ ಇದೆಯಾ? ಅಥವಾ ಅದರ ಪರಿವೆ ಇದೆಯಾ? ಗೊತ್ತಿಲ್ಲ. ಆದರೆ ನಮ್ಮ ಮನೆಯಲ್ಲಿರುವ ಮೂರು ನಾಯಿಗಳಲ್ಲಿ ಒಂದು ನಾಯಿಯಂತೂ ಮಳೆ, ಗುಡುಗು ಬಂತೆಂದರೆ ಅದರ ಗೂಡು ಬಿಟ್ಟು ಬಾಲ ಮುದುರಿಕೊಂಡು ಸೀದಾ ಮನೆಯೊಳಗೆ ನುಗ್ಗಿ ಸೋಫಾದ ಅಡಿಯಲ್ಲೋ, ಮಂಚದ ಅಡಿಯಲ್ಲೋ ಮುದುರಿ ಅಡಗಿಕೊಂಡು ಮಲಗಿಬಿಡುತ್ತದೆ. ಯಾವೊತ್ತೂ ನಾಯಿಯನ್ನು ಒಳ ಸೇರಿಸದ ನಾವುಗಳು ಕೋಲು, ಸ್ಕೇಲ್, ಕಟ್ಟಿಗೆ, ಮತ್ತೊಂದು ಮಗದೊಂದು ಸಲಕರಣೆಗಳನ್ನು ಹಿಡಿದುಕೊಂಡು ಅದನ್ನು ಹೊರಹಾಕುವ ವ್ಯರ್ಥಪ್ರಯತ್ನವನ್ನು ಮಾಡುತ್ತಲೇ ಇರುತ್ತೇವೆ.

ಇಪ್ಪತ್ತೈದು ವರುಷಗಳ ಹಿಂದೆ ಕೊಡಗಿನ ನನ್ನಜ್ಜಿ ಮನೆಯಲ್ಲಿ ಒಮ್ಮೆ ಬೆಳಗಿನ ಜಾವದಲ್ಲಿ ಸುರಿಯಲು ತೊಡಗಿದ ಮಳೆ ನಿಲ್ಲುವ ಲಕ್ಷಣವೇ ಇರಲಿಲ್ಲ. ನನ್ನ ಅಜ್ಜಿ ಮನೆಯಲ್ಲಿ ಅದೇ ದಿವಸ ನಾಟಿ ಕೆಲಸ. ಮಳೆ ಜೋರು ಏರುವ ಮೊದಲು ನಾಟಿ ಕೆಲಸವನ್ನು ಮುಗಿಸಿ ಬಿಡಬೇಕೆಂಬ ಆತುರದಲ್ಲಿ ಎಲ್ಲರೂ ಸೇರಿಕೊಂಡು, ಅಗೆಯ ಕಂತೆಯನ್ನು ರಾಶಿ ಹಾಕಿಕೊಂಡು ರಭಸದಲ್ಲಿ ಕೆಲಸದಲ್ಲಿ ತೊಡಗಿದ್ದಾರೆ. ಗದ್ದೆಯ ಬದಿಯಲ್ಲಿ ಹರಿಯುವ ಸಣ್ಣ ನದಿಯೊಂದು ಮಳೆಯ ರಭಸಕ್ಕೆ ತುಂಬಿಕೊಂಡು ಅದರ ಪಾತ್ರವನ್ನು ಹಿಗ್ಗಿಸಿಕೊಂಡು ಬರುತ್ತಲೇ ಇತ್ತು. ನೋಡ ನೋಡುತ್ತಿದ್ದಂತೆಯೇ ನೀರು ಪ್ರವಾಹದಂತೆ ಉಕ್ಕಿ ಮೇಲೇರಿ ಬರುತ್ತಿದ್ದನ್ನು ನಾವು ಮನೆ ಮಂದಿಯೆಲ್ಲಾ ಹಜಾರದಲ್ಲಿ ನೋಡುತ್ತಲೇ ಇದ್ದೆವು. ಕ್ಷಣಾರ್ಧದಲ್ಲಿ ಇಡೀ ಗದ್ದೆ ಬಯಲೇ ದೊಡ್ಡ ನದಿಯಂತೆ, ಕಡಲ ತೀರದಂತೆ ಗೋಚರಿಸುತ್ತಿತ್ತು. ಆಗ ತಾನೇ ಊರಿದ ಸಸಿಗಳೆಲ್ಲವೂ ಬೇರಿಳಿಸುವ ಮುನ್ನವೇ ಹರಿವ ನೀರಿನೊಡನೆ ಕೊಚ್ಚಿಹೋಗುತ್ತಿದ್ದವು. ಹಿರಿಯರೆಲ್ಲರೂ ನಾಳಿನ, ಆ ವರ್ಷದ ಬದುಕಿನ ಸ್ಥಿತಿ-ಗತಿಯ ಬಗ್ಗೆ ದುಗುಡದಲ್ಲಿ ಮುಳುಗಿದ್ದರೆ ನಾವುಗಳೆಲ್ಲರೂ ಕೆಂಬಣ್ಣದ ನೀರನ್ನು, ಅದರಲ್ಲಿ ತೇಲಿಬರುವ ದೊಡ್ಡ ದೊಡ್ಡ ಮರದ ದಿಮ್ಮಿಗಳನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತಾ ಕೌತುಕದಲ್ಲಿ ನೀರಿನ ಹರಿವನ್ನು ನೋಡುತ್ತಾ ನಿಲ್ಲುತ್ತಿದ್ದೆವು. ನಾಳೆ ಶಾಲೆಗೆ ರಜೆಯೆಂಬುದು ಖಚಿತಗೊಂಡು ಮತ್ತಷ್ಟು ಸಂತಸ ಮನಸ್ಸಿನೊಳಗೆ ತುಂಬಿ ಹರಿಯುತ್ತಿತ್ತು. ಮಳೆ ನಿಂತು ನೀರೆಲ್ಲಾ ಇಳಿದ ಮೇಲೆ ನದಿಯ ನೀರಿನೊಂದಿಗೆ ಗದ್ದೆಗೆ ಹತ್ತಿದ ಮೀನನ್ನು ಹಿಡಿಯುವ ಸಂಭ್ರಮಕ್ಕೆ ಮನಸ್ಸು ಲಗ್ಗೆಯಿಡುತ್ತಿತ್ತು.

ಗುಡುಗು, ಸಿಡಿಲು, ಪ್ರವಾಹ, ಇಷ್ಟೆಲ್ಲಾ ಮಳೆಯು ತಂದಿಕ್ಕುವ ಅನಾಹುತಗಳ ನಡುವೆಯೂ ಬದುಕು ಕಟ್ಟಿಕೊಡುವ, ಬದುಕನ್ನು ಹಸಿರಾಗಿಸುವ ಮಳೆಯ ಅಗಾಧ ಮಮತೆಯ ಮುಂದೆ ಉಳಿದೆಲ್ಲವೂ ಗೌಣ ಅಂತನ್ನಿಸಿಬಿಡುತ್ತದೆ. ಇವೆಲ್ಲದರ ನಡುವೆಯೂ ಮಳೆ ಸುರಿಯಬೇಕು, ಮನಸು ಅರಳಿಕೊಳ್ಳಬೇಕು. ಗತಕ್ಕೂ ವರ್ತಮಾನಕ್ಕೂ ಮಳೆ ಸೇತುವೆಯಾಗಬೇಕು. 'ಬಾ... ಮಳೆಯೇ... ಬಾ... ಆದರೆ ಅಷ್ಟು ಬಿರುಸಾಗಿ ಬಾರದಿರು' ಅಂತ ನಾವು ಮತ್ತೆ ಮತ್ತೆ ಹಾಡಿಕೊಳ್ಳುತ್ತಾ ಸುರಿಯುವ ಮಳೆಗೆ ಮುಖ ಒಡ್ಡುವ ಸುಖ ಯಾತರಲ್ಲಿದೆ? ವಯಸ್ಸಿನ ಅಂತರಗಳನ್ನು ಮೀರಿ ನಿಂತು ಮಳೆಯೆದುರು ಎಲ್ಲರೂ ಮಗುವಿನಂತಾಗಿಬಿಡುತ್ತೇವೆ.

'ಮಳೆಯೆಂದರೆ ಬರಿ ಮಳೆಯಲ್ಲ... ಬದುಕಿನ ಜೀವಜಲ. ಕೊಳೆ ತೊಳೆಯುವ ಕೆಲಸ ಸುಲಭದ ಮಾತಲ್ಲ...' ಎಂಬ ಭಾವಗೀತೆಯ ಸಾಲನ್ನು ಗುನುಗಿಕೊಳ್ಳುತ್ತಲೇ ಇರುವಾಗ ಪರಿಶುದ್ಧ ಮಳೆ ಹನಿ ತೊಟ್ಟಿಕ್ಕುತ್ತಾ ಭೂಮಿಯಾಳಕ್ಕೆ... ಮನದಾಳಕ್ಕೆ ಇಳಿದು ಒಳಗಿನ ಕೊಳೆಯನ್ನೆಲ್ಲಾ ಶುಭ್ರಗೊಳಿಸುತ್ತಲೇ ಇದೆ. ಭೂಮಿ ಹಸುರಾಗಿದೆ. ಮನ ಹಗುರಾಗಿದೆ.

**ಸ್ಮಿತಾ ಅಮೃತರಾಜ್. ಸಂಪಾಜೆ**
'ಹಸಿರು', ಬಾಲಂಬಿ ಅಂಚೆ
ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಕೊಡಗು - ೫೭೪ ೨೩೪







*ಜೆಸಿಬಿ ಯಂತ್ರಗಳಿಂದ ಎಲ್ಲ ಗುಡಿಸಲುಗಳನ್ನು ಏಕಾಏಕಿ ನೆಲಸಮ ಮಾಡುತ್ತಿರುವುದು*

# ಕೊಡಗಿನ ದಿಡ್ಡಳ್ಳಿ ಆದಿವಾಸಿಗಳ ಮೇಲೆ ನಡೆದ ದೌರ್ಜನ್ಯದ ಕಥೆ

**ಕೊ**ಡಗು ಜಿಲ್ಲೆ ವೀರಾಜಪೇಟೆ ತಾಲೂಕು ಅಮ್ಮತ್ತಿ ಹೋಬಳಿ ಮಾಲ್ದಾರೆ ಬಳಿಯ ದಿಡ್ಡಳ್ಳಿಯಲ್ಲಿ ೧೦೬/೭ಎ ಸರ್ವೆ ನಂಬರಿನ 'ಅರಣ್ಯ ಪೈಸಾರಿ' ಎಂದು ದಾಖಲಾಗಿರುವ ಸುಮಾರು ೪೫–೫೦ ಎಕರೆ ಖಾಲಿ ಭೂಮಿಯಲ್ಲಿ ಜೇನುಕುರುಬ, ಬೆಟ್ಟಕುರುಬ, ಎರವ, ಪಣಿಯ ಪಂಗಡಗಳ ೫೭೭ ಆದಿವಾಸಿ ಕುಟುಂಬಗಳು ಅರಣ್ಯ ಇಲಾಖೆಯ ಅಧಿಕಾರಿಗಳನ್ನು ಕೇಳಿ ೨೦೧೬ರ ಜೂನ್ ತಿಂಗಳಿನಿಂದ ಹಂತಹಂತವಾಗಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸವಾಗಿದ್ದರು. "ನಿಮಗೆ ಈ ಜಾಗವನ್ನು ಮಂಜೂರು ಮಾಡಿಸಿಕೊಡುತ್ತೇವೆ" ಎಂದು ಅವರನ್ನು ನಂಬಿಸಿದ್ದ ಈ ಅಧಿಕಾರಿಗಳು ಪ್ರತಿ ವಾರ ಪ್ರತಿ ಕುಟುಂಬದಿಂದ ತಲಾ ೧೦೦ ರೂಪಾಯಿಗಳಂತೆ ಹಲವು ಲಕ್ಷ ರೂಪಾಯಿಗಳನ್ನು ವಸೂಲು ಸಹ ಮಾಡಿದ್ದರು.

ಆ ನಂತರ ಕಂದಾಯ ಇಲಾಖೆ ಸಿಬ್ಬಂದಿಯವರು ಬಂದು ಎಲ್ಲ ಗುಡಿಸಲುವಾಸಿಗಳ ಜಾತಿ ಸರ್ಟಿಫಿಕೇಟ್ ಮುಂತಾದ ದಾಖಲೆಗಳನ್ನು ಪರಿಶೀಲಿಸಿ ಅವರೆಲ್ಲರೂ ಆದಿವಾಸಿ ಪರಿಶಿಷ್ಟ ಜನಾಂಗಗಳಿಗೆ ಸೇರಿರುವುದನ್ನು ಖಾತ್ರಿ ಮಾಡಿಕೊಂಡು, ಗುಡಿಸಲುಗಳಿಗೆಲ್ಲ ನಂಬರ್ ಹಾಕಿ ಒಟ್ಟು ೫೭೭ ಗುಡಿಸಲು ಇರುವುದನ್ನು ದಾಖಲಿಸಿದರು. ನಂತರ ಸ್ವತಃ ಜಿಲ್ಲಾಧಿಕಾರಿಯೇ ಹಾಡಿಯಲ್ಲಿ ಕಾನೂನು ಅರಿವು ಶಿಬಿರ ನಡೆಸಿ, "ನಿಮಗೆಲ್ಲ ಇಲ್ಲೇ ಸೈಟು ಕೊಟ್ಟು ಸರ್ಕಾರದಿಂದ ಮನೆ ಕಟ್ಟಿಸಿಕೊಡಲಾಗುವುದು. ಮಕ್ಕಳನ್ನೆಲ್ಲ ಶಾಲೆಗೆ ಕಳಿಸಿ ವಿದ್ಯಾವಂತರನ್ನಾಗಿ ಮಾಡಿ" ಎಂದು ಹಿತವಚನ ಹೇಳಿದ್ದರು.

ಆದರೆ ಡಿಸೆಂಬರ್ ೭ರಂದು ಬೆಳಗಿನ ಜಾವ ನಾಲ್ಕೂವರೆ ಗಂಟೆಯ ಹೊತ್ತಿನಲ್ಲಿ ಅರಣ್ಯ ಮತ್ತು ಪೊಲೀಸು ಇಲಾಖೆಯ ಸುಮಾರು ೬೦೦ ಜನ ಸಿಬ್ಬಂದಿ ೩ ಜೆಸಿಬಿ ಯಂತ್ರಗಳನ್ನು ತಂದು ಯಾವ ಮುನ್ಸೂಚನೆಯನ್ನೂ ಕೊಡದೆ ಎಲ್ಲ ಗುಡಿಸಲುಗಳನ್ನು ಏಕಾಏಕಿ ನೆಲಸಮ ಮಾಡಿದರು. ಹಾಗೆ ಮಾಡಬೇಡಿ ಎಂದು ಆದಿವಾಸಿಗಳು ಅಂಗಲಾಚಿ ಗೋಗರೆದರೂ ಅವರ ಮೇಲೆ ಲಾಠಿ ಚಾರ್ಜ್ ಮಾಡಿದರು. ಅವರ ಈ ದೌರ್ಜನ್ಯವನ್ನು ತಡೆಯುವ ಕೊನೆಯ ಪ್ರಯತ್ನವೆಂದು ಒಬ್ಬ ಮಹಿಳೆ ಮತ್ತು ಒಬ್ಬ ಗಂಡಸು ಬೆತ್ತಲೆಯಾಗಿ ಪ್ರತಿಭಟಿಸಿದರೂ ಬೆತ್ತಲೆ ಮೈಮೇಲೇ ಲಾಠಿ ಬೀಸಿ ಬಡಿದರು. ಸುರಿವ ಮಳೆ, ಕೊರೆವ ಚಳಿಯಲ್ಲಿ ಹಸುಗೂಸು, ಹಸಿ ಬಾಣಂತಿಯರು, ಮುದುಕರು, ಮಕ್ಕಳೆನ್ನದೆ ಎಲ್ಲರನ್ನೂ ಬೀದಿಪಾಲು ಮಾಡಿ ಅವರು ಕೂಲಿ ಮಾಡಿ ತಂದಿಟ್ಟಿದ್ದ ಅಷ್ಟಿಷ್ಟು ಅಕ್ಕಿ–ಬೇಳೆ, ಬಟ್ಟೆಬರೆ ಎಲ್ಲವನ್ನೂ ಜೆಸಿಬಿ ಯಂತ್ರಗಳಿಂದ ಮಣ್ಣು ಮಾಡಿದರು. ಸುತ್ತಲೂ ಏಳೆಂಟು ಅಡಿ ಆಳದ ಟ್ರೆಂಚ್ ಹೊಡೆದು ಅವರು ಒಳಗೆ ಹೋಗಲಾಗದಂತೆ ನಿರ್ಬಂಧಿಸಿದರು. ಅಷ್ಟೆಲ್ಲಾ ದೌರ್ಜನ್ಯ ನಡೆಸಿದ್ದಲ್ಲದೆ ಅವರನ್ನೇ ಎರಡು ದಿನ ಲಾಕಪ್‌ನಲ್ಲಿಟ್ಟು ೮ ಜನರ ಮೇಲೆ ಕೇಸುಗಳನ್ನು ಹಾಕಿದರು. ಇದಕ್ಕೆಲ್ಲ ಜಗ್ಗದ ಆದಿವಾಸಿಗಳು ಅಲ್ಲೇ ಪಕ್ಕದ ಆಶ್ರಮಶಾಲೆಯ ಎದುರಿನ ಖಾಲಿ ಜಾಗದಲ್ಲಿ ಚಳಿಮಳೆಯಲ್ಲೇ ಧರಣಿ ಆರಂಭಿಸಿದರು.

**ಸಿರಿಮನೆ ನಾಗರಾಜ್**

ಈ ದೌರ್ಜನ್ಯದ ವಿಚಾರ ಕೊಡಗಿನ ಹಿರಿಯ ಹೋರಾಟಗಾರರಾದ ಎ. ಕೆ. ಸುಬ್ಬಯ್ಯನವರ ಮೂಲಕ 'ಭೂಮಿ–ವಸತಿ ಹಕ್ಕು ವಂಚಿತರ ಹೋರಾಟ ಸಮಿತಿ'ಯ ಗಮನಕ್ಕೆ ಬಂದಾಗ, ಡಿಸೆಂಬರ್ ೧೩ರಂದು ಬೆಂಗಳೂರಿನಲ್ಲಿ ಎಚ್. ಎಸ್. ದೊರೆಸ್ವಾಮಿಯವರ ನೇತೃತ್ವದಲ್ಲಿ ನಡೆದ ಹೋರಾಟ ಸಮಿತಿಯ ಸಭೆಯು ನಿರ್ವಾಣಪ್ಪ, ಕಂದೇಗಾಲ ಶ್ರೀನಿವಾಸ್ ಮತ್ತು ಸಿರಿಮನೆ ನಾಗರಾಜ್ ಅವರ ನೇತೃತ್ವದಲ್ಲಿ ಆರು ಮಂದಿಯ ತಂಡವನ್ನು ದಿಡ್ಡಳ್ಳಿಗೆ ಕಳಿಸಿಕೊಟ್ಟಿತು. ಅವರು ೧೫ರಂದು ಹಾಡಿಗೆ ತೆರಳಿ ಆದಿವಾಸಿಗಳೊಂದಿಗೆ ಚರ್ಚಿಸಿ, ಅವರೊಂದಿಗೆ ಜಿಲ್ಲಾಧಿಕಾರಿ ಡಾ॥ ವಿನ್ಸೆಂಟ್ ಡಿಸೋಜರನ್ನು ಕಂಡು, ಸಂತ್ರಸ್ತರಿಗೆ ತಕ್ಷಣಕ್ಕೆ ತಾತ್ಕಾಲಿಕ ವಸತಿ, ಆಹಾರ, ನೀರು, ಶೌಚಾಲಯ ಸೌಕರ್ಯಗಳನ್ನು ಒದಗಿಸುವಂತೆ ಹಾಗೂ ಸಮಸ್ಯೆಯನ್ನು ಸಮಗ್ರವಾಗಿ ಬಗೆಹರಿಸುವಂತೆ ಮನವಿ ಸಲ್ಲಿಸಿದರು. ಆದರೆ ಅದಕ್ಕೆಲ್ಲ ಸರ್ಕಾರದಲ್ಲಿ ಗ್ರಾಂಟ್ ಇಲ್ಲ ಎಂದು ಹೇಳಿದ ಜಿಲ್ಲಾಧಿಕಾರಿ, ಕಾನೂನು ಪ್ರಕಾರವೇ ಅರಣ್ಯಾಧಿಕಾರಿಗಳು ತೆರವು ಮಾಡಿಸಿದ್ದಾರೆ ಎಂದು ವಾದಿಸಿದರು.

ನಂತರ ಭೂಮಿ–ವಸತಿ ಹೋರಾಟ ಸಮಿತಿಯ ತಂಡವು ಆದಿವಾಸಿಗಳ ಜೊತೆ ಧರಣಿ ಕುಳಿತಿದ್ದಲ್ಲದೆ ಈ ಕರಾಳ ದೌರ್ಜನ್ಯದ ವಿಚಾರವನ್ನು ರಾಜ್ಯದಾದ್ಯಂತ ವ್ಯಾಪಕವಾಗಿ ಪ್ರಚಾರ ಮಾಡಿತು. ಮಾಧ್ಯಮಗಳಲ್ಲೂ ವಿವರವಾಗಿ ವರದಿಯಾಯಿತು. ಸಿನಿಮಾ ನಟ ಚೇತನ್ ಸಹ ಹಾಡಿಗೆ ತೆರಳಿ ಧರಣಿಯಲ್ಲಿ ಪಾಲ್ಗೊಂಡರು. ಡಿಸೆಂಬರ್ ೧೮ರಂದು ರಾಜ್ಯದ ವಿವಿಧೆಡೆಗಳ ೫೦ಕ್ಕೂ ಹೆಚ್ಚು ಜನಪರ ಹೋರಾಟನಿರತ ಸಂಘಟನೆಗಳ ಮುಖಂಡರು ಹಾಡಿಗೆ ತೆರಳಿ 'ಸಂಕಲ್ಪ ದಿನ'ದ ಹೆಸರಿನಲ್ಲಿ ಸಮಾವೇಶ ನಡೆಸಿದ್ದಲ್ಲದೆ, ಡಿಸೆಂಬರ್ ೨೩ರಂದು 'ಮಡಿಕೇರಿ ಚಲೊ' ಮೂಲಕ ಕೊಡಗಿನ ಆದಿವಾಸಿಗಳ ಈ ಸಮಸ್ಯೆಯನ್ನು ರಾಜ್ಯದಾಚೆಗೂ ದೇಶವ್ಯಾಪಿ ಸುದ್ದಿಯಾಗುವಂತೆ ಮಾಡಿದರು.

ಈ ಎಲ್ಲಾ ಸಾರ್ವಜನಿಕ ಒತ್ತಡದ ಪರಿಣಾಮವಾಗಿ ಕೊಡಗು ಜಿಲ್ಲಾ ಉಸ್ತುವಾರಿ ಮಂತ್ರಿ ಎಂ. ಆರ್. ಸೀತಾರಾಂ ಡಿಸೆಂಬರ್ ೧೯ರಂದು ಕ್ಷೇತ್ರದ ಶಾಸಕರು, ಸಂಸತ್ ಸದಸ್ಯರು ಹಾಗೂ ಅಧಿಕಾರಿಗಳ ಸಮೇತ ಹಾಡಿಗೆ ತೆರಳಿ ತಾತ್ಕಾಲಿಕ ವ್ಯವಸ್ಥೆ ಮತ್ತು ಶಾಶ್ವತ ಪರಿಹಾರದ ಮಾತಾಡಿ ಬಂದರು. ಆದರೆ ಅಂತಹ ಕ್ರಮಗಳನ್ನು ಕೈಗೊಳ್ಳುವ ಬದಲು ಜಿಲ್ಲಾಡಳಿತವು ಅಲ್ಲಿ 'ನಕ್ಸಲೀಯರು ನುಸುಳಿದ್ದಾರೆ' ಎಂದು ನೆಪ ಒಡ್ಡಿ, ಸಿಸಿ ಕ್ಯಾಮರಾ ಅಳವಡಿಸಿ, ಡಿಸೆಂಬರ್ ೨೧ರಿಂದ ಸೆಕ್ಷನ್ ೧೪೪ರ ನಿಷೇಧಾಜ್ಞೆ ಹೇರಿ,






*ಸಿನಿಮಾ ನಟ ಚೇತನ್ ನಿರ್ವಸಿತರ ಹಾಡಿಗೆ ತೆರಳಿ ಧರಣಿಯಲ್ಲಿ ಪಾಲ್ಗೊಂಡಿರುವುದು*

ಆದಿವಾಸಿಗಳ ಹೊರತು 'ಹೊರಗಿನವ'ರೆಲ್ಲರೂ ಆ ಪ್ರದೇಶದಿಂದ ಹೊರ ಹೋಗುವಂತೆ ಆದೇಶಿಸಿ, ಆದಿವಾಸಿಗಳನ್ನು ಮತ್ತಷ್ಟು ಅತಂತ್ರಗೊಳಿಸಲು ಪ್ರಯತ್ನಿಸಿತು. ಆದಾಗ್ಯೂ ಡಿಸೆಂಬರ್ ೨೩ರಂದು ಸಮಾಜ ಕಲ್ಯಾಣ ಮಂತ್ರಿ ಎಚ್. ಆಂಜನೇಯ ಅವರು ಖುದ್ದು ಹಾಡಿಗೆ ಭೇಟಿ ನೀಡಿ, ಸಂಘಟನೆಗಳು ಮತ್ತು ಅಧಿಕಾರಿಗಳೊಂದಿಗೆ ಚರ್ಚಿಸಿ, ದಿಡ್ಡಳ್ಳಿಯ ಆದಿವಾಸಿಗಳ ಭೂಮಿ–ವಸತಿ ಹಕ್ಕನ್ನು ಒಪ್ಪಿಕೊಂಡಿದ್ದಲ್ಲದೆ, ಅವರಿಗೆ ತಾತ್ಕಾಲಿಕ ಪುನರ್ವಸತಿ ವ್ಯವಸ್ಥೆಗೆ ಆದೇಶಿಸಿ, ಶಾಶ್ವತ ಪರಿಹಾರಕ್ಕಾಗಿ ಮುಖ್ಯಮಂತ್ರಿಗಳ ನೇತೃತ್ವದಲ್ಲಿ ವಿಸ್ತೃತ ಸಭೆ ಏರ್ಪಡಿಸುವುದಾಗಿ ಘೋಷಿಸಿದರು. ಇದೀಗ ತಾತ್ಕಾಲಿಕ ಸೌಕರ್ಯಗಳ ವ್ಯವಸ್ಥೆ ಆಗಿದೆ; ಶಾಶ್ವತ ನೆಲೆಗಾಗಿ ಸರ್ಕಾರಿ ಜಾಗದ ಹುಡುಕಾಟವನ್ನು ಜಿಲ್ಲಾಡಳಿತ ನಡೆಸುತ್ತಿದೆ; ಮುಖ್ಯಮಂತ್ರಿಗಳ ನೇತೃತ್ವದ ಸಭೆಯನ್ನು ಸದ್ಯವೇ ಏರ್ಪಡಿಸಲು ಸಿದ್ಧತೆ ನಡೆಯುತ್ತಿದೆ.

**ತೀರದ ಸಾಲ : ಹೆಂಡತಿ–ಮಕ್ಕಳ ಒತ್ತೆಸೆರೆ ?**

ಈ ಮಧ್ಯೆ, ಹಾಡಿಯಲ್ಲಿ ನೆಲೆ ಕಂಡುಕೊಂಡಿದ್ದ ಸುಮಾರು ೬೫ರ ಪ್ರಾಯದ ಎರವ ಸಮುದಾಯದ ನಂಜಪ್ಪ ಎಂಬುವರು ಜನವರಿ ೮ರ ಬೆಳಗ್ಗೆ ತೀವ್ರ ಹೃದಯಾಘಾತದಿಂದ ಮೃತಪಟ್ಟರು. ವೀರಾಜಪೇಟೆ ತಾಲೂಕಿನ ತೂಚಮನಕೇರಿ ಎಂಬಲ್ಲಿ ಪೆಮ್ಮಂಡ ಧರ್ಮಜ ಎಂಬವರ ಕಾಫಿ ಎಸ್ಟೇಟಿನಲ್ಲಿ ಜೀತಕೂಲಿ ಮಾಡುತ್ತಿದ್ದ ಅವರು ದಿಡ್ಡಳ್ಳಿಯಲ್ಲಿ ಸ್ವಂತ ನೆಲೆ ಕಂಡುಕೊಳ್ಳಲು ಯತ್ನಿಸಿದಾಗ, ತೋಟದ ಮಾಲೀಕರು ಇವರ ಪತ್ನಿ ಮತ್ತು ನಾಲ್ವರು ಮಕ್ಕಳನ್ನು ಒತ್ತೆ ಇಟ್ಟುಕೊಂಡು, "ನಿನ್ನಿಂದ ನಮಗೆ ೧ ಲಕ್ಷ ೧೦ ಸಾವಿರ ರೂ. ಸಾಲ ಬಾಕಿ ಇದೆ, ಅದನ್ನು ತೀರಿಸಿದರೆ ಮಾತ್ರ ಇವರನ್ನು ಕಳಿಸುವುದು" ಎಂದು ಸಾಗಹಾಕಿದ್ದರು. ಕನಿಷ್ಠ ಕೂಲಿಯ ಬದಲು ೧೦೦ ರೂ.ಗಿಂತ ಕಡಿಮೆ ಕೂಲಿಗೆ ದುಡಿಸಿಕೊಂಡು, ಎಷ್ಟೋ ವರ್ಷಗಳ ಹಿಂದೆ ಪಡೆದಿದ್ದ ಐದೋ ಹತ್ತೋ ಸಾವಿರದ ಸಾಲವು ಎಂದೂ ತೀರದಂತೆ ಮಾಡಿ, ಅದಕ್ಕೆ ಬಡ್ಡಿ–ಚಕ್ರಬಡ್ಡಿ ಸೇರಿಸಿ ಹೀಗೆ ಬೃಹತ್ ಸಾಲವನ್ನಾಗಿಸುವುದು ಕೊಡಗಿನ ಎಸ್ಟೇಟುಗಳಲ್ಲಿ ವ್ಯಾಪಕವಾಗಿದೆ ಎಂದು ಆದಿವಾಸಿಗಳು ದೂರಿದ್ದಾರೆ. ನಂಜಪ್ಪ ಜನವರಿ ೫ರಂದು ಸಹ ಹೆಂಡತಿ–ಮಕ್ಕಳನ್ನು ಕರೆತರಲು ಪುನಃ ಪ್ರಯತ್ನಿಸಿ ಬರಿಗೈಯಲ್ಲಿ ಬಂದಿದ್ದರು. ಆರಂಭದಿಂದಲೂ ಹೆಂಡತಿ ಮಕ್ಕಳ ಯೋಗಕ್ಷೇಮದ ಬಗ್ಗೆ ದಿಡ್ಡಳ್ಳಿಯ ಇತರರೊಂದಿಗೆ ಯಾವಾಗಲೂ ಚಿಂತೆ ತೋಡಿಕೊಳ್ಳುತ್ತಿದ್ದ ಅವರು ತಮ್ಮ ಕೊನೆಯ ಪ್ರಯತ್ನವೂ ವಿಫಲವಾದಾಗ, ಬೃಹತ್ ಸಾಲವನ್ನು ತೀರಿಸುವ ದಾರಿ ಕಾಣದೆ, ಅದೇ ಕೊರಗಿನಲ್ಲಿ ಹೃದಯಾಘಾತಕ್ಕೆ ಈಡಾಗಿರುವುದು ನಿಶ್ಚಿತ. ಆದರೆ ಈ ಬಗ್ಗೆ ಹಾಡಿಯ ಇತರ ಆದಿವಾಸಿಗಳು ದೂರು ನೀಡಿದರೂ ಕೊಡಗಿನ ಪೊಲೀಸರು ಪ್ರಕರಣ ದಾಖಲಿಸದೆ, ಮೃತರ ಪತ್ನಿಗೂ ಮಾಲೀಕರಿಗೂ 'ರಾಜಿ' ಮಾಡಿಸಿ ಕೈತೊಳೆದುಕೊಂಡಿರುವುದು ಹಲವಾರು ಸಂಶಯಗಳಿಗೆ ಕಾರಣವಾಗಿದೆ.

"ನಮಗೆ ನ್ಯಾಯ, ರಕ್ಷಣೆ ಕೊಡಬೇಕಾಗಿದ್ದೂ ಸಹ ಕೊಡದೆ, ಈ ಎಲ್ಲ ಹಿಂಸೆಗಳಿಗೆ ಕಾರಣರಾಗಿರುವ ಇಲ್ಲಿನ ಎಲ್ಲ ಅಧಿಕಾರಿಗಳ ಭ್ರಷ್ಟಾಚಾರ, ದೌರ್ಜನ್ಯ ಮತ್ತು ಕರ್ತವ್ಯ ಲೋಪಗಳನ್ನು ಕುರಿತು ಉನ್ನತಮಟ್ಟದಲ್ಲಿ ಕೂಲಂಕಷ ತನಿಖೆ ನಡೆಸಿ, ಅವರನ್ನೆಲ್ಲ ಶಿಕ್ಷಿಸಬೇಕು; ನಾವೆಲ್ಲ ಒಂದೇ ಕಡೆ ಇದ್ದರೆ ಮಾತ್ರ ನಮಗೆ ಭದ್ರತೆ ರಕ್ಷಣೆ ಇರುತ್ತದೆ ಎಂದು ನಮಗೆ ಅರ್ಥವಾಗಿದೆ. ಆದ್ದರಿಂದ ನಾವು ಗುಡಿಸಲು ಕಟ್ಟಿಕೊಂಡಿದ್ದ ಜಾಗವನ್ನೇ ಸರ್ಕಾರ ಅರಣ್ಯ ಇಲಾಖೆಯಿಂದ ಕಂದಾಯ ಇಲಾಖೆಯ ವಶಕ್ಕೆ ತೆಗೆದುಕೊಂಡು ನಮಗೆ ಅಲ್ಲಿಯೇ ಜಾಗ ಮನೆ ಎಲ್ಲ ಸೌಲಭ್ಯ ಕೊಡಬೇಕು" ಎಂದು ಆಗ್ರಹಿಸುತ್ತಿರುವ ದಿಡ್ಡಳ್ಳಿಯ ದಿಟ್ಟ ಆದಿವಾಸಿಗಳು, "ಎಷ್ಟೇ ಹಿಂಸೆ ಕೊಟ್ಟರೂ ನಾವು ನಮ್ಮ ಈ ಕಾಡಿನ ಪರಿಸರವನ್ನು ಬಿಟ್ಟು ಎಲ್ಲೂ ಹೋಗುವುದಿಲ್ಲ. ನಮ್ಮನ್ನು ಒಡೆದು ಆಳಲೂ ಅವಕಾಶ ಕೊಡುವುದಿಲ್ಲ" ಎಂದು ಪಟ್ಟು ಹಿಡಿದಿದ್ದಾರೆ.

ದಿಡ್ಡಳ್ಳಿಯ ಆದಿವಾಸಿಗಳು ತಮ್ಮ ಮೇಲೆ ಅಮಾನುಷ ದೌರ್ಜನ್ಯ ನಡೆದರೂ, ಚಳಿ–ಮಳೆಯನ್ನೂ ಲೆಕ್ಕಿಸದೆ ಹೋರಾಟ ನಡೆಸಿ, ಸರ್ಕಾರವನ್ನು ಮಣಿಸಿದ್ದಾರೆ. ಸರ್ಕಾರ ಅವರ ಹಕ್ಕನ್ನು ಮಾನ್ಯ ಮಾಡಿದ್ದು, ಅವರಿಗೆ ಶಾಶ್ವತ ನೆಲೆ ಕಲ್ಪಿಸಲು, ಭೂಮಿ ಒದಗಿಸಲು ಒಪ್ಪಿಕೊಂಡಿರುವುದು ಅವರ ಛಲಬಿಡದ ಹೋರಾಟಕ್ಕೆ ಸಂದ ಗೌರವಾರ್ಹ ವಿಜಯ ಎನ್ನುವುದರಲ್ಲಿ ಸಂಶಯವಿಲ್ಲ.

ದಿಡ್ಡಳ್ಳಿ ಹೋರಾಟವು ರಾಜ್ಯದಾದ್ಯಂತ ಭೂಮಿ–ಮನೆಗಾಗಿ ದಶಕಗಟ್ಟಲೆಯಿಂದ ಹೆಣಗುತ್ತಿರುವ ಬಡವರಲ್ಲಿ ಹೊಸ ಭರವಸೆಯೊಂದನ್ನು ಹುಟ್ಟುಹಾಕಿದ್ದು, ಹಲವಾರು ಕಡೆಗಳಿಂದ ನೆರವಿನ ಕೋರಿಕೆಗಳು ಭೂಮಿ–ವಸತಿ ಹೋರಾಟ ಸಮಿತಿಗೆ ಬರುತ್ತಿವೆ. ಈಗಾಗಲೇ ಸಕಲೇಶಪುರದ ಹಾಲಳ್ಳಿ, ಚಿಕ್ಕಮಗಳೂರಿನ ಸೀಗೋಡು ಮುಂತಾದ ಕಡೆ ಹೊಸದಾಗಿ ಹೋರಾಟ ಶುರುವಾಗಿದೆ. ಶ್ರೀರಂಗಪಟ್ಟಣದ ಹಕ್ಕಿಪಿಕ್ಕಿಗಳ ಸಮಸ್ಯೆ ಸಕಾರಾತ್ಮಕವಾಗಿ ಇತ್ಯರ್ಥವಾಗಿದೆ. ಎಲ್ಲಾ



*ದಿಡ್ಡಳ್ಳಿಯ ಆದಿವಾಸಿಗಳಿಗೆ ತಾತ್ಕಾಲಿಕ ಪುನರ್ವಸತಿ ಸೌಕರ್ಯಗಳ ವ್ಯವಸ್ಥೆ*

ಜಿಲ್ಲೆಗಳಲ್ಲಿ ಜಿಲ್ಲಾ ಸಮಿತಿಗಳ ರಚನೆ ಆರಂಭವಾಗಿದ್ದು, ಬೆಳಗಾವಿ ಅಧಿವೇಶನದಲ್ಲಿ ಸರ್ಕಾರವು ಜನತೆಗೆ ನೀಡಿರುವ ಭರವಸೆಯನ್ನು ಈಡೇರಿಸದಿದ್ದಲ್ಲಿ ಏಪ್ರಿಲ್ ೧೪ರಿಂದ ರಾಜ್ಯಮಟ್ಟದ ಭೂಮಿ–ವಸತಿ ಹಕ್ಕಿನ ಮೂರನೇ ಹಂತದ ನಿರಂತರ ಹೋರಾಟ ಆರಂಭಿಸಲು ಸಮಿತಿ ಸಿದ್ಧತೆಯಲ್ಲಿ ತೊಡಗಿದೆ.

ಅಷ್ಟೇ ಅಲ್ಲದೆ ದಿಡ್ಡಳ್ಳಿಯ ಹೋರಾಟವು ಇನ್ನೂ ಹಲವು ಸಂಗತಿಗಳನ್ನು ಮುಂದೆ ತಂದಿದೆ. ಅವುಗಳಲ್ಲಿ ಮುಖ್ಯವಾಗಿ :

## ಅಭಿನಂದನೆ

ಕರ್ನಾಟಕ ರಾಜ್ಯ ಸರ್ಕಾರದ 'ಪ್ರೊ॥ ಕೆ. ಜಿ. ಕುಂದಣಗಾರ ಗಡಿನಾಡ ಸಾಹಿತ್ಯ ಪ್ರಶಸ್ತಿ'ಯು ಹಸನ್ ನಯೀಂ ಸುರಕೋಡ ಅವರಿಗೆ ಮತ್ತು 'ಸಂಗೊಳ್ಳಿ ರಾಯಣ್ಣ ಪ್ರಶಸ್ತಿ'ಯು ಡಾ॥ ಚೆನ್ನಣ್ಣ ವಾಲೀಕಾರ ಅವರಿಗೆ ಲಭಿಸಿದೆ. ಸನ್ಮಾನಿತರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು.

೧. ಈ 'ಆಧುನಿಕ' 'ಸ್ವತಂತ್ರ' ದೇಶದಲ್ಲೂ ಕೊಡಗಿನಲ್ಲಿ, ಅದರಲ್ಲೂ ವಿಶೇಷವಾಗಿ ದಕ್ಷಿಣ ಕೊಡಗಿನಲ್ಲಿ ಎಲ್ಲ ಶ್ರೀಮಂತ ಫ್ಯೂಡಲ್ ಪ್ಲಾಂಟರುಗಳೂ ಪಕ್ಷಭೇದವಿಲ್ಲದೆ ಒಗ್ಗೂಡಿ 'ಲೈನ್‌ಮನೆ'ಗಳ ನೆರಳಿನಲ್ಲಿ ಆದಿವಾಸಿ–ದಲಿತ–ಹಿಂದುಳಿದವರ ಮೇಲೆ ನಡೆಸುತ್ತಿರುವ ಅಮಾನುಷ ಜೀತ, ಶೋಷಣೆ, ದಬ್ಬಾಳಿಕೆಗಳನ್ನು, ಅದರ ಭಾಗವಾಗಿ ಇಡೀ ಆಡಳಿತಾಂಗವು ಅವರಿಗೆ ಶರಣಾಗಿ ಅವರ ಆಣತಿಯಂತೆ ನಡೆದುಕೊಳ್ಳುತ್ತಿರುವುದನ್ನು ದಿಡ್ಡಳ್ಳಿ ಹೋರಾಟ ಬಯಲುಗೊಳಿಸಿದೆ. ಸ್ವತಃ ಕ್ಯಾಬಿನೆಟ್ ಮಂತ್ರಿಗಳೇ ಸಭೆ ನಡೆಸಿ ನಿರ್ಣಯಿಸಿದ್ದನ್ನು ಸಹ ಅಧಿಕಾರಿಗಳು ಲೆಕ್ಕಕ್ಕೇ ತೆಗೆದುಕೊಳ್ಳದೆ ಕಡೆಗಣಿಸುತ್ತಾರೆ; ಐಜಿಪಿಯೇ ಬಂದು, "ಇಲ್ಲಿಗೆ ಯಾವ ನಕ್ಸಲೀಯರೂ ಬಂದಿಲ್ಲ, ಅಂತಹ ಯಾವುದೇ ಗುಪ್ತಚಾರ ವರದಿಯೂ ಇಲಾಖೆಗೆ ಬಂದಿಲ್ಲ" ಎಂದು ಒತ್ತಿಒತ್ತಿ ಹೇಳಿದ ಮೇಲೂ ಜಿಲ್ಲಾ ಪೊಲೀಸ್ ಮುಖ್ಯಾಧಿಕಾರಿಯು ಸೆಕ್ಷನ್ ೧೪೪ನ್ನು ಮತ್ತೂ ಒಂದು ವಾರ ಕಾಲ ಮುಂದುವರಿಸುವಂತೆ ಜಿಲ್ಲಾಧಿಕಾರಿಗೆ ಶಿಫಾರಸು ಮಾಡಿ ಅದು ಈಡೇರುವಂತೆ ನೋಡಿಕೊಳ್ಳುತ್ತಾನೆ! ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಣಿಯು ತುಂಬಿದ ಸಭೆಯಲ್ಲಿ ಸಮಾಜ ಕಲ್ಯಾಣ ಮಂತ್ರಿಗೇ ಸೆಡ್ಡು ಹೊಡೆಯುತ್ತಾಳೆ!

೨. ದೇಶಕ್ಕೇ ಮಾದರಿ ಆಡಳಿತವನ್ನು ಗುಜರಾತಿನಲ್ಲಿ ನೀಡಿದ್ದೇವೆಂದು ದೇಶವನ್ನು ನಂಬಿಸುವಲ್ಲಿ ಬಹುಮಟ್ಟಿಗೆ ಯಶಸ್ವಿಯಾಗಿರುವ ಬಿಜೆಪಿ ಪಕ್ಷವು, ರಾಜ್ಯದಲ್ಲಿ ಬೇರೆ ಪಕ್ಷಗಳ ಆಡಳಿತವಿದ್ದಾಗಲೂ ಕಳೆದ ೨೫–೩೦ ವರ್ಷಗಳಿಂದ ನಿರಂತರವಾಗಿ ಕೊಡಗನ್ನು ಆಳುತ್ತಿದ್ದರೂ ಇಲ್ಲಿನ ನಿಜವಾದ ಮೂಲನಿವಾಸಿಗಳ, ದಲಿತ–ದಮನಿತರ ಬದುಕಿನಲ್ಲಿ ನರಕವನ್ನೇ ಸೃಷ್ಟಿಸಿರುವುದು. ಯಾವುದೇ ಪ್ರಜಾತಾಂತ್ರಿಕ ನಡವಳಿಕೆಗಳಿಗೆ, ಆಡಳಿತೆಗೆ ಅವಕಾಶ ಇಲ್ಲದಂತೆ ಮಾಡಿ, ಬರೀ ದೊಂಬಿ–ದ್ವೇಷದ, ಜನಸಾಮಾನ್ಯರ ಪಾಲಿಗೆ ನಿರಂತರ ಅಭದ್ರತೆ, ಉಸಿರುಗಟ್ಟಿಸುವಂತಹ ವಾತಾವರಣ ಸೃಷ್ಟಿ ಮಾಡಿರುವುದು.

೩. ಯಾವುದೇ ಪಕ್ಷದ ಸರ್ಕಾರವಿರಲಿ, ಅದು ದಲಿತ–ದಮನಿತ ಸಮುದಾಯಗಳಿಗೆ ದಿಟ್ಟವಾದ ರಾಜಿರಹಿತ ಹೋರಾಟದ ಹೊರತು ಕಿಂಚಿತ್ತನ್ನೂ ಕೈಯಾರೆ ಕೊಡುವುದಿಲ್ಲ ಎನ್ನುವ ಸತ್ಯ ಮತ್ತೊಮ್ಮೆ ಜಾಹೀರಾಗಿರುವುದು.

೪. ಇಂತಹ ಅತ್ಯಂತ ದಮನಿತ ಸಮುದಾಯಗಳು ಯಾವ ನೆರವು–ಬೆಂಬಲಗಳೂ ಇಲ್ಲವೆಂದು ಹತಾಶರಾಗುವ ಪರಿಸ್ಥಿತಿ ಇದ್ದಾಗಲೂ, ಒಂದು ದಿಟ್ಟ–ಪ್ರಾಮಾಣಿಕ ಸಂಘಟನೆಯ ಕರೆಗೆ ರಾಜ್ಯವ್ಯಾಪಿ ಸ್ಪಂದನ ವ್ಯಕ್ತವಾಗಿ, ನೊಂದವರಿಗೆ ನೆರವು–ಬೆಂಬಲಗಳ ಮಹಾಪೂರವೇ ಹರಿದುಬಂದು, ಅವರನ್ನು ಅನಾಥ–ಅತಂತ್ರರಾಗದಂತೆ ಕಾಪಾಡಿಕೊಳ್ಳುವ ಮೂಲಕ, ಈ ನಾಡಿನಲ್ಲಿ ಸಾಮಾಜಿಕ ಕಾಳಜಿ, ಸಮಷ್ಟಿ ಹಿತದ ಪ್ರಜ್ಞೆ–ಸಂವೇದನೆ ಸತ್ತಿಲ್ಲವೆಂದು ಸಾಬೀತುಪಡಿಸಿರುವುದು.

**ಸಿರಿಮನೆ ನಾಗರಾಜ್**
ನಂ. ೨೮/೧೦೨, ವಳಗೆರೆ ಹಳ್ಳಿ ಮುಖ್ಯರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು

# ಒಂದು ಸಾರಿ ಮೆಲ್ಲಗೆ ಓದಿ ನೋಡಿರಿ






೧

ಎನ್ನೆದೆಯನು ಹದಗೊಳಿಸಿಕೊಂಡು
ಬೀಜಗಳನು ಹುದುಗಿಸಿಕೊಂಡಿದ್ದೆ ಗೆಳತಿ
ನೀನು ಮಳೆಯಾಗಿ ಹೂವು ಅರಳಿಸಬಹುದೆಂದು
ಆದರೆ ಚಲಿಸುವ ಮೋಡವಾಗಿ ಮರೆಯಾದೆ
ಮರೆವ ಕುರುವಿಗಾಗಿ ಕವಿತೆಯಾಗಿರುವೆ
ಒಂದು ಸಾರಿ ಮೆಲ್ಲಗೆ ಓದಿ ನೋಡು.

೨

ಗೆಳೆಯ, ಹಾದಿಯುದ್ದಕ್ಕೂ ನೀನು
ಹಾವಾಗಿ ಹರಿದಾಡಿದ ಕಾರಣ
ತಂತಿಯ ಮೇಲೆ ನಡೆದು
ಹೇಗೊ ದಡ ಸೇರಿದೆ ನಾನು
ಕಾಡಿದ್ದಕ್ಕೆ ಕವಿತೆಯಾಗಿರುವೆ ನೀನು
ಒಂದು ಸಾರಿ ಮೆಲ್ಲಗೆ ಓದಿ ನೋಡು.

೩

ಸುಡುಬಿಸಿಲು, ಕಡುಬಡತನದ ನಡುವೆಯೂ
ಅಕ್ಷರಲೋಕದಲಿ ನನ್ನನೊಂದು ಮೊಗ್ಗಾಗಿ
ಬಿರಿಯುವಂತೆ ಬದುಕು ಸವೆಸಿದ ಅವ್ವ
ಅನಕ್ಷರಸ್ಥಳಾಗಿದ್ದರೂ ನೀನು ಅಕ್ಷರವಾಗಿರುವೆ
ಒಂದು ಸಾರಿ ಈ ಕವಿತೆಯ ಮೇಲೆ ಕಣ್ಣಾಡಿಸಿ ನೋಡು.

೪

ಧರ್ಮ, ಕರ್ಮದ ನೆಪದಲ್ಲಿ ಬಣ್ಣದ ಬಟ್ಟೆ ತೊಟ್ಟವರೆ!
ಅಣ್ಣನ ಕಾಯಕ, ಗಡಿ ಗೋಡೆ ಮೀರಿ ಅರಳಿ ಪರಿಮಳ ಸೂಸುವ
ಸುಮಗಳ ನಿಸ್ವಾರ್ಥತೆಯನರಿಯದ ಕಾರಣ ನೀವು ಕವಿತೆಯಾಗಿದ್ದಿರಿ
ಒಂದು ಸಾರಿ ಮೆಲ್ಲಗೆ ಈ ಕವಿತೆ ಓದಿ ನೋಡಿರಿ.

**ಕೆ. ಬಿ. ವೀರಲಿಂಗನಗೌಡ್ರ**
ಎಸ್. ಆರ್. ಜಿ. ಹೆಚ್. ಎಂ. ಪ್ರೌಢಶಾಲೆ, ಸಿದ್ದಾಪುರ – ೫೮೧ ೩೫೫, ಉತ್ತರ ಕನ್ನಡ ಜಿಲ್ಲೆ



# ಯುರೇನಸ್ ಗುರುತಿಸುವ ಅವಕಾಶ

**ಸಾ**ಮಾನ್ಯವಾಗಿ ಬರಿಗಣ್ಣಿಗೆ ಕಾಣುವ ಐದು ಗ್ರಹಗಳ ವಿವರಣೆಯನ್ನು ಮಾತ್ರ ಈ ನಭಾವಲೋಕನದಲ್ಲಿ ಕೊಡುತ್ತಾ ಬಂದಿದ್ದೇವೆ. ಆದರೆ ಯುರೇನಸ್ ಮತ್ತು ನೆಪ್ಚೂನ್ – ಇವನ್ನು ದುರ್ಬೀನಿನಿಂದ ನೋಡಬಹುದು. ಕ್ಯಾಮೆರಾ ಹೆಚ್ಚು ಹೊತ್ತು ಎಕ್ಸ್‌ಪೋಷರ್ ಕೊಟ್ಟರೆ ದಾಖಲಾಗುತ್ತದೆ. ಯುರೇನಸ್ ಗ್ರಹವನ್ನು ಕ್ಯಾಮೆರಾದಲ್ಲಿ ಹಿಡಿಯಲು ಒಳ್ಳೆಯ ಅವಕಾಶ ೨೭ರಂದು ಇದೆ. ಆ ದಿನ ಅದು ಮಂಗಳದಿಂದ ಅರ್ಧ ಡಿಗ್ರಿ ಅಂತರದಲ್ಲಿ ಇರುತ್ತದೆ. ಆದ್ದರಿಂದ ೨೬, ೨೭, ೨೮ ಈ ದಿನಗಳಂದು ಮಂಗಳದ ಚಿತ್ರ ತೆಗೆದರೆ ಅದರ ಅಕ್ಕ ಪಕ್ಕ ಕೆಲವೊಂದು ಚುಕ್ಕೆಗಳು ಮೂಡುತ್ತವೆ. ಸೂಕ್ಷ್ಮವಾಗಿ ಗಮನಿಸಿದರೆ, ಒಂದು ಚುಕ್ಕೆ ಸ್ಥಳ ಬದಲಿಸಿರುವುದು ತಿಳಿಯುತ್ತದೆ. ಅದೇ ಯುರೇನಸ್. ಆದರೆ ಮಂಗಳವನ್ನು ಗುರುತಿಸುವುದು ಹೇಗೆ?

ಸಂಜೆಯ ಆಕಾಶದಲ್ಲಿ ಶುಕ್ರ ಮತ್ತು ಮಂಗಳ ಪಶ್ಚಿಮದಲ್ಲಿ ಪಕ್ಕಪಕ್ಕದಲ್ಲಿಯೇ ಕಾಣುತ್ತವೆ. ಶುಕ್ರವನ್ನು ಗುರುತಿಸಲು ಯಾರದೇ ಸಹಾಯ ಬೇಕಿಲ್ಲ. ಇವೆರಡೂ ಮೀನರಾಶಿಯಲ್ಲಿವೆ. ತಿಂಗಳ ಕೊನೆಗೆ ಎರಡರ ಅಂತರ ಹೆಚ್ಚುವುದನ್ನು ಕಾಣಬಹುದು.

ಕಳೆದ ತಿಂಗಳು ಚಂದ್ರ ರೋಹಿಣಿಯನ್ನು ಮರೆ ಮಾಡಿದ ಘಟನೆಯನ್ನು ಅನೇಕರು ನೋಡಿರಬಹುದು. ಈ ತಿಂಗಳಲ್ಲೂ ಅಂತಹ ಅವಕಾಶವಿದೆ; ನಮಗಲ್ಲ. ಆದರೆ, ಫೆಬ್ರವರಿ ೫ರಂದು ರೋಹಿಣಿಯ ಪಕ್ಕದಲ್ಲಿ ಚಂದ್ರನನ್ನು ನೋಡ ಬಹುದು. ಇದೇ ರೀತಿ ಮಘ ನಕ್ಷತ್ರದ ಸನಿಹದಲ್ಲಿಯೇ ಚಂದ್ರನನ್ನು ನೋಡುವ ಅವಕಾಶವೂ ಇದೆ. ಇದು ಫೆಬ್ರವರಿ ೧೧ರಂದು ನಡೆಯಲಿದೆ. ಈ ಎರಡೂ ಸಂದರ್ಭಗಳಲ್ಲಿ ನಮಗೆ ಕಾಣಿಸುವ ಚಂದ್ರ – ನಕ್ಷತ್ರ ಜೋಡಿ ಕೆಲವೇ ಗಂಟೆಗಳಲ್ಲಿ ಆಚ್ಛಾದನೆಯನ್ನು ಪ್ರದರ್ಶಿಸುತ್ತವೆ ಎಂದು ಅರ್ಥಮಾಡಿಕೊಳ್ಳಬಹುದು. ಇದರಿಂದ ಚಂದ್ರನ ಚಲನೆಯ ವೇಗವನ್ನು ತಿಳಿದುಕೊಳ್ಳಬಹುದು.

ಫೆಬ್ರವರಿ ೧೧ರಂದು ಹುಣ್ಣಿಮೆ. ಆ ದಿನ ಚಂದ್ರ ಭೂಮಿಯ ನೆರಳಿನ ಅಂಚನ್ನು ಹಾದುಹೋಗುತ್ತದೆ. ಇದು ಪಾರ್ಶ್ವ ಛಾಯಾಗ್ರಹಣ; ಬರಿಗಣ್ಣಿಗೆ ಚಂದ್ರನ ಬೆಳಕಿನಲ್ಲಿ ಏನೂ ವ್ಯತ್ಯಾಸ ಗೋಚರಿಸುವುದಿಲ್ಲ. ಹೀಗೆ ಹುಣ್ಣಿಮೆಯ ಚಂದ್ರ ಮಘ ನಕ್ಷತ್ರದ ಬಳಿಯೇ ಇರುವುದರಿಂದ ಈ ತಿಂಗಳ ಹೆಸರು ಮಾಘ. ೨೬ರ ಅಮಾವಾಸ್ಯೆಯಂದು ಸೂರ್ಯಗ್ರಹಣವಿದೆ. ಆಗ ಚಂದ್ರನ ನೆರಳು ಅಟ್ಲಾಂಟಿಕ್ ಸಾಗರದ ಮೇಲೆ ಬೀಳುತ್ತದೆ. ನಮಗೆ ಗ್ರಹಣ ಕಾಣುವುದಿಲ್ಲ.

೧೬ರ ಮುಂಜಾವು ಚಂದ್ರ, ಚಿತ್ರಾ ಮತ್ತು ಗುರು

ಗುರುಗ್ರಹ ಚಿತ್ರಾ ನಕ್ಷತ್ರದ ಸಮೀಪವೇ ಇದೆ. ೨೩ರಂದು ಅವೆರಡರ ನಡುವಿನ ಅಂತರ ಕನಿಷ್ಠ. ೧೫ರಂದು ಚಂದ್ರ ಇವೆರಡರ ಜೊತೆ ಗುಂಪುಗೂಡುತ್ತದೆ. ಇದಾದ ಮೇಲೆ ಗುರು ಮತ್ತು ಚಿತ್ರಾ ನಡುವಿನ ಅಂತರವನ್ನು ಗಮನಿಸುತ್ತಾ ಬಂದರೆ ಅದರ ಹಿನ್ನಡೆ ಕಂಡುಬರುತ್ತದೆ. ಅಂದರೆ ಕನ್ಯಾದಿಂದ ತುಲಾರಾಶಿಯತ್ತ ಚಲಿಸುವ ಬದಲು ಅದು ಹಿಂದಿನ ರಾಶಿ ಸಿಂಹರಾಶಿಯ ದಿಕ್ಕಿನತ್ತ ಚಲಿಸುತ್ತದೆ. ಸುಮಾರು ೬ ತಿಂಗಳಾದ ಮೇಲೆ ಪುನಃ ಚಿತ್ರಾದತ್ತ ಹಿಂದಿರುಗುತ್ತದೆ.

ಈ ತಿಂಗಳ "ಅರ್ಧ ಚಂದ್ರ"ಗಳನ್ನು ಕ್ಯಾಮೆರಾದಲ್ಲಿ ಸೆರೆಹಿಡಿಯಲು ಪ್ರಯತ್ನಿಸಿ. ಅಂದರೆ ೧೫ ದಿನಗಳ ಅಂತರದಲ್ಲಿ ಕಾಣುವ ಅರ್ಧಗಳು. ೬ರಂದು ಮತ್ತು ೧೮ರಂದು ಭೂಮಿಯಿಂದ ಚಂದ್ರನ ದೂರ ಕ್ರಮವಾಗಿ ಕನಿಷ್ಠ ಮತ್ತು ಗರಿಷ್ಠ ಆಗಿರುತ್ತದೆ. ಆದ್ದರಿಂದ ಅವುಗಳ ಚಿತ್ರಗಳನ್ನು ಹೋಲಿಸಿ (ದೂರದ ಕಾರಣ ಉಂಟಾಗುವ) ಗಾತ್ರದ ವ್ಯತ್ಯಾಸವನ್ನು ತಿಳಿಯಬಹುದು.

ಶನಿಗ್ರಹ ಬೆಳಗಿನ ಜಾವ ಕಾಣುವುದು. ೨೧ರಂದು ಚಂದ್ರನ ಪಕ್ಕವೇ ಇರುವುದು. ಬುಧ ಗ್ರಹ ತಿಂಗಳ ಮೊದಲ ಭಾಗದಲ್ಲಿ ಮುಂಜಾವಿನಲ್ಲಿ ಕಾಣುವುದು.

**ಫೆಬ್ರವರಿ ತಿಂಗಳ ಖಗೋಳ ದಿನಚರಿ**

೧ ಸಂಜೆ ಮಂಗಳ – ಚಂದ್ರ ಜೋಡಿ*
೪ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ಮಧ್ಯರಾತ್ರಿಗೆ)
೬ ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
ಗುರುಗ್ರಹದ ಹಿನ್ನಡೆ ಆರಂಭ
೧೧ ಹುಣ್ಣಿಮೆ ೦೬:೦೩ಕ್ಕೆ
ಪಾರ್ಶ್ವಛಾಯಾಗ್ರಹಣ* (೦೪:೦೨ರಿಂದ ೦೮:೨೬ರವರೆಗೆ)
೧೫ ಗುರು – ಚಂದ್ರ ಜೋಡಿ*
೧೭ ಶುಕ್ರ ಗ್ರಹದ ಗರಿಷ್ಠ ಪ್ರಕಾಶ
೧೮ ಚಾಂದ್ರಮಾಸದ ಕೊನೆಯ ಪಾದ (ಚಂದ್ರಾಸ್ತ ನಡುರಾತ್ರಿಗೆ)
ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೨೧ ಚಂದ್ರ – ಶನಿ ಜೋಡಿ*
೨೩ ಗುರು – ಚಿತ್ರಾ ನಡುವೆ ಕನಿಷ್ಠ ಅಂತರ*
೨೬ ಅಮಾವಾಸ್ಯೆ ೨೦:೨೮ಕ್ಕೆ. ಸೂರ್ಯಗ್ರಹಣ ಭಾರತಕ್ಕೆ ಕಾಣುವುದಿಲ್ಲ
೨೭ ಮಂಗಳ – ಯುರೇನಸ್ ಜೋಡಿ*
೨೮ ಶುಕ್ರ – ಚಂದ್ರ ಜೋಡಿ*

*(* ಛಾಯಾಗ್ರಹಣಕ್ಕೆ ಸದವಕಾಶ)*

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

ಒಂದು ಆಪರೇಶನ್ ಥೇಟರ್, ಅದರ ಬಾಜೂ ಒಂದು ಆಯ್.ಸಿ.ಯು. ಕೋಣೆ. ಅದರೊಳಗ ಹೆಚ್ಚಂದ್ರ ಆರು ಮಂದಿನ್ನ ಇಡಾಕ ಸಾಧ್ಯ. ಅದು ಹೆಸರಿಗಿ ಎ. ಸಿ. ಕೋಣೆ, ಎ. ಸಿ. ಕೆಟ್ಟು ಎರಡು ವರ್ಷ ಆಯ್ತು. ಆ ರೂಮ ಕಟ್ಟೂ ಮುಂದೇ ಎ. ಸಿ. ಕೋಣೆ ಅಂತ ಕಟ್ಟಿದ್ದರಿಂದ ಎಲ್ಲೂ ಗಾಳಿ ಆಡಾಕ ಕಿಡಕಿ ಇರಲಿಲ್ಲ. ಇದ್ದ ಸಣ್ಣ ಸಣ್ಣ ಕಿಡಕಿಗೂ ಗ್ಲಾಸ್ ಫಿಕ್ಸ್ ಮಾಡಿದ್ದರು. ಏನೇಏನರೆ ಆಗಿ ಆಯ್.ಸಿ.ಯು. ಕೋಣೆಗೆ ಶಿಫ್ಟ್ ಆದರ ಪೇಷೆಂಟ್‌ಗಳು ಉಸರಾಡೂದೇ ಕಷ್ಟ ಆಗಿ, ಜೀವ ಕಣ್ಣಾಗ ಹಿಡದಂಗ ಮಾಡತಿದ್ದರು. ಆ ಸಂಬಂಧ ಡಾಕ್ಟರ್ ಮಹೇಶ ಹತ್ತಾರು ಬಾರಿ ಪತ್ರ ಬರದರೂ ಅದನ್ನ ಸರಿ ಮಾಡಿರಲಿಲ್ಲ. ಡಾಕ್ಟರ ರೂಮಂತೂ ಬಾಳ ಸಣ್ಣದು. ಒಳಗ ಹೋಗಬೇಕಾದರೂ ಕಾಲಾಗ ಬಿದ್ದಿರೋ ರಟ್ಟಿನ ಡಬ್ಬಿ, ಔಷಧಿ ಬಾಟಲಿ, ನಿರೋಧ ಪೊಟ್ಟಣ ದಾಟಕೊಂಡೇ ಹೋಗಬೇಕಿತ್ತು. ಅಲ್ಲಿಗೆ ಹೋಗಿ ಬರೋ ಪೇಷೆಂಟ್‌ಗಳೆಲ್ಲಾ ಡಾಕ್ಟರ್ ತಿಪ್ಪಿಯೊಳಗ ಕುಂತಂಗ ಆಗ್ಯೆತಿ, ಕಸಾ ಸೈತ ಹೊಡಿಯವರು ಇಲ್ಲೋ ಹ್ಯಾಂಗ ಅಂತಿದ್ದರು.

# ಸ್ಥಿತಿ

**ಡಾ॥ ಎಸ್. ಬಿ. ಜೋಗುರ**

ಅದು ಬೇನಾಮಪುರದ ಸರಕಾರಿ ಹೆರಿಗೆ ಆಸ್ಪತ್ರೆ. ಮಹಾರಾಷ್ಟ್ರದ ಗಡಿ ಭಾಗದಲ್ಲಿರೋ ಈ ದವಾಖಾನೇಲಿ ಸದಾ ಗೌಜಿ, ಗದ್ದಲ. ಸುತ್ತ ಇಪ್ಪತ್ತು ಹಳ್ಳಿಗಳಿಗೆ ಇದ್ದದ್ದು ಇದೊಂದೇ ಆಸ್ಪತ್ರೆ. ಹಿಂಗಾಗಿ ಬಾಣಂತನ, ಆಪರೇಶನ್, ಜಡ್ಡು ಜಾಪತ್ರಿ ಅಂತೆಲ್ಲಾ ಹೇಳಿ ಜನಾ ಒಂದೇ ಸವನೇ ದವಾಖಾನಿ ಮುಂದ ಮುಕರಿರತಿದ್ದರು. ಹೊತ್ತ ಹೊಂಡೂದೇ ತಡ, ಪಾಳಿ ಸುರು ಆಗತಿತ್ತು. ಇಲ್ಲಿರೋ ಕಂಪೌಂಡರ್ ಶಾಮಣ್ಣಗ ಭಯಂಕರ ಡಿಮ್ಯಾಂಡು. ಡಾಕ್ಟರ್ ಯಾವಾಗ ಬರ್ತಾರ... ಊರಾಗ ಅದಾರೋ ಇಲ್ಲೋ... ಆ ದಿವಸ ಎಷ್ಟು ಆಪರೇಶನ್ ಅದಾವ ಇವೆಲ್ಲದರ ಲೆಕ್ಕ ಆ ಕಂಪೌಂಡರ್ ಶಾಮಣ್ಣನ ಹತ್ತರ ಇರತಿತ್ತು. ಪಾಳಿ ಬಾಳ ದೊಡ್ಡದಿತ್ತಂದ್ರ, ಅದರ ರಿವಾಜು ಮುರದು ಒಳಗ ಹೋಗಾಕ ಇಪ್ಪತ್ತು ರೂಪಾಯಿ ತಗದು ಕೊಟ್ಟರ ಐತು, ಸನ್ನೆ ಮಾಡಿ ಒಳಗ ಬಿಡತಿದ್ದ. ಪಾಳಿಗಿ ನಿಂತ ಮಂದಿ "ಏ..ಶಾಮಣ್ಣ, ಏನಿದು...?" ಅಂತ ಕೂಗದರ, "ಅವರು ನಿನ್ನೆನೇ ಬಂದಿದ್ದರು, ಬರೀ ಗುಳಗಿ ತೋರಸಿ ಬರಾಕ ಹೋಗ್ಯಾರ" ಅಂತಿದ್ದ. ಆ ದವಾಖಾನಿಯೊಳಗ ಇದ್ದದ್ದೇ ಇಬ್ಬರು ಡಾಕ್ಟರು, ಅದೂ ಅವರಿಬ್ಬರೂ ಗಂಡ-ಹೆಂಡತಿ. ಅದೇ ತಾಲೂಕಿನವರು ಅಂಥೇಳಿ ಐದಾರು ವರ್ಷದಿಂದ ಅಲ್ಲೇ ಉಳದಿದ್ದರು. ದವಾಖಾನಿ ಹಿಂದಿನ ಬಾಜೂನೇ ಅವರಿಗಿ ಉಳಿಲಾಕ ಕ್ವಾಟರ್ಸ್ ಇದ್ದರೂ ಅವುಗಳನ್ನ ನರ್ಸಗಳಿಗಿ ಬಿಟ್ಟುಕೊಟ್ಟು ಅವರು ಊರೊಳಗ ಮನಿ ಮಾಡಿಕೊಂಡಿದ್ದರು. ಮೊದಮೊದಲ ಅವರು ಅಲ್ಲೇ ಇರತಿದ್ದರು ಬೆಳ್ಳಬೆಳತನಕ ಪೇಷಂಟಗಳು ಮಲಗಾಕ ಬಿಡತಿರಲಿಲ್ಲ. ಅದಕ್ಕೇ ಡಾಕ್ಟರ ಸಿಟ್ಟೀಲೇ, "ಉಚ್ಚಿ ಹೊಯ್ಯಾಕ ಸೈತ ಬಿಡೂದಲ್ಲವಲ್ರೋ" ಅಂತಿದ್ದ. ಹೆಂಡತಿ ಪರಿಮಳಾ ಇದು ಹಿಂಗೇ ಆದರ ತಮಗ ಒಂಚೂರೂ ಖಾಸಗಿ ಜೀವನ ಅನ್ನೂದೇ ಇರದಂಗ ಆಗತೈತಿ ಅಂತ ಹೇಳಿ, ಕ್ವಾಟರ್ಸ್ ಬಿಟ್ಟು ಬ್ಯಾರೆ ಕಡಿ ಮನಿ ಮಾಡಿದ್ದರು. ಡಾಕ್ಟರ್



ಮಹೇಶ ಮೊದಮೊದಲು ಬಾಳ ಮುತುವರ್ಜಿವಹಿಸಿ ರೋಗಿಗಳನ್ನ ನೋಡತಿದ್ದರು. ಹಂಗ ನೋಡದ ಮ್ಯಾಲೂ ಜನ ಅಲ್ಲಿನ ಲೋಕಲ್ ಲೀಡರ್‌ಗಳ ಮುಂದ ಡಾಕ್ಟರ್ ಮ್ಯಾಲ ಸುಮಸುಮ್ನೇ ಕಂಪ್ಲೇಂಟ್ ಮಾಡಾಕ ಸುರು ಮಾಡಿದರು. ಆವಾಗಿನಿಂದ ಡಾಕ್ಟರ್ ಮಹೇಶ ಬದಲಾಗಿದ್ದ. ಅವನ ಹೆಂಡತಿ ಪರಿಮಳಾ ಮತ್ತ ಮತ್ತ "ಇವಕ್ಕ ಎಟ್ಟು ಮಾಡಿದರೂ ಅಷ್ಟೇ..." ಅಂತಿದ್ದಳು. ಆ ದವಾಖಾನಿಯೊಳಗ ಇದ್ದದ್ದೇ ಹನ್ನೆರಡು ಬೆಡ್, ಬರೋ ಪೇಷೆಂಟ್ ನೋಡದರ ನೂರಾರು. ಇನ್ನ ಹೆರಿಗಿಗಿ ಬರೋ ಪೇಷೆಂಟಗಳನ್ನ ತಿರುಗಿ ಕಳಸಾಕ ಬರೂದಿಲ್ಲ, ಹಂಗೇ ಟ್ಯೂಬೆಕ್ಟಮಿ ಶಸ್ತ್ರಚಿಕಿತ್ಸೆಗೆ ಬರವರನ್ನೂ ಹೊಳ್ಳಿ ಕಳಸಾಕ ಬರುವಂಗಿಲ್ಲ. ಆ ದವಾಖಾನಿ ಹೊರಗಡೆ ಸುಣ್ಣ ಬಣ್ಣ ಬಳಕೊಂಡು ನೀಟಾಗಿ ಕಂಡರೂ ಒಳಗ ಹಕೀಕತ್ ಬ್ಯಾರೇನೇ ಇತ್ತು. ಲ್ಯಾಬ್‌ಅಂತೂ ಒಂದೇ ಸವನ ಹೊಲಸ ನಾರತಿತ್ತು. ಇದ್ದ ಸ್ಟಾಫ್ ಮ್ಯಾಲೇ ಅದನ್ನ ಕಾಯ್ಕೊಂಡು ಸ್ವಚ್ಛ ಇಟ್ಗೊಳುದಂದ್ರ ಆಗ್ತಿರಲಿಲ್ಲ. ಕಸ ಗುಡಿಸೋ ಶಂಕ್ರಮ್ಮ ಬೇಕೂ ಬೇಕೂ.. ಬ್ಯಾಡ ಬ್ಯಾಡ ಅನ್ನೂವಂಗ ಸ್ವಚ್ಛ ಮಾಡಿ ನಡದುಬಿಡತಿದ್ದಳು. ಟಾಯ್ಲೆಟ್ ಮತ್ತು ಬಾತರೂಮ್ ಕ್ಲೀನ್ ಮಾಡಾಕ ಬರೋ ಚಂದ್ರಪ್ಪ ವಾರದಾಗ ಎರಡು ದಿನ ಗಾಯಬ್ ಆಗಿಬಿಡತಿದ್ದ. ಆಗ ಇಡೀ ಆಸ್ಪತ್ರೆ ಗಬ್ಬೋ ಗಬ್ಬು... ಡಾಕ್ಟ್ರಂತೂ ಮೂಗು ಮುಚ್ಚಿಕೊಂಡೇ ತಿರುಗೋದಿತ್ತು. ಅಮಾವಾಸ್ಯೆ ಮುಗಿದು ಹುಣ್ಣಿಮೆ ಸಮೀಪ ತೇಲುವಂಗ ಕಾಣಿಸಿಕೊಳ್ಳೋ ಆ ಚಂದ್ರಪ್ಪಗ ಒಂದು ಮಾತು ಅನ್ನೂವಂಗೂ ಇರಲಿಲ್ಲ, ಹಂಗೇನಾದರೂ ಅಂದ್ರ ವಾರಗಟ್ಟಲೆ ನಾಪತ್ತೆ. ಅವನ್ನ ಬಿಟ್ಟರ ಆ ದವಾಖಾನಿಗಿ ಬ್ಯಾರೆ ಯಾರೂ ಗತಿ ಇಲ್ದಂಗ ಆಗಿತ್ತು. ಆ ದವಾಖಾನಿಯೊಳಗ ಮೂರು ಜನ ನರ್ಸ್‌ಗಳು ಇದ್ದರು. ಅದರಲ್ಲಿ ಚಂಪಾ ಅನ್ನೂವಕ್ಕಿ ತುಸು ಸೀನಿಯರ್, ಆಕಿ ನರ್ಸ್ ಕಂ ಅನಿಸ್ತೀಸಿಯಾ ಕೊಡೊ ಡಾಕ್ಟ್ರ ಆಗಿ ಕೆಲಸಾ ಮಾಡತಿದ್ದಳು. ಇನ್ನಿಬ್ಬರಲ್ಲಿ ಒಬ್ಬಳು ಲೀನಾ ಅಂತ, ಬಂದು ಇನ್ನೂ ಆರು ತಿಂಗಳು ಆಗಿರಲಿಲ್ಲ. ಮತ್ತೊಬ್ಬಳು ರಜನಿ ಇಡೀ ಆಸ್ಪತ್ರೆಯಲ್ಲಿ ಹೆಚ್ಚು ಜನಪ್ರಿಯ ಆಗಿರೋ ಹೆಸರಂದ್ರ ಈ ರಜನಿದು. ಆಕಿ ಎಲ್ಲಾ ರೋಗಿಗಳನ್ನ ತುಸು ಹಚಕೊಂಡು ವ್ಯವಹರಿಸೋದರಿಂದ ಬರವರೆಲ್ಲಾ "ರಜನಿ ಸಿಸ್ಟರ್ ಎಲ್ಲಿ...?" ಅಂತೇ ಕೇಳತಿದ್ದರು. ಬಾಳ ಸಾರಿ ಚಂಪಾ ಸಿಟ್ಟೀಲೇ, "ನನ್ನನ್ನೇನು ಕೇಳ್ತೀರಿ ಅದಾಳಲ್ಲ ನಿಮ್ಮ ರಜನಿ ಸಿಸ್ಟರ್ ಆಕಿನ್ನ ಕೇಳ್ರಿ" ಅಂತಿದ್ದಳು. ಅದನ್ನ ಕಿವಿಯಾರೆ ಕೇಳಿಯೂ ರಜನಿ ಬೇಸರ ಮಾಡ್ಕೊತಿರಲಿಲ್ಲ. ಡಾಕ್ಟರ್ ಮಹೇಶ ಮಾತ್ರ ಪೇಷೆಂಟ್ ಜೋಡಿ ಒಂದು ಕಮ್ಮಿ ಎರಡು ಜಾಸ್ತಿ ಅನ್ನೂವಂಗ ಮಾತಾಡತಿದ್ದ. ಅವನ ಹೆಂಡತಿ ಡಾಕ್ಟರ್ ಪರಿಮಳಾ ಮಾತು ಮತ್ತೂ ದುಬಾರಿ. ಆಕಿ ಬರೀ ಹುಂ...ಉಹುಂ ಅನ್ನೋಂತೇ ಐದು ವರ್ಷ ಆ ದವಾಖಾನಿಯೊಳಗ ಸರ್ವಿಸ್ ಮಾಡಿದ್ದಳು. ಒಂದಿತ್ತು ಒಂದಿಲ್ಲ ಅಂದರೂ ಗಂಡ–ಹೆಂಡ್ತಿ ಕೂಡಿ ದಿನ್ನಾ ಹೆಚ್ಚು ಕಮ್ಮಿ ಹತ್ತು ಆಪರೇಶನ್ ಮಾಡ್ತಿದ್ದರು.

ಬೇನಾಮಪುರದೊಳಗ ಬಾಳ ಓದಿದವರು, ನೌಕರಿ ಮಾಡವರು ಕಡಿಮಿ, ಒಕ್ಕಲುತನ ಮಾಡವರೇ ಹೆಚ್ಚು. ಬರ ಅನ್ನೋದು ಆ ಊರ ಬೆನ್ನಿಗಿ ಬಿದ್ದಂಗ ಆಗಿತ್ತು. ಹಂಗಾಗಿ ಅಲ್ಲಿ ಬಡತನ ಬಾಳ, ಹಂಗೇ ಮಕ್ಕಳೂ ಬಾಳ. ಊರಿನ ಜನಸಂಖ್ಯೆ ಹೆಚ್ಚೂ ಕಡಿಮಿ ಐದು ಸಾವಿರ. ಅದರೊಳಗ ದಲಿತರೇ ಹೆಚ್ಚೂ ಕಡಿಮಿ ಎರಡು ಸಾವಿರದಷ್ಟಿದ್ದರು. ಅಂಗನವಾಡಿ ಕಾರ್ಯಕರ್ತೆಯರು ಅವರ ಕೇರಿಯೊಳಗ ಹೋಗಿ, "ಈಗರೇ ಆಪರೇಶನ್ ಮಾಡಕೋರಿ ನಾಲ್ಕು, ಐದು ಮಕ್ಕಳಾದ್ರ ನಿಮಗೇ ಕಷ್ಟ" ಅಂತೆಲ್ಲಾ ಹತ್ತಾರು ಸಾರಿ ಹೇಳಿದ ಮ್ಯಾಗ, ಆರು ತಿಂಗಳಿಗಿ ಒಬ್ಬರೋ... ಇಬ್ಬರೋ... ಬಂದು ಆಪರೇಶನ್ ಮಾಡಸ್ಕೊಂತಿದ್ದರು. ಇಲ್ಲೀಮಟ ಡಾಕ್ಟರ್ ಮಹೇಶ ಈ ಊರಿಗಿ ಬಂದಮ್ಯಾಲ ಮಾಡಿದ ಟ್ಯೂಬೆಕ್ಟಮಿ ಶಸ್ತ್ರಚಿಕಿತ್ಸೆ ಹೆಚ್ಚೂ ಕಮ್ಮಿ ನೂರು ದಾಟಿತ್ತು. ಅದರಾಗ ಒಂದು ಕಲಾಸ್ ಆಗಿದ್ದೂ ಇತ್ತು. ಆವಾಗ ಇಡೀ ಊರ ಮಂದಿ ಡಾಕ್ಟರ್ ಮ್ಯಾಲ ಏರಿ ಬಂದಿದ್ದಿತ್ತು. ಅಂಥಾ ವ್ಯಾಳೆದೊಳಗ ಆ ಡಾಕ್ಟ್ರನ್ನ ಕಾಪಾಡಿದ್ದು ಆ ಊರಿನ ಪಂಚಾಯತಿ ಲೀಡರ್ಸ್. ಸತ್ತ ಹೆಣಮಗಳು ಕೆಳಗಿನ ಕೇರಿಯವಳು. ಪಂಚಾಯತಿ ಲೀಡರ್ಸ್ ಡಾಕ್ಟ್ರ ಜಾತಿ ಹಿಡಕೋಂಡು ಬಚಾವ್ ಮಾಡಿದ್ದರು. ಆಪರೇಶನ್ ಆದಿಂದ ಪೇಷೆಂಟನ್ನ ವಾರ್ಡಿಗಿ ಶಿಫ್ಟ್ ಮಾಡಿ, ಯಾರೋ ಗೆಸ್ಟ್ ಬಂದಾರಂತ ಹೇಳಿ ಮನಿಗಿ ಹೋಗಿಬರೂದರೊಳಗ ಆ ಪೇಷೆಂಟ್ ಖಲಾಸ್ ಆಗಿತ್ತು. ಆವತ್ತ ಡ್ಯುಟಿ ಮ್ಯಾಲ ಇದ್ದದ್ದು ಒಬ್ಬಳೇ ಒಬ್ಬ ನರ್ಸ್. ಹಿಂಗಾಗಿ ನಡೀಬಾರದು ನಡದುಹೋಗಿತ್ತು. ಈ ದವಾಖಾನಿಯೊಳಗ ಏನರೆ ಎಮರ್ಜನ್ಸಿ ಆದರ ಅದನ್ನ ಸರಿ ಮಾಡೂವಂಗ ಫೆಸಿಲಿಟೀನೂ ಇರಲಿಲ್ಲ. ಇದ್ದದ್ದರೊಳಗೇ ಎಲ್ಲಾ ಸರಿ ಮಾಡಿಕೊಂಡು ಹೋಗೂದು ಸಾಧ್ಯ ಇರಲಿಲ್ಲ.

ಒಂದು ಆಪರೇಶನ್ ಥೇಟರ್, ಅದರ ಬಾಜೂ ಒಂದು ಆಯ್.ಸಿ.ಯು. ಕೋಣೆ. ಅದರೊಳಗ ಹೆಚ್ಚಂದ್ರ ಆರು ಮಂದಿನ್ನ ಇಡಾಕ ಸಾಧ್ಯ. ಅದು ಹೆಸರಿಗಿ ಎ. ಸಿ. ಕೋಣೆ, ಎ. ಸಿ. ಕೆಟ್ಟು ಎರಡು ವರ್ಷ ಆಯ್ತು. ಆ ರೂಮ ಕಟ್ಟೂ ಮುಂದೇ ಎ. ಸಿ. ಕೋಣೆ ಅಂತ ಕಟ್ಟಿದ್ದರಿಂದ ಎಲ್ಲೂ ಗಾಳಿ ಆಡಾಕ ಕಿಡಕಿ ಇರಲಿಲ್ಲ. ಇದ್ದ ಸಣ್ಣ ಸಣ್ಣ ಕಿಡಕಿಗೂ ಗ್ಲಾಸ್ ಫಿಕ್ಸ್ ಮಾಡಿದ್ದರು. ಏನೇಏನರೆ ಆಗಿ ಆಯ್.ಸಿ.ಯು. ಕೋಣೆಗೆ ಶಿಫ್ಟ್ ಆದರ ಪೇಷೆಂಟ್‌ಗಳು ಉಸರಾಡೂದೇ ಕಷ್ಟ ಆಗಿ, ಜೀವ ಕಣ್ಣಾಗ ಹಿಡದಂಗ ಮಾಡತಿದ್ದರು. ಆ ಸಂಬಂಧ ಡಾಕ್ಟರ್ ಮಹೇಶ ಹತ್ತಾರು ಬಾರಿ ಪತ್ರ ಬರದರೂ ಅದನ್ನ ಸರಿ ಮಾಡಿರಲಿಲ್ಲ. ಡಾಕ್ಟರ ರೂಮಂತೂ ಬಾಳ ಸಣ್ಣದು. ಒಳಗ ಹೋಗಬೇಕಾದರೂ ಕಾಲಾಗ ಬಿದ್ದಿರೋ ರಟ್ಟಿನ ಡಬ್ಬಿ, ಔಷಧಿ ಬಾಟಲಿ, ನಿರೋಧ ಪೊಟ್ಟಣ ದಾಟಕೊಂಡೇ ಹೋಗಬೇಕಿತ್ತು. ಅಲ್ಲಿಗೆ ಹೋಗಿ ಬರೋ ಪೇಷೆಂಟ್‌ಗಳೆಲ್ಲಾ ಡಾಕ್ಟರ್ ತಿಪ್ಪಿಯೊಳಗ ಕುಂತಂಗ ಆಗ್ಯೆತಿ, ಕಸಾ ಸೈತ ಹೊಡಿಯವರು ಇಲ್ಲೋ ಹ್ಯಾಂಗ ಅಂತಿದ್ದರು. ಅಟ್ಟು ಅಟಕ್ ಜಾಗದೊಳಗ ಒಂದು ಕಂಪ್ಯೂಟರ್, ಒಂದು ಟೇಬಲ್, ಒಂದು ಖುರ್ಚಿ ಇಟಗೊಂಡು ಡಾಕ್ಟರ್ ಪೇಷೆಂಟ್‌ಗಳನ್ನ ನೋಡತಿದ್ದ. ಆಪರೇಶನ್ ಥೇಟರ್ ಬಾಜೂ ಒಂದು ಟಾಯಲೆಟ್ ರೂಮ್, ಅದರ ಬಾಜೂ ಒಂದು ಬಾಥ ರೂಮ್ ಇವಿಷ್ಟು ಆ ಹೆರಿಗೆ ಆಸ್ಪತ್ರೆಯೊಳಗ ಇದ್ದದ್ದು. ದವಾಖಾನಿ ಗ್ವಾಡಿ ಮ್ಯಾಲ ಚಿತ್ರ ಬಿಡಿಸದಂಗ ಎಲ್ಲಿ ಬೇಕು ಅಲ್ಲಿ ಎಲಿ ತಿಂದು ಉಗಳಿದ್ದಿತ್ತು. ಇಲ್ಲಿ ಯಾರೂ ಉಗಳಬಾರದು ಅನ್ನೋ ಬೋರ್ಡ್ ಇದ್ದಲ್ಲೇ ಹೆಚ್ಚಾಗಿ ಉಗಳಿದ್ದರು. ದವಾಖಾನೆಯ ಒಳಗ ಬರ್ತಾ ಇದ್ದಂಗ ಎದುರು ಗೋಡೆಯ ಮ್ಯಾಲ 'ಚಿಕ್ಕ ಸಂಸಾರ ಚೊಕ್ಕ ಸಂಸಾರ' ಅನ್ನೋ ಬೋರ್ಡಿತ್ತು. ಅದರ ಕೆಳಗಡೆ ದಪ್ಪ ಅಕ್ಷರದಲ್ಲಿ ಇಲ್ಲಿ ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಮಾಡಲಾಗುವುದು ಅಂತ ಬರೆಸಲಾಗಿತ್ತು. ಈಗೀಗ ಸಂತಾನಹರಣ ಚಿಕಿತ್ಸೆಗೆ ಬರವರ ಪ್ರಮಾಣ ಹೆಚ್ಚಾಗಿತ್ತು. ಅದಕ್ಕ ಕಾರಣ ಸಂತಾನಹರಣ ಚಿಕಿತ್ಸೆ ಮಾಡಿಕೊಳ್ಳಲಿಲ್ಲ ಅಂದ್ರ ಮುಂಬರೊ ದಿನಗಳಲ್ಲಿ ಸರಕಾರದ ಯಾವ ಸೌಲಭ್ಯಗಳೂ ಸಿಗೋದಿಲ್ಲ ಅಂತ ಹೇಳಿ ಒಂದು ಬೀದಿ ನಾಟಕ ಆಡಿ ಹೋಗಿಂದ, ಬೇನಾಮಪುರದ ಸುತ್ತ–ಮುತ್ತ ಹಳ್ಳಿ ಮಂದಿ ಸಂತಾನಹರಣ ಶಸ್ತ್ರಚಿಕಿತ್ಸೆಗೆ ಮುಗಿಬಿದ್ದು ಈಗ ಪಾಳಿ ಹಚ್ಚೂವಂಗ ಆಗಿತ್ತು. ಆ ದವಾಖಾನೆಯೊಳಗ ಇದ್ದದ್ದೇ ಹನ್ನೆರಡು ಬೆಡ್, ಹೆರಿಗೆ ಆಪರೇಶನ್ ಅಂತ ಹೇಳಿ ಹೆಚ್ಚಂದ್ರ ದಿನಕ್ಕ ಐದಾರು ಕೇಸ್ ಮಾಡಬಹುದು ಆದರ ದಿನಕ್ಕ ಹತ್ತು ಮಂದಿ ಸಂತಾನಹರಣ ಶಸ್ತ್ರಕ್ರಿಯೆಗೆ ಅಂತ ಬಂದು ಕುಂತರ ಡಾಕ್ಟರ ಕತಿ ಏನಾಗಬ್ಯಾಡ. ಸೌಲಭ್ಯಗಳಿದ್ದರ ಹತ್ತೇನು ಇಪ್ಪತ್ತು ಮಾಡಬಹುದು ಏನೂ ಫೆಸಿಲಿಟೀನೇ ಇಲ್ಲ ಅದ್ಯಾಂಗ ಹತ್ತತ್ತು ಮಂದಿಗಿ ಶಸ್ತ್ರಚಿಕಿತ್ಸೆ ಮಾಡೋದು ಅನ್ನೂದು ಡಾಕ್ಟರ್ ಮಹೇಶಗ ತಿಳೀದಂಗ ಆಗಿತ್ತು. ಆದಂಗ ಆಗಲಿ ತನಗರೇ ಏನು ಆಗೂದೈತಿ ಅಂತ ಗಂಡ–ಹೆಂಡತಿ ಕೂಡಿ ದಿನಕ್ಕ ಒಂಬತ್ತು, ಹತ್ತು ಆಪರೇಶನ್ ಮಾಡಾಕ ಸುರು ಮಾಡದರು. ಹೆರಿಗೆ ಆಗಿ ಇನ್ನೂ ಮೂರು ತಿಂಗಳು ಕಳದಿರಲಿಲ್ಲ ಅಂಥವರು ಕೂಡ ಸಂತಾನಹರಣ ಶಸ್ತ್ರಚಿಕಿತ್ಸೆಗೆ ಬಂದು ಪಾಳಿ ಹಚ್ಚತಿದ್ದರು. ಆ ಊರಾಗ ಅಲ್ಲೀಮಟ ಒಬ್ಬನೇ ಒಬ್ಬ ಗಂಡುಮಗ ಮುಂದ ಬಂದು ತನ್ನ ಹೆಂಡತಿ ಬದಲೀ ತನಗೇ ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡ್ರಿ ಅಂತ ಮುಂದ ಬಂದಿರಲಿಲ್ಲ. ಊರಾಗ ತಿರುಗಾಡಿ ಅವರಿಗಿ ತಿಳುವಳಿಕೆ ನೀಡವರೂ ಇರಲಿಲ್ಲ. ಬಾಳ ಗಂಡಸರಿಗಿ ಅದೇನಿದ್ದರೂ ಹೆಣಮಕ್ಕಳಿಗಿ, ತಮಗಲ್ಲ ಅನ್ನೋ ಭಾವ ಇದ್ದಂಗಿತ್ತು. ಹಿಂಗಾಗಿ ಒಂದೇ ಒಂದು ವ್ಯಾಸಕ್ಟಮಿ ಮಾಡಿಸಿಕೊಂಡಿರೋ ಪುರುಷನ ಕೇಸೂ ಅಲ್ಲಿರಲಿಲ್ಲ. ಬಾಳ ನಾಜೂಕಾಗಿರೋ ಹೆಣ್ಣನ್ನ ಕಂಡಾಗ ಡಾಕ್ಟರ್ ಆ ಹೆಣಮಗಳ ಮುಂದ, "ನಿನ್ನ ಗಂಡಗ ಮಾಡಸಕೋ ಅಂತ ಹೇಳಬೇಕೋ ಇಲ್ಲೋ..." ಅಂದಾಗ ಆಕಿ ಕೆಳಗ ಮುಖ ಹಾಕಿ ನಕ್ಕಿದ್ದು ಬಿಟ್ಟರ ಬ್ಯಾರೆ ಉತ್ತರ ಸಿಕ್ಕಿರಲಿಲ್ಲ.

ಆ ದಿವಸ ಶಿವರಾತ್ರಿ. ಮುಂಜಮುಂಜಾನೆನೇ ಎಂಟು ಮಂದಿ ಮಹಿಳೆಯರು ಸಂತಾನಹರಣ ಶಸ್ತ್ರಚಿಕಿತ್ಸೆಗಂತ ಬಂದು ಕೂತಿದ್ದರು. ಅವತ್ತ ರಜನಿ ಡ್ಯುಟಿ ಮ್ಯಾಲ ಇರಲಿಲ್ಲ. ಹಂಗೇ ಡಾಕ್ಟರ್ ಪರಿಮಳಾ

ಅವತ್ತು ದವಾಖಾನಿಗಿ ಬಂದಿರಲಿಲ್ಲ. ಗಂಟೆ ಹನ್ನೊಂದಾದರೂ ಇನ್ನೂ ಡಾಕ್ಟರ್ ಮಹೇಶ ಸೈತ ಬಂದಿರಲಿಲ್ಲ. ಚಂಪಾ ಅಲ್ಲಿರೋ ಎಂಟು ಮಂದಿ ಪೈಕಿ ಆರು ಮಂದಿಗಿ ಅನಿಸ್ತೀಸಿಯಾ ಕೊಟ್ಟು ಕೂಡಿಸಿದ್ದಳು. ಅದರೊಳಗ ಬೇನಾಮಪುರದವರು ಇಬ್ಬರು, ಉಳಿದವರು ಆಜೂ ಬಾಜೂ ಹಳ್ಳಿಯವರು. ಆ ಎಂಟು ಮಂದಿಯೊಳಗ ಒಬ್ಬಾಕಿ ಕೂಸಿನ ತಾಯಿ. ಆ ಕೂಸು ಹೊತಗೊಳಾಕ ಆ ಹೆಂಗಸಿನ ತಂಗಿ ಆಕಿ ಜೋಡಿ ಬಂದಿದ್ದಳು. ಹೆಚ್ಚೂ ಕಮ್ಮಿ ಆಪರೇಶನ್ ಆಗಾಕ ಅದೆಷ್ಟು ತಾಸು ಆಗತೈತೋ ಗೊತ್ತಿಲ್ಲ, ಅಂತದರೊಳಗ ಆ ಮಗೂನ್ನ ಸಂಭಾಳಿಸೋದು ಬಾಳ ಕಷ್ಟ. ಹಂಗಾಗಿ ಆ ಮಗೂಗ ಹಾಲು ಕುಡಿಸಿ ತಾ ಅಂತ ಆಕಿ ತಂಗಿ ಹೇಳಿದಳು. ಈಗಾಗಲೇ ಅನಿಸ್ತೀಸಿಯಾ ಕೊಟ್ಟು ತಾಸಾಗಿತ್ತು ಹಿಂಗಾಗಿ ಆ ಹೆಂಗಸು ತುಸು ಗುಂಗಿನೊಳಗ ಇದ್ದಳು. ಅದೇ ಗುಂಗಿನೊಳಗ ಮಗುವಿಗಿ ಹಾಲ ಕುಡಿಸಿ ಕೊಟ್ಟಳು. ಇನ್ನೇನು ಪರೀಕ್ಷೆಗಾಗಿ ಅವರೆಲ್ಲರ ಮೂತ್ರಿ ತಗೋಬೇಕು, ಬಾತ್‌ರೂಮ ನೋಡದರ ಬಾಳ ಹೊಲಸ ಆಗಿತ್ತು. ಅಲ್ಲೇ ಹೊರಗ ಒಂದು ಬಾಕಿನ ಮ್ಯಾಲ್ ಕುತಗೊಂಡು ಕಿವಿಗಿ ಏರ್‌ಫೋನ್ ಹಾಕೊಂಡು ಅದೇನೋ ಮೊಬೈಲ್‌ನಲ್ಲಿ ಕೇಳುತ್ತಿದ್ದ ಚಂದ್ರಪ್ಪಗ, "ಏ ಚಂದ್ರು, ಬಾತ್‌ರೂಮ್ ಒಂದು ಕ್ಲೀನ್ ಮಾಡಿಕೊಡು" ಅಂದಾಗ ಅವನು ಒಮ್ಮೆಲೇ ಅವಳ ಮ್ಯಾಲ ಏರಿ ಬಂದವನಂಗೆ, "ನೋಡಕ್ಕಾ, ಇವತ್ತು ಇಂಡಿಯಾ ಪಾಕಿಸ್ತಾನ ಕ್ರಿಕೆಟ್ ನೋಡಾಕ ಬಿಡ್ರಿ, ನನಗೇನೂ ಹೇಳಬ್ಯಾಡ್ರಿ. ಅವರು ನೋಡದರ ರನ್ ಮ್ಯಾಲ ರನ್ ಹೊಡಿಯಾಕತ್ತಾರ... ನೀವು ನೋಡದರ ಬಾತ್‌ರೂಮ ಕ್ಲೀನ್ ಮಾಡಂತಿರಿ. ಆಗೂದಿಲ್ಲ ನಾ ಖರೆ ಖರೆ ದೇಶಪ್ರೇಮಿ ಅದೀನಿ ನನಗ ತೊಂದರೆ ಕೊಡಬ್ಯಾಡ್ರಿ" ಅಂದ. ಚಂಪಾ ಅವನ ಕಡೆ ನೋಡಿ, ಆ ಪೇಷೆಂಟಗಳ ಕಡೆಗೊಮ್ಮೆ ನೋಡಿ ಒಂದು ದೊಡ್ಡ ನಿಟ್ಟುಸಿರು ಬಿಟ್ಟು "ನೀ ಬಾರವಾ ತಂಗಿ" ಅಂತ ಮುಂದ ಕುಂತ ಹೆಣಮಗಳ ರಟ್ಟ್ಯಾಗ ಕೈ ಹಾಕಿ ಬಾತ್‌ರೂಮಿಗಿ ಕರಕೊಂಡು ಹೋದಳು. ಅದಾಗಲೇ ಆ ಎಲ್ಲಾ ಹೆಂಗಸರಿಗಿ ಗುಂಗು ಹಿಡದಂಗ ಆಗಿತ್ತು... ಹಿಪ್ನೋಟಿಸಂ ಮಾಡವರ ಎದುರು ಕುಳತಂಗ ಆಗಿತ್ತು. ಅದರಲ್ಲಿ ಒಬ್ಬಾಕಿ, "ಚಂಪಕ್ಕ, ನನಗ್ಯಾಕೊ ಹೊಟ್ಟಿ ತೊಳಸದಂಗ ಆಗಾಕತೈತಿ, ಏನು ಮಾಡ್ಲಿ ಮುಂಜಾನಿಂದ ಏನೂ ತಿಂದಿಲ್ಲ." ಅಂದಳು. "ನೋಡವಾ ತಂಗಿ, ನಾಕು ತಾಸ ಮೊದಲ ನೀರ ಸೈತ ಕುಡೀಬಾರದು ನೀ ನೋಡದರ ಏನೂ ತಿಂದಿಲ್ಲ ಅಂತೀದಿ" ಆಕಿ ಜೋಡಿ ಇದ್ದವರಿಗಿ "ಆಕಿಗಿ ಏನಾರೆ ತಿನ್ನಾಕ ತಂದು ಕೊಡ್ರಿ" ಅಂದಳು. ಆಗ ಆ ಪೇಷೆಂಟ್, "ಇವತ್ತ ಶಿವರಾತ್ರಿ ಅಲ್ಲೇನವಾ. ಯಕ್ಕಾ ಉಪವಾಸ ಮಾಡೀನಿ" ಅಂದಳು. ಆವಾಗ ಚಂಪಾಗ ಏನು ಹೇಳಬೇಕು ಅನ್ನೂದೇ ತಿಳೀದಂಗ ಆಯ್ತು. ಅಷ್ಟರೊಳಗ ಡಾಕ್ಟರ ಮಹೇಶ ಬಂದ. ಅಲ್ಲಿರೋ ಪೇಷೆಂಟ್‌ಗಳನ್ನ ನೋಡಿ ಮನಸಿನೊಳಗೇ ಇವತ್ತು ಇಂಪಾರ್ಟ್‌ಟೆಂಟ್ ಕ್ರಿಕೆಟ್ ಮ್ಯಾಚ್, ಬೇಗ ಮನಿಗಿ ಹೋಗೋಣ ಅಂದ್ರ... ಅನ್ಕೊಂತ ಒಳಗ ಹೋದ. ಚಂಪಾಗ ಕರದು ಆಪರೇಶನ್ ಎಷ್ಟು ಅದಾವ ಅಂತ ಕೇಳದ. ಎಂಟು ಅದಾವ ಅಂತ ಕೇಳಿದ್ದೇ ಮಹೇಶ ತುಸು ಸಿಟ್ಟೀಲೇ "ಎಲ್ಲರಿಗೂ ಅನಿಸ್ತೀಸಿಯಾ ಕೊಟ್ಟೀಯನೂ...?" ಎಂದು ಕೇಳಿದ. "ಆರು ಮಂದಿಗಿ ನೀಮಗ ಫೋನು ಮಾಡಿ ಕೇಳೇ ಕೊಟ್ಟೀನಿ ಆಮ್ಯಾಗ ಇಬ್ಬರು ಬಂದರು..." ಅಂದಳು. "ಅವರಿಗೂ ಕೊಟ್ಟೀಯನೂ...?" "ಹೌದ್ರಿ ಸರ್" "ಇಲ್ಲಿ ನೀವೇ ಡಾಕ್ಟರ್ ನಾನು ನಿಮ್ಮ ಕೈಕೆಳಗೆ ಕೆಲಸಾ ಮಾಡವನು. ಒಂದೇ ದಿನ ಎಂಟು ಮಂದಿಗಿ ಆಪರೇಶನ್ ಮಾಡಿ ಎಲ್ಲಿ ಹಾಕತಿ...?" 'ಸರ್, ರೂಮ ನಂ ಒಂದರ ಪೇಷೆಂಟ್ ಇವತ್ತ ಖಾಲಿ ಆಗತೈತಿ, ಇನ್ನೊಂದು ಬೇಡ್ ತುಸು ದೊಡ್ಡದೈತಿ ಅದರ ಮ್ಯಾಲ ಇಬ್ಬರನ್ನ ಹಾಕದ್ರ ಐತು' 'ಆಯ್ತು ಆಯ್ತು ಅದೇನು ಮಾಡ್ತಿ ಮಾಡು, ನಾ ತುಸು ಬೇಗ ಹೋಗಬೇಕು ಇವತ್ತ ಕ್ರಿಕೆಟ್ ಮ್ಯಾಚ್ ಐತಿ. ಬಡ ಬಡ ಮುಗಸಿ ಹೋಗ್ತೀನಿ ಎಲ್ಲಾ ರೆಡಿ ಮಾಡು' ಅಂತೂ ಇಂತೂ ಕ್ರಿಕೆಟ್ ಕ್ರೇಜಿನೊಳಗ ಎಂಟೂ ಜನರ ಶಸ್ತ್ರಚಿಕಿತ್ಸೆ ಮಾಡಿ ರೂಮಿಗಿ ಶಿಫ್ಟ್ ಮಾಡಿದರು. ಸತ್ತೆವೋ...ಬದುಕಿದೆವೋ ಅನ್ನೂವಂಗ ನರಳತಾ ಬಿದ್ದಿರೋ ಆ ಪೇಷೆಂಟ್ ಕಡಿ ಯಾರೂ ಹೊಳ್ಳಿ ನೋಡವರಿರಲಿಲ್ಲ. ಇದ್ದಿದ್ದು ಚಂಪಾ ಒಬ್ಬಳೇ ಆ ಹೆಂಗಸರಲ್ಲಿ ಬಹುತೇಕರೆಲ್ಲಾ ಕೆಳಗಿನ ಕೇರಿಯವರು. ಅವರ ಹಾಲತ್ ನೋಡಿ ಅಲ್ಲಿದ್ದ ಹೆಂಗಸೊಬ್ಬಳು 'ಚಂಪಕ್ಕ ಅಲ್ಲಂತೂ ಗಾಳಿ ಬೆಳಕ ಆಡೂದೇ ಇಲ್ಲ ಅದ್ಯಾಂಗ ಪಾಪ ಅವರು ಒದ್ದಾಡಬೇಕು...?' 'ಏನು ಮಾಡೂದು ಹೇಳ್ರಿ, ಏನು ನನ್ನ ಕೈಯಾಗ ಐತಾ...? ಆರ್ಥಿಕ ಸ್ಥಿತಿ ಚಲೊ ಇತ್ತಂದ್ರ ಅವರೂ ಯಾವದಾದರೂ ಚಲೋ ನರ್ಸಿಂಗ್ ಹೋಮಿಗಿ ಅಡ್ಮಿಟ್ ಆಗತಿದ್ದರು. ಇಲ್ಲಿಗಿ ಬಂದ ಮ್ಯಾಲ ಎಡ್ಜಸ್ಟ್ ಆಗಬೇಕು' ಅನ್ಕೊಂತ ಡಾಕ್ಟರ್ ಕೋಣೆಗೆ ಓಡಿದಳು. 'ಚಂಪಾ ಈಗ ನಾ ಹೋಗ್ತೀನಿ ಮತ್ತ ಯಾರರೆ ಬಂದ್ರ ತಪ್ಪಿ ಅವರಿಗಿ ಅನಿಸ್ತೀಸಿಯಾ ಕೊಟ್ಟೀ ಮತ, ನಾಳೆ ಬರ್ರಿ ಅಂತ ಹೇಳಿ ಕಳಸು... ಕ್ರಿಕೆಟ್ ನೋಡಾಗ ಫೋನ್ ಮಾಡೂದು ಡಿಸ್ಟರ್ಬ್ ಮಾಡೂದು ಮಾಡಬ್ಯಾಡ.. ನೀನೇ ಮ್ಯಾನೇಜ್ ಮಾಡು' ಅಂತ ಡಾಕ್ಟರ್ ಹೊರಟೇಬಿಟ್ಟ. ಇಡೀ ಆಸ್ಪತ್ರೆಯಲ್ಲಿ ಇದ್ದದ್ದು ಚಂಪಾ ಮಾತ್ರ ಮಿಕ್ಕವರೆಲ್ಲಾ ಕ್ರಿಕೆಟ್ ಹುಚ್ಚಿರುವವರು. ಪೇಷೆಂಟಗಳ ಸ್ಥಿತಿ ಕೇಳವರೇ ಇರಲಿಲ್ಲ. ಆ ಎಂಟು ಮಂದಿಯೊಳಗ ಒಬ್ಬಾಕಿಗೆ ಸೆಪ್ಟಿಕ್ ಆಗಿ ತಿಂಗಳಾನುಗಟ್ಟಲೆ ಹಾಸಿಗಿ ಹಿಡಿಬೇಕಾಯ್ತು. ಹಿಂದೊಮ್ಮೆ ಹಿಂಗೇ ತರಾತುರಿಯೊಳಗ ಆಪರೇಶನ್ ಮಾಡಿ ಮನಿಗಿ ಕಳಸಿದ್ದ ಡಾಕ್ಟರ್ ಮಹೇಶ, ಆ ಹೆಂಗಸ ಮತ್ತಾರು ತಿಂಗಳದೊಳಗ ಗರ್ಭಿಣಿ ಆಗಿದ್ದಕ್ಕ ಅದಕ್ಕ ತಾ ಕಾರಣಲ್ಲ ಆ ಹೆಂಗಸೇ ಕಾರಣ. ನಾ ಹೇಳದಂಗ ಮಾಡಿಲ್ಲ ಅದಕ್ಕೇ ಹಂಗಾಯ್ತು ಅಂತ ಕೈ ಚೆಲ್ಲಿಕೊಂಡಿದ್ದ. ಪಾಪ ಆ ಹೆಣಮಗಳು ಬಾಯಿ ಸತ್ತವಳು ಏನೂ ಮಾತಾಡದೇ ತಿರುಗಿ ಬಂದಳು. ಮರುದಿನ ಆಕಿ ಗಂಡ ಸಿದ್ದಪ್ಪ ತುಸು ಏರು ದನಿಯಲ್ಲಿ ಮಾತಾಡಿದ್ದಕ ಅವನ ಕಿಸೆಯೊಳಗ ಸಾವಿರ ರೂಪಾಯಿ ತುರುಕಿ ಹೊರಗ ದಬ್ಬಿದ್ದ. ಆ ಸಿದ್ದಪ್ಪ ಮೊದಲೇ ಕುಡುಕ ಆ ಸಾವಿರ ರೂಪಾಯಿಯೊಳಗ ಒಂದು ವಾರ ಕುಡಕೊಂಡು ಬಿದ್ದಿದ್ದ. ಉಲ್ಟಾ ಡಾಕ್ಟರ್ ಬಾಳ ಚಲೊ ಅದಾರ ಅಂತ ಪುಕ್ಕಟ ಪಬ್ಲಿಸಿಟಿ ಬ್ಯಾರೆ ಕೊಟ್ಟಿದ್ದ. ಇಂಥ ಹತ್ತಾರು ಬಾನಗಾಡಿ ಮಾಡಿದರೂ ಡಾಕ್ಟರ್, ಪಂಚಾಯತ್ ಲೀಡರ್ಸ್ ನೆತ್ತಿಗೆ ಛತ್ರಿ ಹಿಡದು ಬಚಾವ್ ಆಗಿದ್ದ. ಬೇನಾಮಪುರದ ಇತಿಹಾಸದೊಳಗ ಒಬ್ಬನೇ ಒಬ್ಬ ಪುರುಷ ಬೆಸಕ್ಕೊಮಿ ಆಪರೇಶನ್ ಮಾಡಿಕೊಂಡಿರಲಿಲ್ಲ. ಸುತ್ತ ಇಪ್ಪತ್ತು ಹಳ್ಳಿಯೊಳಗ ಅಂಥಾ ಒಂದೇ ಒಂದು ಕೇಸು ಇರಲಿಲ್ಲ. ಗಂಡಸರು ಎಂಥಾ ಆಪರೇಶನ್ ಮಾಡಸಕೊಂತಾರ ಹೊರಗ ದುಡಿಯವರು ಏನ್ನನರೇ ಹೆಚ್ಚೂ ಕಡಿಮಿ ಆದರ ಯಾರು ಗತಿ ಅಂಥೇಳಿ ಹೆಂಗಸರೇ ಮುಂದಾಗೂದಿತ್ತು. ಏನೂ ಫರಕ್ ಬೀಳೂದಿಲ್ಲ ಅದು ನಿಮ್ಮ ತಪ್ಪು ಕಲ್ಪನೆ ಅಂತ ಡಾಕ್ಟರ್ ಮಹೇಶ ಮತ್ತ ಅವನ ಹೆಂಡತಿ ಪರಿಮಳಾ ಇಬ್ಬರೂ ಹೇಳಿ ಹೇಳಿ ಸಾಕಾಗಿತ್ತು. ಮಹೇಶಂತೂ ಕೆಲ ಗಂಡಸರನ್ನ ಖುದ್ದಾಗಿ ಕರದು, ನಿನ್ನ ಹೆಂಡತಿ ಮೈಯಾಗ ರಕ್ತಾನೇ ಇಲ್ಲ ಸುಮ್ಮ ನೀನೇ ಮಾಡಸಕೋಬೇಕಿಲ್ಲೋ ಅಂದಾಗ ಹೆಂಗಸರು ನಾಚೂವಂಗ ನಾಚ್ಕೊಂತ ಅವರು ಏನೂ ಮಾತಾಡದೇ ನಡೆದುಬಿಡತಿದ್ದರು.




ಬೇನಾಮಪುರದ ಹೂಗಾರ ಪರಪ್ಪ ಇಕಾಡಿದಿಕಾಡಿ ಹೆಂಡತಿಗಿ ಹೊಡಿಯೂದು ಬಾಳ ಆಗಿತ್ತು ಅನ್ನೋ ಸುದ್ದಿ ಇಡೀ ಊರಿಗೂರೇ ಹಬ್ಬಿತ್ತು. ಅಂವಾ ಕುಡಿಯವನೂ ಅಲ್ಲ, ಹಂಗೇ ಅಂವಾ ಎಂದೂ ಹೆಂಡತಿಗಿ ಹೊಡದವನೂ ಅಲ್ಲ. ಊರಾಗಿನ ಹಿರೇರು ಪರಪ್ಪನ ಕರೆದು, "ಯಾಕೊ ಪರಪ್ಪ ನಿನ್ನ ಹೆಂಡತಿ ಶಾರವ್ವಗ ಹ್ಯಾಂಗ ಬೇಕು ಹಂಗ

## ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರಿಗೆ ಅಭಿನಂದನೆಗಳು...

೨೦೧೩ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯು ಹಿರಿಯ ಪತ್ರಕರ್ತ ನಾಗೇಶ ಹೆಗಡೆ ಹಾಗೂ ಕಾದಂಬರಿಕಾರ ಬಾಳಾಸಾಹೇಬ ಲೋಕಾಪುರ ಅವರಿಗೆ ಲಭಿಸಿದೆ ಹಾಗೂ ೨೦೧೫ನೇ ಸಾಲಿನ ಪುಸ್ತಕ ಬಹುಮಾನವು ಡಾ॥ ಲತಾಗುತ್ತಿ, ಡಾ॥ ಎಚ್. ಎಲ್. ಪುಷ್ಪಾ, ಡಾ॥ ನಾ. ಸೋಮೇಶ್ವರ ಮತ್ತು ಪ್ರೊ॥ ಎ. ವಿ. ನಾವಡ ಅವರಿಗೆ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಹೃತ್ಪೂರ್ವಕ ಅಭಿನಂದನೆಗಳು.

ಹೊಡೀತೆಂತಲ್ಲ... ಯಾಕ...?" ಅಂದಾಗ ಪರಪ್ಪ ಒಂಥರಾ ಮುಜುಗರ ಮಾಡಕೊಂಡು "ಅದು ಹೇಳುವಂಥಾ ವಿಶ್ಯಾ ಅಲ್ಲ ತಗೋರಿ, ಅದು ನಮ್ಮ ಸಂಸಾರದ ರಗಳೆ" ಅಂದಿದಕ್ಕ "ಹಂಗಂದ್ರ ಹ್ಯಾಂಗೋ ? ನಿನ್ನ ಬಾಜೂ ಮನಿ ಸಾತಪ್ಪ ದಿನ್ನಾ ಬಂದು ಪರಪ್ಪನ ಕಿರಿಕಿರಿ ಸಾಕಾಯ್ತು ನೋಡ್ರಿ ಅಂತಾನ. ಹಿಂಗೇ ಆದ್ರ ನಾಳೆ ಪೊಲೀಸ್ ಕಂಪ್ಲೇಂಟ್ ಆಗ್ತಾವ" ಅಂದಾಗ ಪರಪ್ಪಗ ತುಸು ಬಿರಿ ಬಂದಂಗ ಆಯ್ತು. 'ನೀವೆಲ್ಲಾ ನಮ್ಮೂರ ಹಿರೇರು, ನೀವೇ ಹೇಳ್ರಿ ನನ್ನ ಹೆಂಡತಿ ಅದ್ಯಾವಂದೋ ಜೋಡಿ ಕಳ್ಳ ಸಂಬಂಧ ಇಟ್ಗೊಂಡಾಳ. ಈಗ ನೋಡ್ರಿ ಮತ್ತ ಹೊಟ್ಟೀಲಿ ಅದಾಳ. ಅದ್ಯಾಂಗ ಆಯ್ತು ಅಂತ ಕೇಳಿದರ ಅದಕ್ಕ ನೀನೇ ಕಾರಣ ಅಂತಾಳ' 'ಆಕಿ ಬ್ಯಾರೆಯವರ ಜೋಡಿ ಸಂಬಂಧ ಇಟ್ಗೊಂಡಾಳ ಅಂತೀಯಲ್ಲ, ಅದು ನಿನಗ ಗೊತ್ತೈತಾ...? ಅಂವಾ ಯಾರು ಅಂತ ಹೇಳಿ ಬಿಡು ಅವನ್ನೂ ಇಲ್ಲೇ ಕರಸಿ ಉಗಿತೀವಿ' 'ಅಂವಾ ಯಾರಂತ ನನಗ ಗೊತ್ತಿಲ್ಲ, ಆಕಿ ಹೇಳಾಕೂ ತಯಾರಿಲ್ಲ. ಆಕಿ ಬಸರ ಆಗಿದ್ದಂತೂ ಸುಳ್ಳಲ್ಲ' 'ಆಕಿ ಹೇಳೂವಂಗ ನಿನ್ನಿಂದೇ ಆಗಿರಬೇಕು' 'ಅದು ಸಾಧ್ಯನೇ ಇಲ್ಲರೀ... ಹಂಗ್ಯಾಂಗ ಆಗತ್ಯೆತಿ.. ಸಾಧ್ಯನೇ ಇಲ್ಲ' 'ಹೌದು ಅಟ್ಟು ಖಾತ್ರಿ ಮ್ಯಾಲ ಅದು ಹೆಂಗ ಹೇಳತೀದಿ...?'

'ಹೆಂಗಂದರ... ಹೋಗಲಿ ಬಿಡ್ರಿ'

'ಅರೆ ಹೇಳು ಮಾರಾಯಾ, ನೀ ಹೇಳಲಾರದೇ ನಮಗ ಗೊತ್ಯಾಂಗ ಆಗಬೇಕು..?'

'ಯಾಕಂದ್ರ ನಾ ಮಹಾರಾಷ್ಟ್ರದ ದೊಡ್ಡ ದವಾಖಾನಿಯೊಳಗ ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡೀನಿ'

'ಯಲಾ ಇವನ, ನೀ ಯಾಕ ಮಾಡಕೊಳಾಕ ಹೋಗಿಯೋ..?'

'ಆಕಿ ಬಾಳ ಅಶಕ್ತ ಅದಾಳ, ಅದಕ್ಕೇ ನಾ ಮಾಡಕೊಂಡೆ'

'ನೀ ಮಾಡಕೊಂಡು ಎಷ್ಟು ತಿಂಗಳು ಆಯ್ತು..?'

'ಹೆಚ್ಚೂ ಕಮ್ಮಿ ಏಂಟು ತಿಂಗಳು ಆಯ್ತು'

'ನಿನ್ನ ಹೆಂಡತಿಗಿ ಎಷ್ಟು ತಿಂಗಳಾಯ್ತು...?'

'ಈಗಕಿ ಆರರಾಗ ಅದಾಳ. ಊರಾಗಿನ ಮಂದಿಗಿ ಗೊತ್ತಾದರ ನನ್ನ ಅಬರೂ ಉಳಿತದಾ...? ನೀವೇ ಹೇಳ್ರಿ'

'ತಪ್ಪು ತಪ್ಪು... ನಾವು ನಿನ್ನ ಹೆಂಡತಿನ್ನೂ ಕರದು ಮಾತಾಡ್ತೇವಿ...'

'ಇಲ್ಲ ಅದು ಮಾನಗೇಡಿ ಹೆಂಗಸು, ತಪ್ಪು ಮಾಡಿದ್ದು ಖರೆ ಇಲ್ಲಾಂದ್ರ ಅದ್ಯಾಂಗ...'

'ಅಲ್ಲೋ ಪರಪ್ಪ ಇದ್ದೂರಾಗ ದವಾಖಾನಿ ಇಟಗೊಂಡು ಮಹಾರಾಷ್ಟ್ರಕ್ಕ ಹೋಗಿ ಆಪರೇಶನ್ ಮಾಡಕೋಳೂದು ಏನು ಬಂತು...?'

'ನಮ್ಮ ಊರಾಗ ಯಾರೂ ಗಂಡಸರು ಆಪರೇಶನ್ ಮಾಡಿಸಿಕೊಂಡಿಲ್ಲ, ಹಂಗ ಒಂದೊಮ್ಮ ನಾ ಮಾಡಿಸಿಕೊಂಡರ ಒಂಥರಾ ಖಜೀಲಿ ಅನಸದಂಗ ಆಗತ್ಯೆತಿ ಅದ್ಕೇ ಇಲ್ಲಿ ಬ್ಯಾಡೆ ಬ್ಯಾಡ ಅಂತ ಹೇಳಿ ಮಹಾರಾಷ್ಟ್ರದೊಳಗ ಮಾಡಸಕೊಂಡೆ' ಅಂತ ಹೇಳಿದ. ಊರಾನ ಮಂದಿಗಿ ಅವನ ಹೆಂಡತಿ ಶಾರವ್ವಳ ನಂಬಬೇಕೋ ಇಲ್ಲಾ ಆಪರೇಶನ್ ಮಾಡಸಕೊಂಡು ಬಂದ ಪರಪ್ಪನ್ನ ನಂಬಬೇಕೋ ಅನ್ನೂದು ತಿಳಿದಂಗ ಆಯ್ತು. ಬರಬರ್ತಾ ಈ ಪರಪ್ಪ ಕುಡಿಯಾಕೂ ಸುರು ಮಾಡದ. ಅಂವಾ ಮಹಾರಾಷ್ಟ್ರಕ್ಕ ಹೋಗಿ ಆಪರೇಶನ್ ಮಾಡಸಕೊಂಡು ಬಂದದ್ದು ಇಡೀ ಊರಿಗೂರೇ ಗೊತ್ತಾಯ್ತು. ಅವನಿಗಿ ಈಗ ಊರಾಗ ತಿರಗಾಡಲಿಕ್ಕ ಮುಖಾನೇ ಉಳೀದಂಗ ಆಯ್ತು. ಡಾಕ್ಟರ್ ಮಹೇಶ ಈಗ ಪುರುಷರ ಎದುರಲ್ಲಿ ಆ ಪರಪ್ಪನ ಉದಾಹರಣೆ ಕೊಟ್ಟು ಗಂಡಮಕ್ಕಳೂ ಆಪರೇಶನ್ ಮಾಡಸಕೋಬಹುದು. ಇದೇ ಊರಿನ ಪರಪ್ಪನ ನೋಡ್ರಿ ಅಂತಿದ್ದ. ಆಗ ಜನ 'ಡಾಕ್ಟರೇ ಅವನ್ನ ನೋಡೂದು ಬ್ಯಾಡ ತಗೋರಿ' ಅಂತಿದ್ದರು. ಅವನ ಹೆಂಡತಿ ಶಾರವ್ವಗ ಮತ್ತೂ ಬಿರಿ ಬಂತು. ಅಟೊತ್ತಿಗಾಗಲೇ ಆಕಿ ಹೊಟ್ಟಿ ಕಾಣಸಾಕ ಸುರು ಆಯ್ತು. ಮನಿ ಬಿಟ್ಟು ಹೊರಗ ಹೋಗೂವಂಗೇ ಇರಲಿಲ್ಲ. ಗಂಡ ನೋಡದರ ಬ್ಯಾರೇ ಯಾರದೋ ಜೋಡಿ ಸಂಬಂಧ ಐತಿ ಅಂತ ಹೇಳಿ ಹೊಡಿಯೂದು ಬಡಿಯೂದು ಮಾಡತಿದ್ದ. ಆಕಿ ಅಂಥವಳಲ್ಲ ಅಂತ ಇಡೀ ಊರಿಗೇ ಗೊತ್ತಿತ್ತು. ಒಂದು ದಿವಸ ಊರ ಹಿರೇರು ಡಾಕ್ಟರ ಮಹೇಶ ಮನಿಗಿ ಹೋಗಿ ಪರಪ್ಪನ ಕತೀನ್ನ ಹೇಳಿದರು. ಅವನ್ನ ಹಾಗೂ ಅವನ ಹೆಂಡತಿನ್ನ ಒಂದು ಸಾರಿ ಚೆಕ್ ಮಾಡಬೇಕು ಆವಾಗ ಎಲ್ಲಾ ಗೊತ್ತಾಗತ್ಯೆತಿ ಅಂತ ಹೇಳದ ಮ್ಯಾಲ ಡಾಕ್ಟರನ್ನ ಪರಪ್ಪನ ಮನಿಗೇ ಬರಾಕ ಹೇಳದರು. ಡಾಕ್ಟರ್ ಮತ್ತವನ ಹೆಂಡತಿ ಇಬ್ಬರೂ ಕೂಡಿ ಪರಪ್ಪನ ಮನಿಗೇ ಬಂದರು. ಅವರ ಹಿಂದಿಂದ ಊರ ಹಿರೇರೂ ಬಂದರು. ಅವರನ್ನೆಲ್ಲಾ ನೋಡಿದ್ದೇ ಶಾರವ್ವ ಗೋಳೊ... ಅಂತ ಅಳ್ಳಾಕ ಸುರು ಮಾಡದಳು. ಆಗ ಊರ ಹಿರೇರು 'ಸುಮ್ಮೀರವ ಯಾಕ ಅಳತಿ, ಅಂಥಾದು ಏನು ಆಗ್ಯೆತಿ ಎಲ್ಲಿ ಅದಾನ ನಿನ್ನ ಹಿರಿಯಾ' ಅಂತ ಪರಪ್ಪನ್ನ ಕೇಳದರು ಆಕಿ ಕೋಲಿ ಕಡಿ ಕೈ ಮಾಡದಳು. ಪರಪ್ಪ ಇನ್ನೂ ಮಲಗಿದ್ದ ಅವನ್ನ ಕೂಗಿ ಎಬ್ಬಿಸಿದರು. ಅವನಿಗಿ ಅವರೆಲ್ಲಾ ಬಂದದ್ದು ನೋಡಿ ದಿಗಿಲು ಹಿಡಿದಂಗ ಆಯ್ತು ಇವರೆಲ್ಲಾ ಯಾಕ ಬಂದಾರ...? ಅದೂ ಅಲ್ಲದೇ ಡಾಕ್ಟರನ್ನ ಕರಕೊಂಡು ಬಂದದ್ದು ನೋಡಿ ಯಾಕಿರಬಹುದು ಅಂತ ಹಣಿಗಿ ಗಂಟ ಹಾಕಿ ಯೋಚಿಸಲಾಕ ಸುರು ಮಾಡದ. ಡಾಕ್ಟರ್ ಎಲ್ಲರಿಗೂ ಹೊರಗ ಇರಾಕ ಹೇಳಿ, ಒಬ್ಬನೇ ಒಳಗ ಹೋದ. ಅವನನ್ನ ಅದೇ ಮಂಚದ ಮ್ಯಾಲ ಮಲಗಾಕ ಹೇಳಿ ಬಾಗಲ ಹಾಕೊಂಡ. ತುಸು ಹೊತ್ತಿನ ಮ್ಯಾಲ ನಕ್ಕೊಂತ ಹೊರಗ ಬಂದ. ಊರ ಹಿರೇರಿಗೆ ಆ ನಗುವಿನ ಅರ್ಥ ತಿಳದಿರಲಿಲ್ಲ. 'ಯಾಕ್ರೀ ಡಾಕ್ಟ್ರ ಏನು ಕಥಿ...?' 'ಇದರೊಳಗ ಅವನ ಹೆಂಡತಿ ತಪ್ಪ ಏನೂ ಇಲ್ಲ, ತಪ್ಪ ಅವಂದೇ ಆದರ ತಪ್ಪ ಅವಂದೇ ಅನ್ನೂದೂ ಅಂವಗ ಗೊತ್ತಿಲ್ಲ, ಇದೊಂಥರಾ ತಿಳಿಯದೇ ನಡದಿರೋ ತಪ್ಪು ಹಿಂಗಾಗಿ ಇದರೊಳಗ ತಪ್ಪು ಇಬ್ಬರದೂ ಇಲ್ಲ. ತಪ್ಪು ಇದ್ದದ್ದು ಇಂವಾ ಆಪರೇಶನ್ ಮಾಡಿಸಿಕೊಂಡಿರೋ ಆಸ್ಪತ್ರೆಯದು' ಅಂದಾಗ ಹಿರೇರು ಒಬ್ಬರಿಗೊಬ್ಬರು ಮುಖಾ ನೋಡಕೊಂಡು 'ಅದೇನಂತ ನಮಗ ತಿಳಿಯುವಂಗ ಹೇಳಬಾರದಾ...?' 'ಏನಿಲ್ಲ ಗೌಡರೆ, ಪರಪ್ಪ ಆಪರೇಶನ್ ಮಾಡಿಸಿಕೊಂಡಿದ್ದು ಹೌದು, ಸುಳ್ಳಲ್ಲ. ಆದರ ಆ ಆಪರೇಶನ್ ಸಕ್ಸಸ್ ಆಗಿಲ್ಲ ತುಸು ಏಚುಪೇಚು ಆಗ್ಯೆತಿ. ಹಂಗಾಗಿ ಅವನ ಹೆಂಡತಿ ಗರ್ಭಿಣಿ ಆಗಾಕ ಬ್ಯಾರೆ ಯಾರೂ ಕಾರಣ ಅಲ್ಲ ಖುದ್ದಾಗಿ ಈ ಪರಪ್ಪನೇ' ಅಂದಾಗ ಊರ ಹಿರೇರು 'ಕರೀರಿ ಆ ಮನುಷ್ಯಾನ ಸುಳ್ ಸುಳ್ಳೇ ನಮ್ಮ ಮಗಳ ಮ್ಯಾಲ ಅಪವಾದ ಹೊರಸತಿದ್ದ, ನಕಲಿ ಡಾಕ್ಟರ್ ಹತ್ತರ ಹೋದ್ರ ಇನ್ನೇನಾಗತ್ಯೆತಿ.. ಇರಲಿ ತಗೊ ಇನ್ನೊಂದು ಆಗಲಿ ಆಮ್ಯಾಗ ಇಲ್ಲೇ ನಮ್ಮೂರ ಡಾಕ್ಟರ್ ಹತ್ತಿರ ಮಾಡಸಕೊ.. ಆಯ್ತು ತಗೋರವಾ ತಂಗಿ ನಿನ್ನ ಗಂಡನ ತಲಿಯೊಳಗಿನ ದೆವ್ವ ಬಿಡಸದಂಗ ಆಯ್ತು, ನಾವಿನ್ನ ಬರ್ತೀವಿ... ಬರ್ತೀವಪ್ಪ ಪರಪ್ಪ' ಅಂತ ಎಲ್ಲರೂ ನಡದಾಗ ಪರಪ್ಪ ಕೋಲಿಯೊಳಗಿಂದ ಹಣಕಿ ಹಾಕಿ ನೋಡತಿದ್ದ. ಮರುದಿನ ಎಲ್ಲರ ಬಾಯಾಗೂ 'ಪರಪ್ಪನ ಆಪರೇಶನ್ ಫೇಲ್ ಆಗಿತ್ತಂತ, ಹಂಗಾಗಿ ಶಾರವ್ವ ಹಂಗ ಆದಳು. ಖೋಡಿ ಸುಳ್ ಸುಳ್ಳೇ ಆಕಿ ಮ್ಯಾಲ ಸಂಶಯಪಟ್ಟತು' ಅನ್ನೋ ಮಾತು ಶಾರವ್ವಳ ಕಿವಿಗಿ ಬಿದ್ದು ಒಳಗಿನ ಜೀವದ ಜೋಡಿ, ಆಕಿನೂ ಹಗರ ಆಗಿದ್ದಳು.

**ಡಾ॥ ಎಸ್. ಬಿ. ಜೋಗುರ**
ಎಸ್. ಬಿ. ಜ್ಯೋತಿ ಶಾಲೆಯ ಹತ್ತಿರ, ಜಲದರ್ಶಿನಿ ನಗರ
ಧಾರವಾಡ – ೫೮೦ ೦೦೩

ಖಾಸಗಿ ವ್ಯಕ್ತಿಯೊಬ್ಬ ಸರ್ಕಾರಿ ನೌಕರನೊಬ್ಬನ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಮನವಿ ಮಾಡಬೇಕಾದರೆ ಅದಕ್ಕೆ ನ್ಯಾಯಾಲಯದ ಆದೇಶ ತರಬೇಕಾಗುತ್ತದೆ. ಇದರಿಂದ ತಪ್ಪಿತಸ್ಥನಿಗೆ ಮತ್ತೊಂದು ರಕ್ಷಣೆ ಸಿಕ್ಕಂತಾಗುತ್ತದೆ. ಇದರಿಂದ ಭ್ರಷ್ಟಾಚಾರಕ್ಕೆ ಬಲಿಯಾದವರು ಹಾಗೂ ಭ್ರಷ್ಟಾಚಾರ ವಿರೋಧಿ ಹೋರಾಟಗಾರರು ಇವರಿಬ್ಬರಿಗೂ ಭ್ರಷ್ಟಾಚಾರವನ್ನು ವಿರೋಧಿಸಬೇಕು ಎನ್ನುವ ಉತ್ಸಾಹವೇ ನಂದಿಹೋಗುತ್ತದೆ." ಸರ್ಕಾರದ ಕಾಳಜಿಯೆಲ್ಲವೂ ಭ್ರಷ್ಟ ನೌಕರನ ವಿರುದ್ಧ ಕ್ರಮ ತೆಗೆದುಕೊಳ್ಳುವುದಕ್ಕಿಂತ ಹೆಚ್ಚಾಗಿ ಅವನನ್ನು ರಕ್ಷಿಸುವುದಕ್ಕೇ ಇದ್ದಂತೆ ತೋರುತ್ತದೆ.

**ಪ್ರೊ|| ಟಿ. ಎಸ್. ವೇಣುಗೋಪಾಲ್**

ಇತ್ತೀಚಿನ ದಿನಗಳಲ್ಲಿ ಕಪ್ಪುಹಣದ ವಿರುದ್ಧ ಭಾವೋದ್ವೇಗದ ಮಾತುಕತೆಗಳು ನಡೆದಿವೆ. ಐವತ್ತು ದಿನ ಅವಕಾಶ ಕೊಡಿ ಕಪ್ಪುಹಣಕ್ಕೆ ಕೊನೆಗೊಳಿಸುತ್ತೇನೆ ಎಂದು ಪ್ರಧಾನಿಯವರು ಕೇಳಿದ್ದ ಗಡುವು ಮುಗಿಯುತ್ತಾ ಬಂದಿದೆ. ಭ್ರಷ್ಟಾಚಾರದಿಂದ ಬೇಸತ್ತುಹೋಗಿದ್ದ ಜನ ಎಂತಹ ಕಷ್ಟವನ್ನೂ ತಡೆದುಕೊಳ್ಳುವ ಸಹನೆ ತೋರಿದ್ದಾರೆ. ಆರ್ಥಿಕತೆ ಕುಸಿಯುತ್ತಿರುವುದು ಕಾಣುತ್ತಿದೆಯಾದರೂ ನಿರ್ನೋಟೀಕರಣದ ಸಂಪೂರ್ಣ ಪರಿಣಾಮ ಸ್ಪಷ್ಟವಾಗುವುದಕ್ಕೆ ಇನ್ನೂ ಒಂದಿಷ್ಟು ಸಮಯ ಬೇಕಾಗಬಹುದು. ಇದರಿಂದ ಬಡವರಿಗೆ ತೊಂದರೆಯಾಗುತ್ತಿದೆ, ಲಕ್ಷಾಂತರ ಜನ ಕೆಲಸ ಕಳೆದುಕೊಳ್ಳುತ್ತಿದ್ದಾರೆ ಇತ್ಯಾದಿ ಆರೋಪಗಳ ಜೊತೆಗೆ ಸರ್ಕಾರ ನಿಜವಾಗಿ ಭ್ರಷ್ಟಾಚಾರದ ವಿರುದ್ಧ ಇದೆಯೇ ಎನ್ನುವುದರ ಬಗ್ಗೆಯೇ ಅನುಮಾನ ಬರುವಂತಹ ಹಲವಾರು ಘಟನೆಗಳು ನಡೆಯುತ್ತಿವೆ. ಸರ್ಕಾರ ಇತ್ತೀಚೆಗೆ ಭ್ರಷ್ಟಾಚಾರ ತಡೆ ಕಾಯ್ದೆಗೆ ತರಬಯಸುತ್ತಿರುವ ಕೆಲವು ತಿದ್ದುಪಡಿಗಳು ಇಂತಹ ಅನುಮಾನವನ್ನು ಗಟ್ಟಿಮಾಡುತ್ತಿವೆ. ಇದು ಭ್ರಷ್ಟಾಚಾರವನ್ನು ತಡೆಯುವುದಕ್ಕಿಂತ ಭ್ರಷ್ಟರನ್ನು ರಕ್ಷಿಸುವುದಕ್ಕೆ ತರುತ್ತಿರುವ ತಿದ್ದುಪಡಿಗಳು ಎಂಬ ಅನುಮಾನ ವ್ಯಾಪಕವಾಗಿ ಕೇಳಿಬರುತ್ತಿದೆ. ಕೆಲವು ದಿನಗಳ ಹಿಂದೆಯಷ್ಟೆ ಈ ಬಗ್ಗೆ 'ದಿ ಹಿಂದು' ಪತ್ರಿಕೆಯಲ್ಲಿ ಬರೆಯುತ್ತಾ ಯೋಗೇಂದ್ರ ಯಾದವ್ ಅವರು ಈ ಬಗ್ಗೆ ಧ್ವನಿಯೆತ್ತಬೇಕಾದ ಸಮಯ ಬಂದಿದೆ ಎಂದು ಎಚ್ಚರಿಸಿದ್ದಾರೆ.

ಹಿಂದಿದ್ದ ಕಾಯ್ದೆಯಲ್ಲಿ ಹಲವಾರು ನ್ಯೂನತೆಗಳಿದ್ದವು ಎನ್ನುವ ಕಾರಣಕ್ಕೆ ಭ್ರಷ್ಟಾಚಾರ ತಡೆ ಕಾಯ್ದೆಗೆ ೧೯೮೮ರಲ್ಲಿ ತಿದ್ದುಪಡಿ ತರಲಾಗಿತ್ತು. ಈಗ ಮತ್ತೆ ಅದಕ್ಕೆ ತಿದ್ದುಪಡಿ ತರುವ ಪ್ರಯತ್ನ ನಡೆಯುತ್ತಿದೆ. ಇದರ ಬೆಂಬಲಕ್ಕೆ ಎಲ್ಲಾ ರಾಜಕೀಯ ಪಕ್ಷಗಳು ನಿಂತಿವೆ. ಈ ಕಾಯ್ದೆಗೆ, ಎಲ್ಲಾ ಸರ್ಕಾರಗಳು ಒಂದಿಷ್ಟು ತಿದ್ದುಪಡಿಗಳನ್ನು ತಂದು ಅದನ್ನು ದುರ್ಬಲಗೊಳಿಸಲು ಪ್ರಯತ್ನಿಸುತ್ತಲೇ ಇದ್ದವು. ಈಗಿನ ಈ ಸರ್ಕಾರವಂತೂ ಅದರ ಕುತ್ತಿಗೆಯನ್ನು ಸಂಪೂರ್ಣವಾಗಿ ಹಿಚುಕಿಬಿಡುವ ಸಾಹಸಕ್ಕೆ ಕೈಹಾಕಿದೆ. ಎಲ್ಲಾ ರಾಜಕೀಯ ಪಕ್ಷಗಳ ಪ್ರತಿನಿಧಿಗಳೂ ಇರುವವರಿಷ್ಠ ಸಮಿತಿ ಇದಕ್ಕೆ ಈಗಾಗಲೇ ಸಮ್ಮತಿಸಿದೆ. ಕ್ಯಾಬಿನೆಟ್ ಕೂಡ ಇದನ್ನು ಅಂಗೀಕರಿಸಿದೆ. ಈ ಚಳಿಗಾಲದ ಅಧಿವೇಶನದಲ್ಲಿ ಇದು ಚರ್ಚೆಯಾಗದೇ ಇದ್ದದ್ದರಿಂದ ಬಜೆಟ್ ಅಧಿವೇಶನದವರೆಗೆ ಇದರ ವಿರುದ್ಧ ಧ್ವನಿ ಎತ್ತಲು ಸಮಯ ಸಿಕ್ಕಿದೆ. ಭ್ರಷ್ಟಾಚಾರದಿಂದ ರೋಸಿಹೋಗಿ ಮೋದಿಯವರ ನಿರ್ನೋಟೀಕರಣದ ಕ್ರಮವನ್ನು ಅನುಮೋದಿಸುತ್ತಿರುವ ಜನ, ಈಗ ಅದೇ ಮೋದಿಯವರ ಮೇಲೆ ಒತ್ತಡ ತಂದು ಇದನ್ನು ನಿಲ್ಲಿಸುವುದಕ್ಕೆ ಕಂಕಣಬದ್ಧರಾಗಬೇಕಾಗಿದೆ.

ಭ್ರಷ್ಟಾಚಾರದ ಆರೋಪಕ್ಕೆ ಒಳಗಾಗುವವರು ಮೂರು ಬಗೆಯವರು. ಲಂಚ ತೆಗೆದುಕೊಳ್ಳುತ್ತಿರುವಾಗ ವಿಚಾರಣಾಧಿಕಾರಿಗಳ ಕೈಯಿಗೆ ನೇರವಾಗಿ ಸಿಕ್ಕಿಬಿದ್ದ ಸರ್ಕಾರಿ ಅಧಿಕಾರಿಗಳು, ಮಧ್ಯವರ್ತಿಗಳು ಹಾಗೂ ಇತರರು. ಎರಡನೆಯವರು ಅಧಿಕೃತ ಸ್ಥಾನದ ದುರ್ಬಳಕೆಯಿಂದ ಲಾಭ ಮಾಡಿಕೊಂಡ ಆರೋಪಕ್ಕೆ ಗುರಿಯಾದವರು. ಮೂರನೆಯವರು ಮಿತಿಗಿಂತ ಹೆಚ್ಚಿನ ಆಸ್ತಿಯನ್ನು ಹೊಂದಿದ್ದಾರೆ ಎಂಬ ಆರೋಪಕ್ಕೆ ಗುರಿಯಾದವರು. ಮೇಲಿನ ಮೂರು ರೀತಿಯ ಪ್ರಕರಣಗಳು ಈಗಿರುವ ಕಾಯ್ದೆಯಲ್ಲಿ ಬರುತ್ತವೆ.

ಈಗ ಆಗುತ್ತಿರುವ ತಿದ್ದುಪಡಿ ಸ್ವೀಕೃತವಾದರೆ ಭ್ರಷ್ಟಾಚಾರಿಗಳ ಮೇಲೆ ನೇರ ದಾಳಿಯ ಸಾಧ್ಯತೆಗಳು ಕಡಿಮೆಯಾಗುತ್ತವೆ. ಜೊತೆಗೆ ಇನ್ನೆರಡು ಪ್ರಕರಣಗಳಲ್ಲೂ ಶಿಕ್ಷೆಯಾಗುವ, ಅಷ್ಟೇ ಏಕೆ ವಿಚಾರಣೆ ನಡೆಯುವ ಸಾಧ್ಯತೆಗಳೂ ಕಡಿಮೆಯಾಗುತ್ತವೆ. ಅದರಿಂದಾಗಿಯೇ ಈ ತಿದ್ದುಪಡಿಯಾಗುತ್ತಿರುವ ಕಾಯ್ದೆಯು ಮೂಲ ಉದ್ದೇಶಕ್ಕೇ ಮಾರಕವಾಗಿದೆ ಎಂದು ಭ್ರಷ್ಟಾಚಾರ ವಿರೋಧಿ ಆಂದೋಲನದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಂತಹ ಯಾದವ್ ಅಂತಹವರು ಕಳವಳಪಡುತ್ತಿದ್ದಾರೆ.

ಈ ತಿದ್ದುಪಡಿಯ ಮೊದಲ ಸಮಸ್ಯೆಯೆಂದರೆ ಭ್ರಷ್ಟಾಚಾರವನ್ನು ಕುರಿತ ವ್ಯಾಖ್ಯೆಯನ್ನೇ ಬದಲಿಸಿ ಅದರ ವ್ಯಾಪ್ತಿಯನ್ನು ಸೀಮಿತಗೊಳಿಸುತ್ತದೆ. "ಹಾಲಿ ಇರುವ ಭ್ರಷ್ಟಾಚಾರ ತಡೆ ಕಾಯ್ದೆಯ ೧೩(೧) ಭಾಗದಲ್ಲಿ ನೀಡಿರುವ ಭ್ರಷ್ಟಾಚಾರದ




# ಭ್ರಷ್ಟಾಚಾರ ತಡೆಯೋ? ರಕ್ಷಣೆಯೋ?

ವ್ಯಾಖ್ಯೆಯಲ್ಲಿ, ಭ್ರಷ್ಟಾಚಾರದ ಹಲವು ಪರೋಕ್ಷ ರೂಪಗಳೂ ಸೇರಿವೆ. ಅವುಗಳಲ್ಲಿ ಕಾನೂನುಬಾಹಿರವಾಗಿ ಪಡೆಯುವ "ಯಾವುದೇ ಮೌಲಿಕ ವಸ್ತು ಅಥವಾ ಆರ್ಥಿಕ ಅನುಕೂಲ" ಅಥವಾ "ಸರ್ಕಾರಿ ನೌಕರ ತನ್ನ ಅಧಿಕಾರದ ದುರುಪಯೋಗದಿಂದ" ಪಡೆವ ಪ್ರತಿಫಲವೂ ಸೇರುತ್ತದೆ. ಆದರೆ ತಿದ್ದುಪಡಿಯಾಗಲಿರುವ ಮಸೂದೆಯಲ್ಲಿ ಇದನ್ನು ಕೈಬಿಟ್ಟಿದ್ದಾರೆ. ಇದಕ್ಕೆ ಬದಲಾಗಿ ಸರ್ಕಾರಿ ಸೇವಕನ ಅಪರಾಧಿ ದುರ್ನಡತೆ, ತನ್ನ ನಿಯಂತ್ರಣದಲ್ಲಿರುವ ಸೊತ್ತನ್ನು ಮೋಸದಿಂದ ದುರುಪಯೋಗಿಸುವುದು, ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದುವುದು ಮತ್ತು ಉದ್ದೇಶಪೂರ್ವಕವಾಗಿ, ಕಾನೂನುಬಾಹಿರವಾಗಿ ಅದನ್ನು ಹೆಚ್ಚಿಸಿಕೊಳ್ಳುವುದು ಮಾತ್ರ ಭ್ರಷ್ಟಾಚಾರ ಎನಿಸಿಕೊಳ್ಳುತ್ತದೆ." ಅಂದರೆ ಈ ತಿದ್ದುಪಡಿ ಅಂಗೀಕೃತವಾದರೆ 'ಆರ್ಥಿಕವಲ್ಲದ, ಪರೋಕ್ಷವಾದ ಅಥವಾ ಉದ್ದೇಶಪೂರ್ವಕ ವಂಚನೆಯೆಂದು ಸಾಬೀತುಪಡಿಸಲಾಗದ' ಕ್ರಿಯೆಗಳು ಭ್ರಷ್ಟಾಚಾರ ಎನಿಸಿಕೊಳ್ಳುವುದಿಲ್ಲ. ಕಾನೂನು ಸಮಿತಿ ಕೂಡ ಈ ಸಂಕುಚಿತ ವ್ಯಾಖ್ಯೆಯನ್ನು ಒಪ್ಪಿಕೊಂಡಿರಲಿಲ್ಲ. ಇದಕ್ಕೆ ಪರ್ಯಾಯವಾಗಿ "ಒಬ್ಬ ಸರ್ಕಾರಿ ನೌಕರನ ಅನುಚಿತ ಕೆಲಸ ಅಥವಾ ಚಟುವಟಿಕೆಯ ಫಲವಾಗಿ ಪಡೆಯುವ ಯುಕ್ತವಲ್ಲದ ಯಾವುದೇ ಅನುಕೂಲವೂ ಶಿಕ್ಷಾರ್ಹವಾಗಬೇಕು" ಎಂದು ಶಿಫಾರಸ್ಸು ಮಾಡಿತು. ಆದರೆ ಸರ್ಕಾರ ಹಾಗೂ ಪಾರ್ಲಿಮೆಂಟರಿ ಸಮಿತಿ ಈ ಸಲಹೆಯನ್ನು ಒಪ್ಪಲಿಲ್ಲ.

ಈ ತಿದ್ದುಪಡಿಯನ್ನು ಕುರಿತು ಹಲವರು ಆಕ್ಷೇಪಣೆ ವ್ಯಕ್ತಪಡಿಸಿದ್ದಾರೆ, ತುಂಬ ಪ್ರಬಲವಾಗಿ ವಿರೋಧಿಸಿದ್ದಾರೆ. ಹಾಗೆ ವಿರೋಧಿಸುವುದಕ್ಕೆ ಕಾರಣವೂ ಇದೆ. "ಇಡೀ ಭ್ರಷ್ಟಾಚಾರ ತಡೆ ಕಾಯ್ದೆಗಳಲ್ಲಿ (PCA) ಉನ್ನತ ಸ್ಥಾನದಲ್ಲಿನ ಭ್ರಷ್ಟಾಚಾರ ಕುರಿತಂತೆ ಉಲ್ಲೇಖವಿರುವುದು ಇದೊಂದೇ ಕಾಯ್ದೆಯಲ್ಲಿ (೧೩(೧) (d)). ಇಂತಹ ಉನ್ನತ ಮಟ್ಟದಲ್ಲಿ ಸಾಮಾನ್ಯವಾಗಿ ಮಾಮೂಲಿನಂತೆ ಟೇಬಲ್ ಕೆಳಗಿನ ವ್ಯವಹಾರ ನಡೆಯುವುದಿಲ್ಲ. ಭ್ರಷ್ಟ ಸರ್ಕಾರಿ ನೌಕರ ಸಾಮಾನ್ಯವಾಗಿ ಅಕ್ರಮ ಪ್ರತಿಫಲವನ್ನು ತೀರಾ ಗೋಪ್ಯವಾಗಿ ಪಡೆಯುತ್ತಾನೆ. ಅವು ವಿದೇಶಿ ವ್ಯವಹಾರ, ಒಳ್ಳೆಯ ಹುದ್ದೆ, ನಿವೃತ್ತಿಯ ನಂತರದ ಅನುಕೂಲ ಹೀಗೆ ಹಲವು ನಗರೇತರ ರೂಪದಲ್ಲಿರುತ್ತವೆ. ಬೋಫೋರ್ಸ್‌ನಿಂದ ಮೊದಲ್ಗೊಂಡು ೨ಜಿ ತನಕದ ಎಲ್ಲಾ ಪ್ರಮುಖ ಹಗರಣಗಳು, ಅದು ಕಾಮನ್‌ವೆಲ್ತ್ ಗೇಮ್ಸ್ ಹಗರಣವಿರಬಹುದು ಅಥವಾ ಕಲ್ಲಿದ್ದಲು ಹಗರಣವಿರಬಹುದು, ಅವೆಲ್ಲವೂ ಈ ಸೆಕ್ಷನ್ನಿನ ಪ್ರಕಾರ ಕ್ರಿಮಿನಲ್ ಅಪರಾಧವಾಗುತ್ತವೆ." ಭಾರತ ಸರ್ಕಾರದ ನಿವೃತ್ತ ಕಲ್ಲಿದ್ದಲು ಕಾರ್ಯದರ್ಶಿ ಹರೀಶ್ ಗುಪ್ತ ಅವರ ಮೇಲಿನ ಪ್ರಕರಣ ಇಂತಹ ಒಂದು ನಿಲುವಿಗೆ ಕಾರಣವಿರಬಹುದು. ಹರೀಶ್ ನಿಷ್ಠಾವಂತ ಅಧಿಕಾರಿ, ಅವರಿಗೆ ಶಿಕ್ಷೆಯಾಗಬಾರದು ಎಂದು ಉನ್ನತ ಅಧಿಕಾರಿಗಳು ಹೇಳುತ್ತಿದ್ದಾರೆ. ಇಂತಹ ಪ್ರಕರಣಗಳನ್ನು ಮುಂದಿಟ್ಟುಕೊಂಡು ೧೩(೧)(d)(iii) ನಿಯಮವನ್ನು ಕೈಬಿಡುವಂತೆ ಒತ್ತಾಯಿಸಲಾಗಿದೆ. ಜೊತೆಗೆ ಇದನ್ನು ಅಸಂವಿಧಾನಾತ್ಮಕ ಎಂದು ಕೂಡ ಕರೆಯಲಾಗುತ್ತಿದೆ. ಆದರೆ ಈವರೆಗೆ ಸುಪ್ರೀಂ ಕೋರ್ಟ್ ಇದನ್ನು ಯಾವ ಸಂದರ್ಭದಲ್ಲೂ ಅಸಂವಿಧಾನಾತ್ಮಕ ಎಂದು ಭಾವಿಸಿಲ್ಲ. ಜೊತೆಗೆ ಇದನ್ನೇ ನೆಪಮಾಡಿಕೊಂಡು ಕಾಯ್ದೆಯನ್ನು ದುರ್ಬಲಗೊಳಿಸಬಾರದು ಎಂದು ಟಿ. ಎಸ್. ಆರ್. ಸುಬ್ರಮಣಿಯನ್ ಪದೇ ಪದೇ ವಾದಿಸಿದ್ದಾರೆ. ಅವರು ಪ್ರಾಮಾಣಿಕತೆಗೆ ಹೆಸರಾಗಿದ್ದ ನಿವೃತ್ತ ಕ್ಯಾಬಿನೆಟ್ ಸೆಕ್ರೆಟರಿ. ಆರ್ಥಿಕ ಅಥವಾ ಇನ್ನಿತರ ಲಾಭಕ್ಕಾಗಿ ಅಧಿಕಾರ ದುರುಪಯೋಗ ನಡೆದಿದೆ ಎಂದು ಸ್ಪಷ್ಟವಾಗದ ಹೊರತು, ಯಾವುದೇ ನ್ಯಾಯಯುತ ವ್ಯತ್ಯಾಸಗಳಿಗೆ ಅಥವಾ ತಪ್ಪಿಗೆ ಶಿಕ್ಷೆಯನ್ನು ವಿಧಿಸುವುದಿಲ್ಲ. ಹಿರಿಯ ಅಧಿಕಾರಿಗಳು ಒಂದಲ್ಲ ಒಂದು ಸ್ಕ್ಯಾಮ್‌ನಲ್ಲಿ ತೊಡಗಿರುವುದು ವರದಿಯಾಗುತ್ತಿರುವ ಈ ಸಂದರ್ಭದಲ್ಲಿ ಕಾಯ್ದೆಯನ್ನು ದುರ್ಬಲಗೊಳಿಸುವುದು ಸರಿಯಲ್ಲ.

**ಮಿತಿಮೀರಿ ಆಸ್ತಿ ಸಂಗ್ರಹಣೆ ಪ್ರಕರಣಗಳು**

ಯೋಗೇಂದ್ರ ಯಾದವ್ ಎತ್ತುವ ಎರಡನೆಯ ಸಮಸ್ಯೆಯೆಂದರೆ ಈ ಮಸೂದೆ ಅಂಗೀಕೃತವಾದರೆ ಅಳತೆಗೆ ಮೀರಿ ಆಸ್ತಿ ಸಂಗ್ರಹ ಮಾಡಿರುವ ಪ್ರಕರಣಗಳನ್ನು ಸಾಬೀತುಪಡಿಸುವುದು ಕಷ್ಟವಾಗುತ್ತದೆ. ಏಕೆಂದರೆ "ಈಗಿರುವ ಮಸೂದೆಯ ಪ್ರಕಾರ ತನ್ನ ಗೊತ್ತಿರುವ ಮೂಲದ ವರಮಾನಕ್ಕಿಂತ ಹೆಚ್ಚು ಪ್ರಮಾಣದ ಹಣವನ್ನು ಅಥವಾ ಆಸ್ತಿಯನ್ನು ಹೊಂದುವುದೇ ಭ್ರಷ್ಟಾಚಾರವನ್ನು ಸಾಬೀತುಪಡಿಸಲು ಸಾಕಾಗಿತ್ತು." ಆದರೆ ಇನ್ನು ಮುಂದೆ ಒಬ್ಬ ಅಧಿಕಾರಿ ಉದ್ದೇಶಪೂರ್ವಕವಾಗಿ, ಅಕ್ರಮವಾಗಿ ಸಂಪತ್ತು ಸಂಗ್ರಹಿಸಿದ್ದಾನೆ ಎಂದು ಫಿರ್ಯಾದಿಯೇ ಸಾಬೀತುಪಡಿಸಬೇಕಾಗುತ್ತದೆ. ಉದ್ದೇಶಪೂರ್ವಕ ಎಂದು ಸಾಬೀತುಪಡಿಸುವುದನ್ನು ಕಡ್ಡಾಯ ಮಾಡಬಾರದು ಎಂದು ವರಿಷ್ಠ ಸಮಿತಿ ಒಪ್ಪಿಕೊಂಡಿತ್ತು. ಆದರೆ ಈ ಬಗ್ಗೆ ಸರ್ಕಾರದ ಅಂತಿಮ ನಿಲುವು ಏನೆಂಬುದು ನಮಗಿನ್ನೂ ಸ್ಪಷ್ಟವಾಗಿಲ್ಲ.

೧೯೮೮ರ ಹಿಂದೆ ಇದ್ದ ಕಾಯ್ದೆಯಲ್ಲಿ ಕೆಲವು ನ್ಯೂನತೆಗಳಿದ್ದವು. ಅದನ್ನು ಸರಿಪಡಿಸುವ ದೃಷ್ಟಿಯಿಂದ ೧೯೮೮ರಲ್ಲಿ ಕೆಲವು ತಿದ್ದುಪಡಿಗಳನ್ನು ತರಲಾಗಿತ್ತು. ೧೯೮೮ರಲ್ಲಿ ತಂದಿದ್ದ ತಿದ್ದುಪಡಿಯ ಪ್ರಕಾರ "ಸರ್ಕಾರಿ ನೌಕರನಿಗೆ ಆ ಸಮಯಕ್ಕೆ ಅನ್ವಯವಾಗುವ ಯಾವುದೇ ಕಾನೂನಿನ, ಕಟ್ಟಳೆಯ ಅಥವಾ ಆದೇಶದ ನಿಯಮಗಳಿಗೆ ಅನುಗುಣವಾಗಿ, 'ಗೊತ್ತಿರುವ ಮೂಲದ ವರಮಾನ'ವನ್ನು" ನಿರ್ಧರಿಸಲಾಗುತ್ತಿತ್ತು. ಈ ತಿದ್ದುಪಡಿಯನ್ನು ಆಗ ತಂದಿದ್ದು ಏಕೆಂದರೆ ವಿಚಾರಣೆಯ ಸಮಯದಲ್ಲಿ ಯಾವ್ಯಾವುದೋ ಸಂಪತ್ತಿನ ಮೂಲಗಳನ್ನು ಹೆಸರಿಸಿ ತಪ್ಪಿಸಿಕೊಳ್ಳುತ್ತಿದ್ದರು. ಆದರೆ ಈಗ ಈ ತಿದ್ದುಪಡಿಯ ಮೂಲಕ ಮತ್ತೆ ೧೯೮೮ರ ಹಿಂದಿನ ಸ್ಥಿತಿಯನ್ನು ಸೃಷ್ಟಿಸುತ್ತಿದ್ದಾರೆ. ಮುಂದೆ ಅನುಮೋದನೆಗಾಗಿ ಕಾಯುತ್ತಿರುವ ತಿದ್ದುಪಡಿಯ ಪ್ರಕಾರ "ಗೊತ್ತಿರುವ ಮೂಲದ ವರಮಾನ" ಅನ್ನುವಾಗ ಕಾನೂನಬದ್ಧ ಮೂಲಗಳಿಂದ ಬಂದಂತಹ ಯಾವುದೇ ವರಮಾನವನ್ನೂ ಸೇರಿಸಿಕೊಳ್ಳಬಹುದು. ಇದರಿಂದ ತನ್ನ ಆಸ್ತಿಯನ್ನು ಸಮರ್ಥಿಸಿಕೊಳ್ಳಲು ಆರೋಪಿಗೆ ಹಲವಾರು ಸಾಧ್ಯತೆಗಳು ತೆರೆದುಕೊಳ್ಳುತ್ತವೆ. ಏಕೆಂದರೆ ವಿಚಾರಣೆಯ ಸಮಯದಲ್ಲಿ ತೋರಿಸುವ ಮೂಲಗಳನ್ನು ಸರ್ಕಾರಕ್ಕೆ ಈ ಮೊದಲು ಘೋಷಿಸಿರಬೇಕು ಎಂಬ ನಿಯಮವೂ ಈಗ ಇಲ್ಲ. ೧೯೮೮ರ ಹಿಂದೆ ಆಗುತ್ತಿದ್ದುದು ಇದೆ. ಈ ನ್ಯೂನತೆಯನ್ನು ಬಳಸಿಕೊಂಡು ಹೆಚ್ಚಿನ ಆರೋಪಿಗಳು ತಮ್ಮ ಆದಾಯಕ್ಕೆ ಯಾವುದ್ಯಾವುದೋ ಮೂಲಗಳನ್ನು ತೋರಿಸಿ ಖುಲಾಸೆಯಾಗುತ್ತಿದ್ದರು. ಭವಿಷ್ಯದಲ್ಲಿಯೂ ಅಪರಾಧಿಗಳಿಗೆ ತಪ್ಪಿಸಿಕೊಳ್ಳುವುದಕ್ಕೆ ಮತ್ತೆ ಈ ಸೊಗಸಾದ ದಾರಿ ತೆರೆದುಕೊಂಡಿದೆ.

ಮೂರನೆಯದಾಗಿ, ಈ ಕಾಯಿದೆಯ ೨೪ನೇ ಸೆಕ್ಷನ್ ಅನ್ನು ಕಿತ್ತುಹಾಕಲಾಗಿದೆ. ಇದರ ಪ್ರಕಾರ ಲಂಚಕೊಟ್ಟವನ ಹೇಳಿಕೆಯನ್ನು ಅವನ ಮೇಲೆ ಕ್ರಮ ತೆಗೆದುಕೊಳ್ಳಲು ಬಳಸಿಕೊಳ್ಳಲು ಆಗುತ್ತಿರಲಿಲ್ಲ. ಆದರೆ ಈ ಉದ್ದೇಶಿತ ತಿದ್ದುಪಡಿಯಲ್ಲಿ ಈ ಕಾಯ್ದೆಯನ್ನು ಕೈಬಿಡಲಾಗಿದೆ. ಲಂಚಕೊಡುವುದು ಹಾಗೂ ಪಡೆಯುವುದು ಎರಡೂ ಅಷ್ಟೇ ಶಿಕ್ಷಾರ್ಹ ಅಪರಾಧ ಎಂದು ತಿದ್ದುಪಡಿ ತರಲಾಗಿದೆ. ಇದರಿಂದ ಸರ್ಕಾರಿ ಅಧಿಕಾರಿಗಳ ವಿರುದ್ಧ ಸಾಕ್ಷಿಯಾಗಿ ನಿಲ್ಲುವುದಕ್ಕೆ ಲಂಚಕೊಟ್ಟವರು ಹಿಂಜರಿಯುವಂತೆ ಆಗುತ್ತದೆ. ನಿಜ, ಯಾದವ್ ಅವರೇ ಗಮನಿಸುವಂತೆ "ಲಂಚಕೊಡುವವರನ್ನು ಸಂಪೂರ್ಣವಾಗಿ ಹೊರಗಿಡುವುದು ಸರಿಯಲ್ಲ ಅನ್ನುವ ವಾದದಲ್ಲಿ ತಿರುಳಿದೆ. ಆದರೆ ಅವರಿಗಿದ್ದ ರಕ್ಷಣೆಯನ್ನು ಸಂಪೂರ್ಣ ತೆಗೆಯುವ ಅವಶ್ಯಕತೆಯಿರಲಿಲ್ಲ. ಸರ್ಕಾರಕ್ಕೆ ಇನ್ನೂ ಉತ್ತಮ ಅವಕಾಶಗಳಿದ್ದವು.

### ಹಿಡಿಮಣ್ಣು ಹಿಡಿ ಮಣ್ಣು

ಬತ್ತಿ ಹೋಗುವ ನಾಳೆಗಳಿಗೆ ನಾಯಕರೇ ಚಿಗುರಿ
ಎತ್ತಿ ಹಿಡಿಯಿರಿ ಮಣ್ಣು ಕೃಷಿಯಾಗಲಿ ಗುರಿ
ಸೃಷ್ಟಿಸಲಾದೀತೆ ಕಾರ್ಖಾನೆಗಳಲಿ ಅಕ್ಕಿರಾಗಿ
ಸೃಷ್ಟಿಸಿ ಮಣ್ಣಿನ ಮಕ್ಕಳ ಬೆಳೆಯುವ–ರಾಗಿ
ಬೆಳೆಯುವರಾಗಿ

**ಶಿವಪ್ರಸಾದ ಮಲ್ಲರಬಾಣವಾಡಿ**
ನೆಲಮಂಗಲ

ಎರಡನೆಯ ಆಡಳಿತಾತ್ಮಕ ಸುಧಾರಣಾ ಸಮಿತಿ "ಬಲವಂತದ" ಹಾಗೂ "ಶಾಮೀಲಾಗಿ ಲಂಚ ನೀಡುವುದರ" ನಡುವೆ ವ್ಯತ್ಯಾಸವನ್ನು ಗುರುತಿಸಬೇಕೆನ್ನುವ ಸಲಹೆಯನ್ನು ಮುಂದಿಟ್ಟಿದೆ. ಒತ್ತಡಕ್ಕೆ ಮಣಿದು ಲಂಚಕೊಟ್ಟು ನಂತರ ಅದನ್ನು ವರದಿ ಮಾಡಿದವರಿಗೆ ಕೆಲವು ರಕ್ಷಣೆಯನ್ನು ನೀಡಬೇಕು. ಒಂದು ಹಂತದಲ್ಲಿ ಲಂಚಕೊಟ್ಟವರು ಒಂದು ವಾರದೊಳಗೆ ಘೋಷಣೆ ಮಾಡಿಕೊಂಡರೆ ಅವರಿಗೆ ವಿನಾಯಿತಿ ನೀಡಬಹುದೆಂಬ ಪ್ರಸ್ತಾಪವೂ ಇತ್ತು. ಆದರೆ ಆ ಎಲ್ಲಾ ವಿಚಾರಗಳನ್ನೂ ತಿರಸ್ಕರಿಸಲಾಯಿತು. ಅಂತಿಮ ಪ್ರಸ್ತಾವನೆಯಲ್ಲಿ ಲಂಚಕೊಟ್ಟವರು ಮತ್ತು ಪಡೆದವರು ಇಬ್ಬರೂ ಶಿಕ್ಷಾರ್ಹರು. ಹೀಗಾಗಿ ಬಿಟ್ಟರೆ ಲಂಚಪಡೆದವನ ವಿರುದ್ಧ ಸಾಕ್ಷ್ಯ ನೀಡುವ ಅವಕಾಶವೇ ಕಡಿಮೆಯಾಗಿಬಿಡುತ್ತದೆ." ಇದು ಮುಖ್ಯವಾಗಿ ಗಮನಿಸಬೇಕಾದ ಅಂಶ. ಏಕೆಂದರೆ ಟ್ರ್ಯಾಪ್ ಪ್ರಕರಣಗಳಲ್ಲಿ ಭ್ರಷ್ಟಾಚಾರಿಗಳನ್ನು ಹಿಡಿಯುವುದೇ ಅವರಿಗೆ ಲಂಚಕೊಟ್ಟು. ನ್ಯಾಯಾಲಯದಲ್ಲಿ ಹೀಗೆ ಲಂಚಕೊಟ್ಟವನ ಹೇಳಿಕೆ ಮುಖ್ಯವಾಗುತ್ತದೆ. ಈಗ ಲಂಚಕೊಟ್ಟವನೂ ಶಿಕ್ಷೆ ಅನುಭವಿಸಬೇಕು ಎಂದಾದರೆ ಅವನ್ಯಾಕೆ ದೂರು ಕೊಡಲು ಮುಂದೆ ಬರುತ್ತಾನೆ ?

ಇವೆಲ್ಲಕ್ಕಿಂತ ಮಾರಣಾಂತಿಕವಾದ ಇನ್ನೊಂದು ಬದಲಾವಣೆಯಾಗುತ್ತಿದೆ. "ಈಗಿರುವ ಕಾಯ್ದೆಯ ಪ್ರಕಾರ ಸೇವೆಯಲ್ಲಿರುವ ಸರ್ಕಾರಿ ನೌಕರನ ಮೇಲೆ ಕಾನೂನು ಕ್ರಮ ಜರುಗಿಸಬೇಕಾದರೆ ಮೊದಲು ಸರ್ಕಾರದ ಅಥವಾ ಉನ್ನತ ಅಧಿಕಾರಿಗಳಿಂದ ಪೂರ್ವಾನುಮತಿ ಪಡೆಯಬೇಕು. ನಿಷ್ಠಾವಂತ ಸರ್ಕಾರಿ ಅಧಿಕಾರಿಗಳಿಗೆ ಅನಾವಶ್ಯಕ ಕಿರುಕುಳ, ಹಿಂಸೆ ಕೊಡುವ ಉದ್ದೇಶದಿಂದಲೇ ಕೆಲವರು ಪ್ರಕರಣಗಳನ್ನು ದಾಖಲು ಮಾಡುತ್ತಾರೆ ಎನ್ನುವ ಕಾರಣಕ್ಕೆ ಅವರಿಗೆ ರಕ್ಷಣೆ ಒದಗಿಸುವ ಉದ್ದೇಶದಿಂದ ಇದನ್ನು ಮಾಡಲಾಗಿತ್ತು.

ಪ್ರಸ್ತಾಪಿತ ಮಸೂದೆಯಲ್ಲಿ ಇದನ್ನು ನಿವೃತ್ತ ಅಧಿಕಾರಿಗಳಿಗೂ ವಿಸ್ತರಿಸಲಾಗಿದೆ. ಇದು ಮೂಲ ಕಾಯ್ದೆಯ ಉದ್ದೇಶದ ದೃಷ್ಟಿಯಿಂದ ನ್ಯಾಯಯುತ ಹಾಗೂ ಅವಶ್ಯಕ. ಆದರೆ ಇದರ ಜೊತೆಗೆ ಅನಾವಶ್ಯಕವಾದ ಹಾಗೂ ಅರ್ಥವಿಲ್ಲದ ಮತ್ತೊಂದು ನಿಯಮವೂ ಸೇರ್ಪಡೆಯಾಗಿದೆ. ಈಗ ಖಾಸಗಿ ವ್ಯಕ್ತಿಯೊಬ್ಬ ಸರ್ಕಾರಿ ನೌಕರನೊಬ್ಬನ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಮನವಿ ಮಾಡಬೇಕಾದರೆ ಅದಕ್ಕೆ ನ್ಯಾಯಾಲಯದ ಆದೇಶ ತರಬೇಕಾಗುತ್ತದೆ. ಇದರಿಂದ ತಪ್ಪಿತಸ್ಥನಿಗೆ ಮತ್ತೊಂದು ರಕ್ಷಣೆ ಸಿಕ್ಕಂತಾಗುತ್ತದೆ. ಇದರಿಂದ ಭ್ರಷ್ಟಾಚಾರಕ್ಕೆ ಬಲಿಯಾದವರು ಹಾಗೂ ಭ್ರಷ್ಟಾಚಾರ ವಿರೋಧಿ ಹೋರಾಟಗಾರರು ಇವರಿಬ್ಬರಿಗೂ ಭ್ರಷ್ಟಾಚಾರವನ್ನು ವಿರೋಧಿಸಬೇಕು ಎನ್ನುವ ಉತ್ಸಾಹವೇ ನಂದಿಹೋಗುತ್ತದೆ." ಸರ್ಕಾರದ ಕಾಳಜಿಯೆಲ್ಲವೂ ಭ್ರಷ್ಟ ನೌಕರನ ವಿರುದ್ಧ ಕ್ರಮ ತೆಗೆದುಕೊಳ್ಳುವುದಕ್ಕಿಂತ ಹೆಚ್ಚಾಗಿ ಅವನನ್ನು ರಕ್ಷಿಸುವುದಕ್ಕೇ ಇದ್ದಂತೆ ತೋರುತ್ತದೆ.

## (ಅ)ಸಂತೃಪ್ತರು

"ಬರುವಾಗ ಬರಿಗೈಲಿ
ಬಂದು
ಬರಿಗೈಲೇ ಹೋಗುತ್ತೇವೆಂಬ
ಕಟುಸತ್ಯದ ಅರಿವಿದ್ದೂ
ವಾಮಮಾರ್ಗದಲ್ಲಿ
ಮತ್ತಷ್ಟು – ಮಗದಷ್ಟು
ಧನ – ಕನಕ ಸಂಪಾದಿಸುವ
ಮಂದಿ"

**ಮೈಸೂರು ಎನ್. ಶ್ರೀನಿವಾಸ್**
ಮಂಡ್ಯ

**ಮೊದಲು ಒಪ್ಪಿಗೆ ಪಡೆಯಬೇಕು**

ಯೋಗೇಂದ್ರ ಯಾದವ್ ಹೆಸರಿಸುವ ಕೊನೆಯ ತಿದ್ದುಪಡಿ ಎಂದರೆ ಅದು ಸೆಕ್ಷನ್–ಎ ಸೇರ್ಪಡೆ. ಅದು ಅಷ್ಟಾಗಿ ಸಾರ್ವಜನಿಕ ಅವಗಾಹನೆಗೇ ಬಂದಿಲ್ಲ. "ಅದರ ಅನ್ವಯ ಪೂರ್ವಾನುಮತಿ ಇಲ್ಲದೆ ಅಪರಾಧವನ್ನು ಕುರಿತಂತೆ ವಿಚಾರಣೆಯನ್ನು ಅಥವಾ ತನಿಖೆಯನ್ನು ಪ್ರಾರಂಭಿಸುವುದಕ್ಕೂ ಸಾಧ್ಯವಿಲ್ಲ. ಸರ್ಕಾರ ಪ್ರಸ್ತಾಪಿತ ತಿದ್ದುಪಡಿಯ ಪ್ರಕಾರ ತನಿಖೆ ಪ್ರಾರಂಭಿಸುವುದಕ್ಕೆ ಲೋಕಾಯುಕ್ತ ಅಥವಾ ಲೋಕಾಪಾಲ್‌ನ ಅನುಮೋದನೆ ಬೇಕು. ರಾಜ್ಯಸಭೆಯ ವರಿಷ್ಠ ಸಮಿತಿ ಇದನ್ನು ಇನ್ನಷ್ಟು ಹೊಲಸು ಮಾಡಿದೆ. ಅದು ಅಧಿಕಾರಿಯನ್ನು ನೌಕರಿಯಿಂದ "ತೆಗೆಯುವ ಸಾಮರ್ಥ್ಯವಿರುವ ಅಧಿಕಾರಿಯಿಂದ" ಅನುಮತಿಯನ್ನು ಪಡೆಯಬೇಕೆನ್ನುತ್ತದೆ. ಇದರ ಪರಿಣಾಮ ಸ್ಪಷ್ಟ. ಈಗ ರಾಜಕೀಯ ಒಡೆಯರು, ಸರ್ಕಾರಿ ನೌಕರನ ವಿರುದ್ಧ ವಿಚಾರಣೆ ನಡೆಯಬೇಕೋ ಬೇಡವೋ ಅನ್ನುವುದನ್ನು ನಿರ್ಧರಿಸುತ್ತಾರೆ." ಈ ಪರಿಚ್ಛೇದವನ್ನು ಸೇರಿಸುವುದರ ಹಿಂದೆ ಯಾವುದೇ ತರ್ಕವೂ ಇಲ್ಲ. ಯಾಕೆಂದರೆ ಕಾಯ್ದೆಯ ೧೯ನೇ ಪರಿಚ್ಛೇದವು (section 19 A of the act) ದುರುದ್ದೇಶಪೂರಿತ ದಾವೆಗಳಿಂದ ಅಧಿಕಾರಿಗಳನ್ನು ರಕ್ಷಿಸುತ್ತದೆ. ನಂಬಲರ್ಹವಾದ ಆಧಾರಗಳಿಲ್ಲದಿದ್ದ ಸಂದರ್ಭದಲ್ಲಿ ಸರ್ಕಾರವು ವಿಚಾರಣೆಗೆ ಅನುಮತಿಯನ್ನು ತಿರಸ್ಕರಿಸಬಹುದು. ಹಾಗಿದ್ದಾಗ ವಿಚಾರಣೆಗೆ ಮೊದಲೇ ಅನುಮತಿ ಪಡೆಯಬೇಕೆಂದು ಒತ್ತಾಯಿಸುವುದರಲ್ಲಿ ಅರ್ಥವೇ ಇಲ್ಲ. ನಿಮಗೆ ನಂಬಲರ್ಹ ಸಾಕ್ಷಿಗಳು ಸಿಗುವುದಕ್ಕೂ ವಿಚಾರಣೆ ನಡೆಯಬೇಕು. ಯಾವ ಆಧಾರದ ಮೇಲೆ ಸರ್ಕಾರ (ಅಥವಾ ಹಿಂದಿನ ಪ್ರಸ್ತಾಪವನ್ನು ಒಪ್ಪಿಕೊಂಡರೆ ಲೋಕಪಾಲ) ಅನುಮತಿ ನೀಡುತ್ತದೆ ಅಥವಾ ತಿರಸ್ಕರಿಸುತ್ತದೆ ? ಅಥವಾ ವಿಚಾರಣೆಯೇ ನಡೆಯದಿದ್ದಾಗ ಅನುಮತಿ ಪಡೆಯುವುದಕ್ಕೆ ಸಾಕ್ಷ್ಯವನ್ನು ಒದಗಿಸುವುದಾದರೂ ಹೇಗೆ ? ಒಂದು ಪಕ್ಷ ಅನುಮತಿ ಸಿಕ್ಕರೂ ಅಷ್ಟರಲ್ಲಿ ಆರೋಪಿಗಳಿಗೆ ನಡೆಯಲಿರುವ ವಿಚಾರಣೆಯ ಬಗ್ಗೆ ಮುನ್ಸೂಚನೆ ದೊರಕಿ ಅವರು ಸಾಕ್ಷ್ಯಗಳನ್ನು ಮುಚ್ಚಿಡುವುದಕ್ಕೆ ಅವಕಾಶ ಮಾಡಿಕೊಟ್ಟಂತಾಗುವುದಿಲ್ಲವೇ ?" ಕೊನೆಗೆ ಆಗುವುದಿಷ್ಟೆ. ಉನ್ನತ ಅಧಿಕಾರಿಗಳು ಹಾಗೂ ರಾಜಕಾರಣಿಗಳು ಭ್ರಷ್ಟಾಚಾರದ ಪ್ರಕರಣಗಳಲ್ಲಿ ಅಂತಿಮ ತೀರ್ಪುಗಾರರಾಗಿಬಿಡುತ್ತಾರೆ. ರಾಜಕಾರಣಿ ಮನಸ್ಸು ಮಾಡಿದರೆ ಭ್ರಷ್ಟ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಜರುಗದಂತೆ ನೋಡಿಕೊಳ್ಳಬಹುದು. ಅಷ್ಟೇ ಅಲ್ಲ ಅವರ ವಿರುದ್ಧ ಯಾವುದೇ ಸಾಕ್ಷ್ಯಗಳು ಸಂಗ್ರಹವಾಗದಂತೆಯೂ ನೋಡಿಕೊಳ್ಳಬಹುದು.

**ಮತ್ತೆ ಸಕ್ರಿಯವಾದ "ಏಕ ಆದೇಶ"**

ಹಳೆಯ ಸರ್ಕಾರಿ ಆದೇಶದ ಪ್ರಕಾರ (ಜಂಟಿ ಕಾರ್ಯದರ್ಶಿಗಿಂತ ಉನ್ನತ ಹುದ್ದೆಯ) ಯಾವುದೇ ಸರ್ಕಾರಿ ಅಧಿಕಾರಿಯ ವಿರುದ್ಧ ಸರ್ಕಾರದ ಅನುಮತಿ ಇಲ್ಲದೆ ವಿಚಾರಣೆ ನಡೆಸುವಂತಿಲ್ಲ. ಪ್ರಖ್ಯಾತ ವಿನೀತ್ ನಾರೇನ್ ಪ್ರಕರಣದಲ್ಲಿ ಸುಪ್ರೀಂ ಕೋರ್ಟ್ ೧೯೯೭ರಲ್ಲಿ ಈ ಆದೇಶವನ್ನು ಕಾನೂನುಬಾಹಿರ ಎಂದು ತೀರ್ಪು ನೀಡಿತ್ತು. ಸರ್ಕಾರ ಅದನ್ನು ೨೦೦೩ರಲ್ಲಿ ಒಂದು ಪ್ರಾವಿಷನ್ ಆಗಿ ಮತ್ತೆ ತಂದಿತು. ಅಂತಿಮವಾಗಿ ಇತ್ತೀಚೆಗೆ ೨೦೧೪ರಲ್ಲಿ ಸುಪ್ರೀಂ ಕೋರ್ಟಿನ ಸಂವಿಧಾನಾತ್ಮಕ ಪೀಠವೂ ಈ ಕಾಯ್ದೆಯು ಸಮಾನತೆಯ ಹಕ್ಕನ್ನೇ ಉಲ್ಲಂಘಿಸುತ್ತದೆ, ಹಾಗಾಗಿ ಇದು ಅಸಂವಿಧಾನಾತ್ಮಕ ಎಂದು ತೀರ್ಪು ನೀಡಿತು. ಆದರೆ ಈ 'ಬಾಬು' ಶಕ್ತಿ ಹಾಗೂ ಪ್ರಭಾವ ಎಷ್ಟರಮಟ್ಟಿಗೆ ಇದೆ ಅಂದರೆ, ಈಗ ಅದನ್ನು ಮತ್ತೆ ತರುತ್ತಿದ್ದಾರೆ.

"ಇರುವ ಕಾನೂನುಗಳನ್ನು ದುರ್ಬಲಗೊಳಿಸುವುದರಿಂದ ಭ್ರಷ್ಟಾಚಾರ ಹೋಗುವುದಿಲ್ಲ. ಅದು ನಿಜವಾದ ಪರಿಹಾರವಲ್ಲ. ವಾಸ್ತವವಾಗಿ ಕಾನೂನುಗಳು ಈಗಾಗಲೇ ದುರ್ಬಲವಾಗಿವೆ. ಸ್ವಚ್ಛಗೊಳಿಸಬೇಕಾಗಿರುವುದು ವಿಚಾರಣಾ ಸಂಸ್ಥೆಗಳನ್ನು. ಕಾನೂನು ಕ್ರಮವನ್ನು ತ್ವರಿತಗೊಳಿಸಬೇಕು. ಎಲ್ಲದಕ್ಕಿಂತ ಹೆಚ್ಚಾಗಿ ನಿಜವಾದ ರಾಜಕೀಯ ಇಚ್ಛಾಶಕ್ತಿ ಬೇಕು. ಭ್ರಷ್ಟಾಚಾರದ ವಿಷಯದಲ್ಲಿ ಉತ್ತಮ ಗುಣಮಟ್ಟದ ರಾಜಕೀಯ ನಿರ್ವಹಣೆ ತುಂಬ ಜರೂರಾಗಿ ಬೇಕಾಗಿದೆ. ಗುಪ್ತಾ ಅಂತಹವರ ಪ್ರಕರಣಗಳನ್ನು ಬಳಸಿಕೊಂಡು ಹಿಂದಿನದೆಲ್ಲವನ್ನು ಅಳಿಸಿಹಾಕುವುದು ಬೇಡ" ಅನ್ನುವ ಟಿ. ಎಸ್. ಆರ್. ಸುಬ್ರಮಣಿಯನ್ ಮಾತುಗಳನ್ನು ಕೇಳಿಸಿಕೊಳ್ಳೋಣ.

ಇಂತಹ ಮಹತ್ವದ ವಿಷಯಗಳೂ ಸಾರ್ವಜನಿಕವಾಗಿ ಚರ್ಚೆಯಾಗುತ್ತಿಲ್ಲ. ಎಲ್ಲವನ್ನು ಪರ–ವಿರೋಧದ ಭಾವನಾತ್ಮಕ ನೆಲೆಯಲ್ಲೇ ನೋಡುತ್ತಾ ಪ್ರತಿಯೊಂದು ಪ್ರಜಾಸತ್ತಾತ್ಮಕ ಸಂಸ್ಥೆಗಳನ್ನು ಸಾಯಿಸುತ್ತಿರುವುದು ದೇಶದ ಭವಿಷ್ಯದ ದೃಷ್ಟಿಯಿಂದ ಎಷ್ಟರಮಟ್ಟಿಗೆ ಒಳ್ಳೆಯದು ? ಈಗಲಾದರೂ ವ್ಯಾಪಕವಾದ ಚರ್ಚೆ ನಡೆಯುವಂತಾಗಲಿ. ಭ್ರಷ್ಟಾಚಾರ ವಿರೋಧಿ ಆಂದೋಲನ ಹೊಸ ರೂಪದಲ್ಲಿ ತಲೆಯೆತ್ತಲಿ. "ಈಗ ಧ್ವನಿ ಎತ್ತಲೇಬೇಕಾದ ಸಮಯ ಬಂದಿದೆ."

**ಪ್ರೊ॥ ಟಿ. ಎಸ್. ವೇಣುಗೋಪಾಲ್**
ನಂ. ಸಿಎಚ್–೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ
ಮೈಸೂರು – ೫೭೦ ೦೦೯




ಲೇಖಕರು : **ಪ್ರೊ ॥ ಬರಗೂರು ರಾಮಚಂದ್ರಪ್ಪ**
ಪುಟಗಳು : ೨೭೨ ಬೆಲೆ : ರೂ. ೧೯೫/-
ಪ್ರಕಾಶಕರು : **ಅಂಕಿತ ಪುಸ್ತಕ**
ನಂ. ೫೩, ಶ್ಯಾಮಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ
ಬಸವನಗುಡಿ, ಬೆಂಗಳೂರು – ೫೬೦ ೦೦೪




# ಹೋರಾಟದ ಅಂತರ್ಜಲ ಬರಗೂರರ 'ಶಬರಿ'

**ಕ**ನ್ನಡದ ಸಮುದಾಯ ಪ್ರಜ್ಞೆಯ ಅಸ್ಮಿತೆಯಾಗಿ ಕಾಣಿಸುತ್ತಿರುವ ಪ್ರೊ ॥ ಬರಗೂರು ರಾಮಚಂದ್ರಪ್ಪನವರು ತಮ್ಮ ಸಂಘಟನೆ, ಹೋರಾಟ, ತಾತ್ವಿಕ ಬದ್ಧತೆಗಳಿಂದಾಗಿ ಚಿರಪರಿಚಿತರು. ತಮ್ಮ ನೇರ, ಖಚಿತ ಮಾತುಗಳ ಮೂಲಕ ಕರ್ನಾಟಕದಾದ್ಯಂತ ಪ್ರಗತಿಪರ ಮನಸ್ಸುಗಳನ್ನು ತಟ್ಟಿದ ಅವರು ಸದಾ 'ಕಟ್ಟುವಿಕೆ'ಯಲ್ಲಿ ನಿರತರು. ತಾವು ಕಾಲಿಟ್ಟ ಎಡೆಯಲ್ಲೆಲ್ಲ ಹೊಸತು ಹುಟ್ಟುವಂತೆ ಕ್ರಿಯಾಶೀಲರಾಗಿ ಚಿಂತಿಸುತ್ತ ಬಂದ ಅವರು ಬಂಡಾಯದ ಮಾತುಗಳಿಗೆ ಆರ್ದ್ರತೆಯ ಒಳಮನಸ್ಸನ್ನು ಕೊಟ್ಟವರು. ಹೋರಾಟ ಹಾಗೂ ಜೀವನಪ್ರೀತಿಗಳು ಪರಸ್ಪರ ವಿರುದ್ಧ ಕ್ರಿಯೆಗಳಲ್ಲ ಎಂಬ ಎಚ್ಚರವನ್ನು ಸದಾ ಕಾಪಿಟ್ಟುಕೊಂಡಿರುವುದರಿಂದಲೇ ಅವರು ಇಂದು ಸೈದ್ಧಾಂತಿಕ ಸೃಜನಶೀಲತೆಯ ಕುರಿತು ಆಡುತ್ತಿರುವ ಮಾತಿಗೆ ತೂಕವಿದೆ. ವಿವಿಧ ಚಿಂತನಾಧಾರೆಗಳಿಂದ ಬಂದ ಜನರನ್ನು ಒಂದು ಸೂತ್ರದಲ್ಲಿ ಬೆಸೆಯುವ ಸಹಿಷ್ಣುತೆಯ ಮೂಲಕ ಸಮಾಜದ ಪರಿವರ್ತನೆಗೆ ಕಾರಣವಾಗುವ ದೊಡ್ಡ ಕನಸನ್ನು ನಾವಿಂದು ಮತ್ತೆ ಕಟ್ಟಬೇಕಾದ ಸಂದರ್ಭ ಮುಂದಿದೆ. ಸಿದ್ಧಾಂತಗಳನ್ನು ವೈಯಕ್ತಿಕ ಲಾಭಕ್ಕೆ ಬಳಸಿಕೊಳ್ಳುತ್ತಾ ಮಾತುಗಳ ಮೂಲಕವೇ ಹಿಂಸೆಗಿಳಿದಿರುವ ಇಂದಿನ ಅಸೂಕ್ಷ್ಮ ವಾತಾವರಣದಲ್ಲಿ ಸೋತ ಮಾತುಗಳಿಗೆ ಮತ್ತೆ ಜೀವತುಂಬುವ ಕ್ರಿಯಾಶೀಲತೆ ಹುಟ್ಟಬೇಕಿದೆ. ಅಂಥ ಮಾತುಗಳು ಹುಟ್ಟಲು ಮೌನವೂ ಅಗತ್ಯ. ಪ್ರೊ ॥ ಬರಗೂರರ 'ಶಬರಿ' ಕಾದಂಬರಿಯಲ್ಲಿ ಅಂಥ ಜೀವಂತಿಕೆಯ ಸೆಲೆಯಿದೆ. ಆ ಕಾದಂಬರಿಯ ಓದು ಇಂದು ಹೋರಾಟಗಾರನೊಳಗಿರುವ ಸೂಕ್ಷ್ಮಜ್ಞತೆಯನ್ನು ಅನಾವರಣಗೊಳಿಸುವ ಕಿಟಕಿಯಂತಿದೆ.

ಮಾತಿನ ಸಿಪ್ಪೆ ಸುಲಿದು ಒಳಗೆ ಕಾಣುವ ಬೆಳಕನ್ನು ಹೀರುವ ಸಂವೇದನಾಶೀಲತೆ ಇಲ್ಲದೇ ಹೋದರೆ 'ಬಾಯಿಬಡುಕತನ' ಆವರಿಸುತ್ತದೆ. ಮಾತು ಸೋಲುತ್ತದೆ. ಸೈದ್ಧಾಂತಿಕ ಚರ್ಚೆಗಳು ನಡೆಯಬೇಕಾದ ಸಂದರ್ಭವನ್ನು ಬೀದಿಜಗಳಗಳು ಆಳತೊಡಗುತ್ತವೆ. ಇತ್ತೀಚೆಗೆ ಪ್ರಕಟವಾದ ಸಂದರ್ಶನಗಳಲ್ಲಿ ಬರಗೂರು ಅವರು ಇದನ್ನೇ ಹೇಳುತ್ತಿದ್ದಾರೆ. ಇಂಥ ಸಂದರ್ಭದಲ್ಲಿ ನನಗೆ ಬಹುಮುಖ್ಯವಾಗಿ ಕಾಣುತ್ತಿರುವುದು ಅವರು ಪ್ರತಿಪಾದಿಸುತ್ತಿರುವ 'ಸೈದ್ಧಾಂತಿಕ ಸೃಜನಶೀಲತೆ ಹಾಗೂ ಸೈದ್ಧಾಂತಿಕ ಬದ್ಧತೆ'. ಮೇಲ್ನೋಟಕ್ಕೆ ಇವೆರಡೂ ಸಂಗತಿಗಳು ವಿರುದ್ಧವೆನ್ನುವಂತೆ ತೋರುತ್ತವೆ. ಇಲ್ಲಿ ಸೈದ್ಧಾಂತಿಕ ಬದ್ಧತೆಯೆಂದರೆ ಸಿದ್ಧಾಂತವೊಂದನ್ನು ಕುರುಡಾಗಿ ಅನ್ವಯಿಸಿಕೊಂಡು ಮಿತಿಗೊಳ್ಳುವುದಲ್ಲ. ಹಾಗಾದಾಗ ಸಿದ್ಧಾಂತವು ಜಡವಾಗುತ್ತದೆ. ಕಾಲ, ಸಂದರ್ಭಗಳ ಚಲನಶೀಲತೆಯಲ್ಲಿ ವಿಕಾಸಗೊಳ್ಳುತ್ತಲೇ ನಡೆದಾಗ ಸಿದ್ಧಾಂತವು ಸೃಜನಶೀಲಗೊಳ್ಳುತ್ತದೆ. ಸಿದ್ಧಾಂತವು ಸೃಜನಶೀಲವಾಗಬೇಕಾದರೆ ಮೊದಲು ನಾವು ಸೃಜನಶೀಲರಾಗಬೇಕು. ಪ್ರೊ ॥ ಬರಗೂರು ರಾಮಚಂದ್ರಪ್ಪನವರು ತಮ್ಮ 'ಶಬರಿ' ಕಾದಂಬರಿಯ ಮೂಲಕ ಇದೇ ತತ್ವವನ್ನು ಸೃಜನಶೀಲವಾಗಿ ಕಟ್ಟಿದ್ದಾರೆ.

ಶಬರಿ ಅವರಿಗೆ ಪುರಾಣದ ಪಾತ್ರವಷ್ಟೇ ಅಲ್ಲ; ಅವಳು ಚರಿತ್ರೆಯೂ ಹೌದು. ಅಷ್ಟೇ ಅಲ್ಲ ವರ್ತಮಾನದಲ್ಲೂ ಬೆಳೆಯುತ್ತಿರುವ ರೂಪಕವೂ ಹೌದು. ಬುಡಕಟ್ಟಿನ ಹೆಣ್ಣೊಬ್ಬಳು ಹೋರಾಟಗಾರ್ತಿಯಾಗಿ, ಸಮುದಾಯದ ಧ್ವನಿಯಾಗಿ ಬೆಳೆಯುವ ಕತೆಯಿದು. ಶಬರಿಯ ವಿಕಾಸದಲ್ಲಿ ಸೂರ್ಯನೆಂಬ ಚಿಂತಕನ ಪ್ರೇರಣೆಯಿದೆ. ಕಾದಂಬರಿಯುದ್ದಕ್ಕೂ ಬರುವ ಸೂರ್ಯನ ಸ್ವಗತಗಳು, ಆತ್ಮವಿಮರ್ಶೆ, ಸಮುದಾಯದ ಜೊತೆ ಅವನು ಆಡುವ ಮಾತುಕತೆಗಳಲ್ಲಿ ಬರಗೂರರ ಚಿಂತನೆಗಳು ವ್ಯಕ್ತವಾಗುತ್ತವೆ. ಶಬರಿಯ ಭಾವಶಕ್ತಿ, ಸೂರ್ಯನ ಬೌದ್ಧಿಕ ಬಲಗಳು ಒಂದರೊಳಗೊಂದು ಬೆರೆಯುತ್ತಾ ನಡೆಯುವ ಸೃಜನಶೀಲ ಸೃಷ್ಟಿಯು ಇಂದು ನಮ್ಮ ಸಿದ್ಧಾಂತ ಹಾಗೂ ಹೋರಾಟಗಳು ಪಡೆದುಕೊಳ್ಳಬೇಕಾದ ಅಂತಃಶಕ್ತಿಯ ಪರಿಯನ್ನು ಸೂಚಿಸುತ್ತವೆ. ಆದ್ದರಿಂದ ಶಬರಿಯ ಮರು ಓದಿಗೆ ಕಾಲ ಸನ್ನಿಹಿತವಾಗಿದೆ.

ಹೋರಾಟವನ್ನು ಕಟ್ಟಲು ಮಾತು ಬೇಕು. ಸೈದ್ಧಾಂತಿಕ ಸ್ಪಷ್ಟತೆ ಮೂಡುವಾಗ ಮೌನಬೇಕು. ಮಾತು–ಮೌನಗಳ ನಡುವೆ ಜೀಕುವ 'ಶಬರಿ' ಒಂದು ಹೋರಾಟದ ಕತೆ. ಮಾತುಗಳಲ್ಲಿ ಮೂಡುವ ಪ್ರಖರ ರಾಜಕೀಯ ಪ್ರಜ್ಞೆ ಹಾಗೂ ಮೌನದಲ್ಲಿ ಮಿಡಿಯುವ ಕಾವ್ಯಾತ್ಮಕ ಸಾಧ್ಯತೆಗಳು ಕಾದಂಬರಿಯ ಅನುಭವವನ್ನು ಗಹನಗೊಳಿಸುತ್ತಹೋಗುತ್ತವೆ. ಬುಡಕಟ್ಟು ಜನರ ಮುಗ್ಧತೆ, ಅದನ್ನೇ ಬಂಡವಾಳ ಮಾಡಿಕೊಂಡು ಆಳುವ ಬುದ್ಧಿವಂತರೆನ್ನಿಸಿಕೊಂಡವರ ಕ್ರೌರ್ಯ, ಬುಡಕಟ್ಟಿನ ಬದುಕಿನಲ್ಲಿ ಇಳಿದು ನಿಧಾನವಾಗಿ ಅವರನ್ನು ಆವರಿಸಿಕೊಳ್ಳುತ್ತಾ, ಅವರಲ್ಲಿ ಪ್ರಶ್ನಿಸುವ ಶಕ್ತಿ ಬೆಳೆಸುವ, ಹೋರಾಟದ ಕಿಚ್ಚು ಹಚ್ಚುವ ಸೂರ್ಯ... ಇದು ಸ್ಥೂಲವಾದ ಕಥಾಹಂದರ. ಸೂರ್ಯ ತನ್ನ ಸಿದ್ಧಾಂತಗಳನ್ನು ಬುಡಕಟ್ಟು ಜನರ ಮೇಲೆ ತಂದು ಹೇರುವುದಿಲ್ಲ. ಅದು ಅವರೊಳಗೆಯೇ ಮೊಳಕೆಯೊಡೆಯುವಂತೆ ಮಾಡುವಲ್ಲಿ ಅವನ ಗೆಲುವಿದೆ. ಹಾಗೆ ಭೂಮಿಯನ್ನು ಹದಗೊಳಿಸುವ ತಾಳ್ಮೆ, ಪ್ರೇಮ, ವಿವೇಕ ಇವೆಲ್ಲವೂ ಸೂರ್ಯನಲ್ಲಿದೆ. ಅದಕ್ಕೆಂದೇ 'ಶಬರಿ' ಇಲ್ಲಿ ಬರಿಯ ಒಂದು ಪಾತ್ರವಲ್ಲ. ಅದು ಕಾದಂಬರಿಯುದ್ದಕ್ಕೂ ಬೆಳೆಯುವ ರೂಪಕ.

ಶಬರಿ ಹೋರಾಟದ ಹಿಂದಿರುವ ಅಂತರ್ಜಲ. ಆಕೆ ಭೂಮಿ, ಪ್ರಕೃತಿ, ಎಲ್ಲ ಕ್ರಿಯೆಯ ಹಿಂದಿನ ಚೈತನ್ಯ... ಅವಳು ಮುಗ್ಧೆ ಆದರೆ ಪ್ರಗಲ್ಭೆ. ಅವಳು ಕೋಮಲೆ ಆದರೆ ಸಬಲೆ : ಅವಳನ್ನು ಸಿದ್ಧಮಾದರಿಗಳಲ್ಲಿ ಹಿಡಿಯಲಾಗದು ! ಅವಳು 'ಅಧಿಕಾರ'ವನ್ನು ಮೀರಿದ ಫಲವಂತಿಕೆ. ಹೀಗೆ ಹೆಣ್ತನದ ಗಾಢ ಛಾಯೆಯೊಂದು ಕಾದಂಬರಿಯ ತುಂಬ ಹರಡಿದೆ. ಸಹನೆ ಎಂಬುದು ಹೆಣ್ತನದ ಗುಣವೆಂದು ಒಪ್ಪಿಕೊಳ್ಳುವುದೇ ಆದರೆ, ಅದು ದೌರ್ಬಲ್ಯವಲ್ಲ ಶಕ್ತಿ ಎಂದು 'ಶಬರಿ' ಕಾಣಿಸುತ್ತದೆ. ನಾವೆಲ್ಲ ಭೂಮಿತಾಯಿಯ ಮಕ್ಕಳು ಎಂಬ ಮಾತೃಸಂಸ್ಕೃತಿಯಿಂದ, ನಾವು ಭೂಮಿಯ ಒಡೆಯರು ಎಂಬ ಪಿತೃಸಂಸ್ಕೃತಿಗೆ ತಿರುಗಿದಾಗ ಕರುಳಬಳ್ಳಿಯ ಸಂಬಂಧದ ಬದಲು 'ಅಧಿಕಾರ ಸಂಬಂಧ' ರೂಪುಗೊಂಡಿತು. ಹೆಣ್ಣು ಹಾಗೂ ಭೂಮಿಗೆ ಪುರುಷ ಒಡೆಯನಾದ. ಈ 'ಒಡೆತನ'ದ ರಾಜಕಾರಣವು ಮುಗ್ಧರನ್ನು ದಾಸ್ಯದಲ್ಲಿಯೇ ಇಡುತ್ತ ಬಂತು. ಧರ್ಮದ ಹೆಸರಿನಲ್ಲಿ, ಸ್ವರ್ಗ–ನರಕ, ಪಾಪ–ಪುಣ್ಯಗಳ ಭೀತಿ ಹುಟ್ಟಿಸಿ ದಾಸ್ಯವನ್ನು ಖಾಯಂಗೊಳಿಸಿತು. ಇಂಥ ಸ್ಥಿತಿಯೇ ಸ್ಥಿರವಾಯಿತು. ಪ್ರಶ್ನಿಸುವುದೇ ಪಾಪವೆಂದು ಭಾವಿಸುವ ಮುಗ್ಧರಲ್ಲಿ ಪ್ರಶ್ನೆಗಳು

ಡಾ॥ ಗೀತಾ ವಸಂತ

ಮೂಡುವಂತೆ ಮಾಡುವಲ್ಲಿ ಸೂರ್ಯನ ಸಾಫಲ್ಯವಿದೆ. ಜನರ ವರ್ತಮಾನದ ಸಂಕಟಗಳ ಹಿಂದಿರುವ ಚಾರಿತ್ರಿಕ ವಾಸ್ತವವನ್ನು ಅವನು ತೆರೆದಿಡುತ್ತ ಹೋಗುತ್ತಾನೆ.

ಆಗ ಶಬರಿಯೆಂಬ ಬುಡಕಟ್ಟು ಹೆಣ್ಣಿನಲ್ಲಿ ಮೂಡುವ ಪ್ರಶ್ನೆ ಕಾದಂಬರಿಯ ಬೀಜಪ್ರಶ್ನೆಯೂ ಹೌದು. "ಆವಾಗ – ನಮ್ ಶಬರಜ್ಜಿ, ಕಾಡ್ನಾಗೆ ಗುಡಿಸ್ಲು ಕಟ್ಗಂಡು ರಾಮ್ ದ್ಯಾವ್ರನ್ನ ಕಾಯ್ದಾಗ – ಅವ್ರು ಅಣ್ಣು ಅಂಪ್ಲ ಬೆಳೀತಿದ್ಲು. ರಾಮಂಗೆ ಅಂಬ್ತ ಇಟ್ಕಂಡ್ ಕಾಯ್ತಾ ಇದ್ಲು – ಅಂಬ್ತ ಯೇಳ್ತಾರೆ. ಶಬರಜ್ಜೀಗೆ ಬೆಳೆ ಬೆಳ್ಯಾಕೆ ಭೂಮಿ ಇತ್ತು. ಆ ಭೂಮಿ ತಾಯಿ ಶಬರಜ್ಜೀಗೆ ವರ ಕೊಡ್ತಿದ್ಲು. ಅಣ್ಣು ಅಂಪ್ಲು, ಗೆಡ್ಡೆ, ಗೆಣಸು, ಎಲ್ಲಾ ಕೊಡ್ತಿದ್ಲು. ಇವಾಗ ನಮಗೆ ನಮ್ದೇ ಅಂಬ್ತ ಒಂದಂಗೈ ಅಗ್ಲಾನೂ ಭೂಮಿ ಇಲ್ಲ; ಬೆವರು ಮಾತ್ರ ಐತೆ. ಯಾಕಿಂಗ್ ಅಂಬ್ತ ?" (ಪು. ೧೧೯) ಈ ಪ್ರಶ್ನೆಯೇ ಅವಳಲ್ಲಿ ಬೆಳೆಯುತ್ತ ಹೋಗುತ್ತದೆ. ಮುಂದೆ ಭೂಮಾಲೀಕರ ಹಾಗೂ ಬಂಡವಾಳಶಾಹಿಯ ವಿರುದ್ಧ ನಡೆಸುವ ಹೋರಾಟದಲ್ಲಿ ಅವಳೇ ಕೇಂದ್ರವಾಗುತ್ತಾಳೆ. ತನ್ನ ಸಮುದಾಯದ ಕುರಿತು, ಅವರ ಹಕ್ಕುಗಳ ಕುರಿತು ಯೋಚಿಸುವಾಗಲೇ ಅವಳಲ್ಲಿ ಇನ್ನೊಂದು ಪ್ರಶ್ನೆಯೇಳುತ್ತದೆ. 'ಊಳೋನೇ ಹೊಲದೊಡೆಯ' ಎಂಬ ಮಾತಿನಲ್ಲೂ ಸಹಜತೆಯಿಲ್ಲ ಎಂದು ಆಕೆಗನಿಸುತ್ತದೆ. "ಗಂಡಸ್ರು ಉಳ್ತಾರೆ, ನಾವ್ ಯೆಣ್ ಯೆಂಗುಸ್ರು ಹೊಲ ಉಳಾಕಿಲ್ಲ. ಆದ್ರೆ ನಾವು ಬೀಜ ಬಿತ್ನೆ ಮಾಡ್ತೀವಿ, ಸಸಿ ಆಕ್ತೀವಿ, ಕಳೆ ತೆಗೀತೀವಿ; ಫಸಲು ಬಂದಾಗ ಕೊಯ್ಲು ಮಾಡ್ತೀವಿ. ಈಟೆಲ್ಲ ಮಾಡೀರು ನಾವ್ ಒಡೇರಾಗಾಂಗಿಲ್ವಾ ?" (ಪು. ೧೨೦) ಎಂದು ಪ್ರಶ್ನಿಸುವಲ್ಲಿ ಶಬರಿಯ ಅನನ್ಯತೆಯಿದೆ. ಕೃಷಿಯನ್ನು ರೂಪಿಸಿದ ಸ್ತ್ರೀಯರು ಆರ್ಥಿಕ ಲಾಭದ ಪ್ರಶ್ನೆ ಬಂದಾಗ, ಒಡೆತನದ ಪ್ರಶ್ನೆ ಬಂದಾಗ ಅದರಿಂದ ಹೊರತಾಗುವ ವ್ಯಂಗ್ಯವನ್ನು ಶಬರಿಯ ಮುಗ್ಧ ಪ್ರಶ್ನೆ ಧ್ವನಿಪೂರ್ಣವಾಗಿ ಹೊಮ್ಮಿಸುತ್ತದೆ. ಶಬರಿಯೊಳಗೆ ಹುಟ್ಟುವ ಸಹಜ ಅರಿವಿನ ಝರಿ ಕಾದಂಬರಿಯಲ್ಲಿ ಹರಿಯುತ್ತ ಹೋಗುತ್ತದೆ.

ಹಾಗೆ ನೋಡಿದರೆ ಕಾದಂಬರಿಯಲ್ಲಿ ಶಬರಿ ಹಾಗೂ ಭೂಮಿಯ ಸಂಬಂಧ 'ಅಧಿಕಾರ ಸಂಬಂಧ' ಅಲ್ಲ. ಭೂಮಿಯೊಡನೆ ಅವಳದು ಸಾವಯವ ಸಂಬಂಧ. ಹೆಣ್ಣನ್ನು ಪ್ರಕೃತಿ ಎನ್ನುವುದು ಬರೀ ಆಲಂಕಾರಿಕ ಪದವಲ್ಲ. ಹೆಣ್ತನ ಹಾಗೂ ಪ್ರಕೃತಿಯ ಜೀವಪರತೆ ಒಂದರೊಳಗೊಂದು ಹಾಸುಹೊಕ್ಕಾಗಿರುವಂಥವು. ಪ್ರಕೃತಿಯ ಅಗಾಧ ಫಲವಂತಿಕೆ ಹಾಗೂ ಜೀವಪರತೆಯ ಒಂದಂಶವೇ ಹೆಣ್ಣು. ಹೆಣ್ಣೆಂಬ ಜೀವನದಿಯನ್ನು ಅಧಿಕಾರವು ಬಂಧಿಸಲಾಗದು. ಧರ್ಮ–ಸಮಾಜ–ಸಂಸ್ಕೃತಿಗಳೆಂಬ ಕೃತಕ ರಚನೆಗಳು ಅವಳನ್ನು ಬಂಧಿಸಿದಂತೆ ತೋರಿದರೂ ಅದನ್ನೆಲ್ಲ ನಿರಚಿಸುವ ಅಂತಃಶಕ್ತಿ ಅವಳಲ್ಲಿ ಗುಪ್ತಗಾಮಿನಿಯಾಗಿದೆ. ಶಬರಿ ಆ ಕಾಲದ ಅನಿವಾರ್ಯತೆಗಳಲ್ಲಿ ಹೆಪ್ಪುಗಟ್ಟಿದ ನದಿಯಾಗಿದ್ದಳು. ಸೂರ್ಯನ ಸ್ಪರ್ಶದಿಂದ ಕರಗಿದ ಅವಳು ಕಲಕಲನೆ ಹರಿದಳು. ಶಬರಿಯೊಳಗಿನ ಇಂಥ ಜೀವಸಂಗೀತವನ್ನು ಕಾದಂಬರಿ ಕಾವ್ಯಾತ್ಮಕಗೊಳಿಸುತ್ತದೆ. ಆ ರಾಮಾಯಣದ ಶಬರಿಯೂ ಈ ಶಬರಿಯೂ ಅಲ್ಲಲ್ಲಿ ಒಂದೇ ಬಿಂದುವಿನಲ್ಲಿ ಸೇರುತ್ತ ಹೆಣ್ತನದ ಭಾವ ಸಾಂದ್ರವಾಗುತ್ತದೆ. ಎಲ್ಲ ಅಧಿಕಾರ ರಚನೆಗಳಿಗಿಂತ ಮುಂಚಿನ ಆದಿಮ ಸ್ಥಿತಿಯ ಮುಕ್ತ ಪ್ರಜ್ಞೆಯಾಗಿ ಆಕೆ ಹೊಳೆಯುತ್ತಾಳೆ.

*ಶ್ರೀರಾಮನ ಕಾಯುವಿಕೆ; ಕಾಯುವುದರಲ್ಲೇ ಬಾಳುವಿಕೆ*
*ಸಂಕಲ್ಪವೇ ಶಕ್ತಿಯಾದ ಶಬರಿ*
*ಶ್ರೀರಾಮನಿಗೆ ಗುಡಿಕಟ್ಟಲಿಲ್ಲ; ತನಗಾಗಿ ಗುಡಿಸಲು ಕಟ್ಟಿಕೊಂಡಳು*
*ಶ್ರೀರಾಮನಿಗೆ ಮಂತ್ರಪೂಜೆ ಮಾಡಲಿಲ್ಲ. ಹೂಬಿಡುವ ಗಿಡಬಳ್ಳಿ ಬೆಳೆದಳು*
*ಶ್ರೀರಾಮನಿಗೆ ಕಣ್ಣುಮುಚ್ಚಿ ತಪಸ್ಸು ಮಾಡಲಿಲ್ಲ; ಕಣ್ತೆರೆದು ಕಾಯುವ*
*ಮನಸ್ಸಾದಳು.*
*ಶ್ರೀರಾಮನಿಗೆ ಪೂಜಾರಿಯಾಗಲಿಲ್ಲ; ತಾಯಿಯಾದಳು.*
*ಶಬರಿ ಸಿದ್ಧಮಾದರಿಗಳನ್ನು ಮೀರಿದಳು...* (ಪು. ೧೩೩)

ಇದು ಕಾದಂಬರಿಯ ತಾತ್ವಿಕತೆಯೂ ಹೌದು. ಕಾದಂಬರಿಯ ಮುನ್ನುಡಿಯಲ್ಲಿ ಲೇಖಕರೇ ಹೇಳುವಂತೆ 'ಕಾಯುವುದು' ಎಂದರೆ ವೇಟಿಂಗ್ ಎಂಬರ್ಥ ಮಾತ್ರವಲ್ಲ. ಅದು ಕಾವುಗೊಳ್ಳುವುದು, ಕುದಿಯುವುದು ಎಂಬರ್ಥದಲ್ಲೂ ಬಳಕೆಯಾಗುತ್ತದೆ. ಜೀವನದ ಸಂಕಟಗಳಲ್ಲಿ ಕುದಿಗೊಂಡು ಹದಗೊಳ್ಳುವ ಮಾಗಿದ ಪ್ರಜ್ಞೆಗೆ ಶಬರಿಯೊಂದು ಸಂಕೇತ. ಈ ಕಾದಂಬರಿಯಲ್ಲಿ ಬರುವ ಶಬರಿಯೂ ಹಾಗೆಯೇ. ಅವಳು ಅನುಭವಗಳನ್ನು ನಿರಾಕರಿಸದೇ ಸ್ವೀಕರಿಸುತ್ತಹೋಗುವ ಪರಿಯೇ ನಮ್ಮನ್ನು ಚಕಿತಗೊಳಿಸುತ್ತದೆ. ಅನುಭವ ಸದಾ ಸುಖದ್ದೇ ಆಗಿರುವುದಿಲ್ಲ. ಅದು ತಪ್ತತೆ, ವಿರಹ, ನೋವು ಏನೆಲ್ಲವೂ ಆಗಿರಬಹುದು. ಅನುಭವಗಳ ಮುಂದೆ ಅಸಹಾಯಕಳಾಗದೇ ಅದನ್ನು ಅನುಭವಿಸಿಯೇ ಗೆಲ್ಲುವ ಸಂಕಲ್ಪದಲ್ಲಿ ಶಬರಿಯ ಗೆಲುವಿದೆ. ಮದುವೆಯ ದಿನದ ರಾತ್ರಿಯೇ ಗಂಡ ಚಂದ್ರನನ್ನು ಕಳೆದುಕೊಂಡು ಒಂಟಿತನದಲ್ಲಿ ನಲುಗುವ ಶಬರಿ ಸೂರ್ಯನ ಸ್ನೇಹದಲ್ಲಿ ಮತ್ತೆ ಅರಳುತ್ತಾಳೆ. ಸಿದ್ಧಮಾದರಿಗಳನ್ನು ಮೀರುವ ಕಾವನ್ನು ಪಡೆಯುತ್ತಾಳೆ. ಅಷ್ಟೇ ಅಲ್ಲ, ಸೂರ್ಯನೊಳಗೂ ಇರುವ ಪ್ರೇಮದ ಚಿಲುಮೆ ಛಿಲ್ಲೆನ್ನುವಂತೆ ಮಾಡುತ್ತಾಳೆ. ಈ ಎಲ್ಲ ಕ್ರಿಯೆಯಲ್ಲಿ ಎಲ್ಲಿಯೂ ಕೃತಕತೆಯಿಲ್ಲ, ಕೃತಕ ಬೌದ್ಧಿಕತೆಯಿಲ್ಲ. ಶಬರಿ ಪ್ರಕೃತಿಯ ಸಹಜ ನಿರಾಳತೆ. ಮುಗ್ಧತೆ ಹಾಗೂ ಪ್ರಖರತೆ. ಕರುಳು ಹಾಗೂ ಕೊರಳು. ತನ್ನ ಸಮುದಾಯದ ಸಂಕಟಗಳಿಗೆ ಭಾಷೆಯಾಗುವ ಆಕೆ ಹೋರಾಟಕ್ಕೆ ಸ್ಫೂರ್ತಿಯಾಗುತ್ತಾಳೆ. ಸಿದ್ಧಾಂತಗಳಲ್ಲಿ ಬಂಧಿಯಾಗದ ಆ ಜೀವನದಿಯ ನಡುವೆಯೇ ಒಂದು ಸಿದ್ಧಾಂತವಾಗುತ್ತದೆ ! ಅದು ಸೃಜನಶೀಲ ಸಿದ್ಧಾಂತ. ಆಗುತ್ತಲೇ ಇರುವ ಚಲನಶೀಲ ಸಿದ್ಧಾಂತ. ತಮ್ಮ ಸೈದ್ಧಾಂತಿಕ ಚಲನಶೀಲತೆಯನ್ನು ಬರಗೂರು ಅವರು 'ಶಬರಿ'ಯ ಮೂಲಕ ನಿರೂಪಿಸಿದ್ದಾರೆನಿಸುವುದು ಇಲ್ಲಿಯೇ.

ಅಕ್ಷರದ ಅರಿವಿನ ಮೂಲಕ ಸೂರ್ಯ ಶಬರಿಯನ್ನು ಎಚ್ಚರಗೊಳಿಸಿದಂತೆ, ತನ್ನೊಳಗಿನ ಅಂತಃಶಕ್ತಿಯಿಂದ ಶಬರಿಯೂ ಸೂರ್ಯನನ್ನು ಎಚ್ಚರಗೊಳಿಸುತ್ತಾಳೆ. ಈ ಪರಸ್ಪರ ಪ್ರೇರಣೆಯಲ್ಲಿ ಸದ್ದಿಲ್ಲದೇ ಪ್ರೇಮ ವಿಕಸಿಸುತ್ತದೆ.

# ಗಝಲ್

ಪ್ರೀತಿ ಎಂದರೇನೆಂದು ಕಾಡಿಗೆ ಕೇಳಿದೆ
ಅದು ಹಸಿರುಟ್ಟು ನಲಿಯಿತು ॥

ಪ್ರೀತಿ ಎಂದರೇನೆಂದು ನದಿಗೆ ಕೇಳಿದೆ
ಅದು ಹೊಲ–ಗದ್ದೆಗಳಿಗೆ ಹರಿಯಿತು ॥

ಪ್ರೀತಿ ಎಂದರೇನೆಂದು ಆಕಾಶಕ್ಕೆ ಕೇಳಿದೆ
ಅದು ಸೂರ್ಯ–ಚಂದ್ರರತ್ತ ತಿರುಗಿತು ॥

ಪ್ರೀತಿ ಎಂದರೇನೆಂದು ಭೂಮಿಗೆ ಕೇಳಿದೆ
ಅದು ಅನ್ನ–ಅಂಬಲಿ ನೀಡಿತು ॥

ಪ್ರೀತಿ ಎಂದರೇನೆಂದು ಸೂರ್ಯನಿಗೆ ಕೇಳಿದೆ
ಅವನು ಹಗಲಿನಾಗಸ ಬೆಳಗಿದನು ॥

ಪ್ರೀತಿ ಎಂದರೇನೆಂದು ಚಂದ್ರನಿಗೆ ಕೇಳಿದೆ
ಅವನು ಇರುಳ ನಕ್ಷತ್ರಗಳತ್ತ ಇಣುಕಿದನು ॥

ಪ್ರೀತಿ ಎಂದರೇನೆಂದು ಮಧುವನಗಿತ್ತಿಗೆ ಕೇಳಿದೆ
ಅವಳು ಮೈಯೆಲ್ಲಾ ನಾಚಿಕೊಂಡಳು ॥

ಪ್ರೀತಿ ಎಂದರೇನೆಂದು ಹೆತ್ತವ್ವಳಿಗೆ ಕೇಳಿದೆ
ಅವಳು ತನ್ನೆದೆಗೆ ಹಸುಗೂಸು ಬಾಚಿಕೊಂಡಳು ॥

ಪ್ರೀತಿ ಎಂದರೇನೆಂದು ಬಿರುಗಾಳಿಗೆ ಕೇಳಿದೆ
ಅದು ಮರ–ಗಿಡಗಳನು ನೇವರಿಸಿತು ॥

ಪ್ರೀತಿ ಎಂದರೇನೆಂದು ಮೋಡಕ್ಕೆ ಕೇಳಿದೆ
ಅದು ನೆಲಕ್ಕೆ ಸುರಿದು ಮುತ್ತಿಕ್ಕಿತು ॥

ಪ್ರೀತಿ ಎಂದರೇನೆಂದು ನನ್ನವಳಿಗೆ ಕೇಳಿದೆ
ಅವಳು ಬರಿದಾದ ನನ್ನೆದೆಯಲ್ಲಿ ಮಿನುಗಿದಳು ॥

ಪ್ರೀತಿ ಎಂದರೇನೆಂದು ಹೂ–ಮೊಗ್ಗಿಗೆ ಕೇಳಿದೆ
ಅದು ತಂಗಾಳಿ ತಬ್ಬಿಕೊಂಡು ಮೆರೆಯಿತು ॥

**ಸಿ. ಎಸ್. ಭೀಮರಾಯ**
ಆಂಗ್ಲ ಉಪನ್ಯಾಸಕರು, ಕೇರಾಫ್. ಶ್ರೀ ಸಿದ್ದಣ್ಣ ಬಿ. ಪೂಜಾರಿ
'ಅಪೂರ್ವ ನಿವಾಸ' ಯಮುನಾ ನಗರ, ಕುಸನೂರ ರಸ್ತೆ
ಕಲಬುರಗಿ – ೫೮೫ ೧೦೫

*ಮಾತಿಗೆ ತಡಕಾಡಿದರೂ ಸಿಗದ ಪದಗಳು*
*ಹನಿಬಿದ್ದ ಕೊಳದಲ್ಲಿ ಉಂಗುರುಂಗುರ ಅಲೆಗಳು*
*ಆಕಾರ ಪಡೆಯುತ್ತಲೇ ಅಳಿಯುವ ಭಾವಗಳು*
*ಭಾವಕ್ಕೆ ಸಿಗದ ಭಾಷೆ* (ಪು. ೧೦೧)
*ಜಲಪಾತಕ್ಕೆ ಬಿದ್ದ ಮಾತು*
*ಮತ್ತೆ ಮೇಲೇಳುವ ಸಾಹಸ ಸಂಘರ್ಷ*
*ಜಲಪಾತದ ವೇಗೋತ್ಕರ್ಷಕ್ಕೆ ಹುಟ್ಟಿದ ವಿದ್ಯುತ್ತು*
*ತಂತಿ ಮುಟ್ಟಿದ ತಂತು. ನಡುಗಿದ ನುಡಿಗುಂಪು* (ಪು. ೧೦೪)

ಶಬರಿಯ ದುಃಖ, ಕಾತರ, ಕಾಯುವಿಕೆ, ಪ್ರೇಮ ಎಲ್ಲವೂ ತೀವ್ರ... ಆಳ... ಸೂರ್ಯನೋ ಅಲೆಮಾರಿ. ಅವನಿಗೆ ನೂರೆಂಟು ಹಳವಂಡಗಳು. ಒಳಗೆ ಕ್ರಾಂತಿಯ ಕಿಡಿ, ಹೋರಾಟದ ಕಿಚ್ಚು. ತಾನು ಹೀಗೆ ಪ್ರೇಮದಲ್ಲಿ ಬೀಳಬಹುದೆ? ಎಂಬ ಸಂದೇಹ. ಆದರೆ, ಮರುಕ್ಷಣವೇ ಹೋರಾಟಕ್ಕೂ ಮೂಲವಾದುದು ಪ್ರೀತಿಯೇ ಅಲ್ಲವೇ ಎಂಬ ಅರಿವು ಆವರಿಸುತ್ತ ಹೋಗುತ್ತದೆ. ಕ್ರಾಂತಿ ಮತ್ತು ಪ್ರೀತಿ ವಿರುದ್ಧವಲ್ಲ ಎಂದು ಅನಿಸುವಲ್ಲಿಯೇ ಸಿದ್ಧಾಂತಕ್ಕೊಂದು ಚಲನಶೀಲತೆ ಪ್ರಾಪ್ತವಾಗುತ್ತದೆ. ಒಂದು ಕಣ್ಣಲ್ಲಿ ಪಿಸ್ತೂಲು, ಇನ್ನೊಂದು ಕಣ್ಣಲ್ಲಿ ಪ್ರೀತಿ ಹೊತ್ತು ಮುಂದೆ ಸಾಗುವ ಸೂರ್ಯನ ತಳಮಳಗಳು ಅನಂತವಾದವು. ಕಾದಂಬರಿಯಲ್ಲಿ ಎಲ್ಲಿಯೂ ಅವನು ನಕ್ಸಲ್ ಎಂಬ ಉಲ್ಲೇಖ ಬರದಿದ್ದರೂ ಅವನ ನಿಗೂಢ ಚಲನೆಗಳು ಅದನ್ನು ದೃಢಪಡಿಸುತ್ತವೆ. ಸದಾ ಸಾವಿನ ನೆರಳಲ್ಲಿಯೇ ಬದುಕುತ್ತಿರುವ ಅವನನ್ನು ಪ್ರೇಮ ಜೀವನ ಪ್ರೀತಿಯೊಳಗೆ ಹಿಡಿದು ನಿಲ್ಲಿಸುತ್ತದೆ. ಆದರೂ ನಿಂತಲ್ಲಿ ನಿಲ್ಲಲಾರದೆ ಚಡಪಡಿಸುವ ಸೂರ್ಯನೊಳಗೊಂದು ಅಂತರ್ಮುಖತೆಯಿದೆ. ಬಯಲೊಳಗೆ ಆಲಯವಿರುವಂತೆ! ಅಲ್ಲಿ ಅವನ ಸಿದ್ಧಾಂತಗಳು ಆತ್ಮಸಾಕ್ಷಿಯೊಂದಿಗೆ ಮುಖಾಮುಖಿಯಾಗುತ್ತ ಹೊಸದಾಗಿ ಹುಟ್ಟುತ್ತವೆ.

ಹೋರಾಟಗಾರನೊಬ್ಬನ ಒಳಹೋರಾಟಗಳನ್ನು ಅನಾವರಣಗೊಳಿಸುವ ಕಾದಂಬರಿ ವಿಶಿಷ್ಟವೆನಿಸುತ್ತದೆ. ಹೋರಾಟವೆಂಬುದು ಗದ್ದಲವಲ್ಲ. ಅಲ್ಲಿಯೂ ಮೌನವಿದೆ. ಮೌನದಲ್ಲಿ ಕಾವುಗೊಳ್ಳುವ ಭಾವಗಳಿವೆ. ಏಕಾಂತದಲ್ಲಿ ಸ್ಪಷ್ಟಗೊಳ್ಳುವ ನೋಟಗಳಿವೆ ಎಂಬುದನ್ನು ಅದು ಸೂಚಿಸುತ್ತದೆ. ನಮ್ಮೊಳಗಿನ ಅಂತರ್ ನಿರೀಕ್ಷಣೆ ಸಾಧ್ಯವಾಗದಿದ್ದರೆ, ಮಿಡಿತಗಳಿಗೆ ಕಿವಿಯಾಗದಿದ್ದರೆ ಸಿದ್ಧಾಂತ, ಹೋರಾಟ ಎಲ್ಲವೂ ಜಡವಾಗುತ್ತವೆ ಎಂಬ ಅರಿವು ಸೂರ್ಯನದಾಗುತ್ತದೆ. ಇಂಥ ಅರಿವಿಗೆ 'ಶಬರಿ' ಒಂದು ರೂಪಕ. ಅವಳು ರಾಮನಿಗಾಗಿ ಕಾಯುತ್ತಲೇ ತನ್ನನ್ನು ತಾನು ಕಂಡುಕೊಂಡಂತೆ, ತನ್ನನ್ನು ತಾನು ಕಾಣುವುದೇ ಒಂದು ಕ್ರಾಂತಿ. ಅದಕ್ಕೂ ಹೋರಾಟ ಬೇಕು. ಸಿದ್ಧ ಮಾನದಂಡಗಳನ್ನು, ಸಿದ್ಧ ನೋಟದ ಕ್ರಮವನ್ನೂ ಪಲ್ಲಟಿಸದ ಹೊರತೂ ಒಳಗಿನೊಳಗು ಕಾಣಲಾರದು. "ಹೋರಾಟ ಆರಂಭವಾಗಬೇಕಾದದ್ದು ಇಲ್ಲಿ– ಈ ಪಂಚೇಂದ್ರಿಯಗಳ ಪ್ರತೀಕದಲ್ಲಿ. ಪೊರೆ ಕಟ್ಟಿದ ಪಂಚೇಂದ್ರಿಯಗಳು, ಹುಟ್ಟಿದ ಗಳಿಗೆಯಿಂದಲೇ ಕಟ್ಟುವ ಪೊರೆ. ಹೀಗೆ ನೋಡಬೇಕು, ಹೀಗೆ ನುಡಿಯಬೇಕು, ಹೀಗೆ ಕೇಳಬೇಕು, ಇದು ಸುವಾಸನೆ, ಅದು ದುರ್ವಾಸನೆ, ಈತ ಸ್ಪರ್ಶಯೋಗ್ಯ, ಆತ ಅಲ್ಲ – ಹೀಗೆ ಸಿದ್ಧ ಮಾದರಿಗಳ ಪೊರೆ. ಪಂಚೇಂದ್ರಿಯಗಳ ಪೊರೆ ಕಳಚಿಕೊಂಡು ಸ್ವತಂತ್ರವಾಗುವುದೇ ಪ್ರಥಮ ಹೋರಾಟ. ವಿವಿಧ ಹೋರಾಟಗಳ ಮತ್ತು ವಿವೇಕಗಳ ಮೂಲಕ ಪೊರೆ ಕಳಚಿಕೊಳ್ಳುವ ಕ್ರಿಯೆ–ನಿರಂತರ ಪ್ರತಿಕ್ರಿಯೆ." (ಪು. ೧೩೪) ಪೂರ್ವಗ್ರಹಗಳ ಪೊರೆ ಕಳಚದೇ ನಿಜದ ನೆಲೆ ಕಾಣದು ಎಂಬ ಅರಿವು ಬಾಹ್ಯ ಹೋರಾಟಕ್ಕೆ ಎಷ್ಟು ಅಗತ್ಯವೋ, ಅಂತರಂಗದ ಕಾಣ್ಕೆಗೂ ಅಷ್ಟೇ ಅಗತ್ಯ. ಈ ಒಳಗು–ಹೊರಗಿನ ದ್ವಂದ್ವವನ್ನು ಮೀರಿದಾಗ 'ಸಹಜದ' ಸಿದ್ಧಿ ಸಾಧ್ಯ. ಅಂಥ ಸಿದ್ಧಿಗಾಗಿ ಕಾಯಬೇಕು, ತಾಳಬೇಕು, ತಳಮಳಿಸಬೇಕು... ಕುದಿಕುದಿದು ಹದಗೊಳ್ಳಬೇಕು. ಅದೇ 'ಶಬರಿ'ಯ ಸ್ಥಿತಿ. ಆ ಅರ್ಥದಲ್ಲಿ ನಾವೆಲ್ಲ 'ಶಬರಿ'ಯಾಗಬೇಕು ಎನ್ನುತ್ತದೆ ಕಾದಂಬರಿ. "ಕಣ್ಣು ಕಿವಿಗಳನ್ನು ಹಿಂದೆಹಾಕಿ ನಾಲಗೆ ಅತಿಯಾದರೆ ಸೂಕ್ಷ್ಮತೆ ಹೇಗೆ ಸಾಧ್ಯ?" ಎಂದು ಸೂರ್ಯ ಕೇಳಿಕೊಳ್ಳುವುದು ಇಂದು ನಾವೆಲ್ಲರೂ ನಮಗೆ ಕೇಳಿಕೊಳ್ಳಬೇಕಾದ ಸೂಕ್ಷ್ಮ ಪ್ರಶ್ನೆಯೂ ಹೌದು.

ವೈಯಕ್ತಿಕವಾಗಿ ಅಧ್ಯಾತ್ಮದ ಕುರಿತು ಕೊಂಚ ಅನುಮಾನವಿರಿಸಿಕೊಂಡಿರುವ ಬರಗೂರು ರಾಮಚಂದ್ರಪ್ಪವರು ಕ್ರಾಂತಿಕಾರಿಯ ಒಳಗಿಳಿಯುತ್ತ ಇಳಿಯುತ್ತ ಆಧ್ಯಾತ್ಮಿಕ ಸೆಲೆಯನ್ನೇ ಸ್ಪರ್ಶಿಸುತ್ತಾರೆ. ಪೂರ್ವಗ್ರಹಗಳ ಪೊರೆ ಕಳಚಿ ನಿಚ್ಚಳವಾಗಿ ಕಾಣುವುದೇ ಅಧ್ಯಾತ್ಮದ ಸ್ಥಿತಿಯೇ ಹೊರತೂ ಅದು ಮತದ ಮಿತಿಯೊಳಗಿರುವುದಿಲ್ಲ. ಅಧ್ಯಾತ್ಮವೂ ಆಂತರಿಕ ಕ್ರಾಂತಿಯೇ ಹೌದು. ಆದರೆ, ಸೂರ್ಯನ ಈ ಹುಡುಕಾಟ ಆತ್ಮೋನ್ನತಿಗಲ್ಲ... ಅದು ಸಮುದಾಯದ ಉನ್ನತಿಗಾಗಿ ಎಂಬುದು ವಿಶೇಷ. ಸಮುದಾಯದ ನಾಯಕನಾಗಿ ರೂಪುಗೊಂಡ ಸೂರ್ಯ, ತನ್ನ ಸಾಚಾತನವನ್ನೇ ಪರೀಕ್ಷಿಸಿಕೊಳ್ಳುವುದು ಅವನ ನೈತಿಕ ಅರಿವಿಗೆ ಸಾಕ್ಷಿ. ಉತ್ತಮ ನಾಯಕನಾಗಲು ಕ್ಷಣಕ್ಷಣಕ್ಕೂ ಕಣ್ಣಾಗಿ, ಕಿವಿಯಾಗಿ, ಕಡೆಗೆ ಕರುಳಾಗಿ ಕ್ರಿಯಾಶೀಲವಾಗಿರುವುದು ಮುಖ್ಯ ಎಂಬುದು ಅವನು ಅಂದುಕೊಳ್ಳುವುದು ಹೊಸ ವ್ಯಾಖ್ಯಾನ. ನಾಯಕನೊಳಗೆ ತಾಯ್ತನದ ಕರುಣೆ, ತಾಳಿಕೆ, ಜೀವಪರತೆ ಇರಬೇಕೆಂಬುದು ಅಧ್ಯಾತ್ಮದ ಮಾದರಿ. ಇದನ್ನು ರಾಜಕಾರಣದ ಮಾದರಿಯಾಗಿ ತೆಗೆದುಕೊಂಡರೆ ಬದುಕಿನ ದಿಕ್ಕೇ ಬದಲಾಗಬಹುದು.

ಶಬರಿಯ ಹೋರಾಟದಲ್ಲಿ ಇಂಥದೊಂದು ಮಾದರಿ ಇನ್ನೂ ನಿಚ್ಚಳವಾಗುತ್ತದೆ. ಸೂರ್ಯ ಬಿತ್ತಿದ ಕನಸುಗಳನ್ನು ಗರ್ಭೀಕರಿಸಿಕೊಂಡು ಕಣಕ್ಕಿಳಿಯುವ ಶಬರಿ ತುಂಡು ಭೂಮಿಗಾಗಿ ನಡೆಸುವ ಹೋರಾಟ ಇದೇ ಬಗೆಯದು. ಭೂಮಿ ಅವಳಿಗೆ ಅಧಿಕಾರದ ಪ್ರಶ್ನೆಯಲ್ಲ. ಅದು ಕರುಳಿನ ಸಂಬಂಧದ ನೆಲೆ. ತನ್ನ ಮೂಕ ಸಂಕಟಗಳನ್ನು ನೀಗಿಸಿಕೊಳ್ಳಲು ಮರಗಳನ್ನು ತಬ್ಬಿ ಅಳುವ ಅವಳು ಮರಮರದಲ್ಲೂ ಜೀವ ಕಾಣುವ ಸಂವೇದನಾಶೀಲತೆಯುಳ್ಳವಳು. "ಶಬರಿಯು ಮರಮರದಲ್ಲೂ ಜೀವ ಕಂಡಳು. ಮುಟ್ಟಿದಳು. ಮುಟ್ಟಿದ್ದೇ ಮಾತು. ಮಾತೆಲ್ಲ ಮೌನ" (ಪು.೨೪೩). ಒಡಲಲ್ಲಿ ಮಿಸುಕುವ ಜೀವವನ್ನು ಹೊತ್ತ ಶಬರಿ ನಿಜಕ್ಕೂ ಪ್ರಕೃತಿಯ ಭಾಗವೇ ಆಗುವ ಪರಿಯಿದು. ಮಾತನ್ನೂ ಮೀರಿದ ಭಾವವನ್ನು ಒಳಗೊಳ್ಳುವ ಬಗೆಯಿದು. ಮದುವೆ, ಸಂಸಾರಕ್ಕಿಂತಲೂ ತನ್ನ ಹೋರಾಟ, ಜವಾಬ್ದಾರಿಗಳು ಮುಖ್ಯವೆಂದು ಹೊರಟ ಸೂರ್ಯನನ್ನು ಕಾಯುತ್ತ ಕಾಯುತ್ತ ಶಬರಿ ಗಟ್ಟಿ ಉಕ್ಕಾಗುತ್ತಾಳೆ. ಒಂಟಿಯಾಗಿ ಬದುಕನ್ನು ಎದುರಿಸುವ ನಿರ್ಭಯತೆ ಹಾಗೂ ವಿರಹದ ಉತ್ಕಟತೆಯನ್ನು ಎದೆಯಲ್ಲೇ ಉರಿಸುತ್ತ ಬೆಳಕಾಗುವ ನಿಸ್ಪೃಹತೆಯಲ್ಲಿ ಶಬರಿ ಅಕ್ಕಮಹಾದೇವಿಯನ್ನು ನೆನಪಿಸುತ್ತಾಳೆ. ಆದ್ದರಿಂದಲೇ ಕಾದಂಬರಿಯ ಕಡೆಯ ಭಾಗದಲ್ಲಿ ಅಕ್ಕನ ವಚನಗಳು ಧ್ವನಿಪೂರ್ಣವಾಗಿ ಬಳಕೆಯಾಗಿವೆ.

ಕೊನೆಯಲ್ಲಿ ಸೂರ್ಯ ತನ್ನ ಮೇಲಿರುವ ಸುಳ್ಳು ಕೇಸಿನಿಂದಾಗಿ ಜೈಲು ಸೇರುತ್ತಾನೆ. ಭೂಮಾಲಿಕರ, ಬಂಡವಾಳಶಾಹಿಗಳ ವ್ಯೂಹಕ್ಕೆ ಬಲಿಯಾಗುತ್ತಾನೆ. ಆಗಲೂ ಎದೆಗುಂದದ ಶಬರಿ "ಈ ಭೂಮಿ ನಮ್ಮದು" ಎಂಬ ದಿಟ್ಟ ಹೋರಾಟಕ್ಕೆ ನಾಂದಿಯಾಗುತ್ತಾಳೆ. ತಂದೆಯ ಸಾವಿನಿಂದ ಅನಾಥಪ್ರಜ್ಞೆಯಲ್ಲಿ ಬೇಯುವ ಅವಳಿಗೆ ಸೂರ್ಯನ ಸಾವು ಸಿಡಿಲಿನಂತೆ ಬಂದು ಅಪ್ಪಳಿಸುತ್ತದೆ. 'ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ!...' ಎಂದು ಅಕ್ಕ ಚೆನ್ನಮಲ್ಲಿಕಾರ್ಜುನನಿಗಾಗಿ ಹಂಬಲಿಸುವಂತೆ ಸೂರ್ಯನಿಗಾಗಿ ಹಂಬಲಿಸುವ ಶಬರಿ ಸೂರ್ಯನ ಸಾವನ್ನು ಬದುಕಿನ ಕೊನೆ ಎಂದು ಭಾವಿಸುವುದಿಲ್ಲ. ಅವಳೊಂದು ಹರಿವ ಜೀವನದಿ. ಅವಳ ಹರಿವಿನ ಪಾತ್ರದಲ್ಲಿ ಸೂರ್ಯನೂ ಒಂದು ನೆಪ, ಪ್ರೇರಣೆ, ಒಲವಾಗಿ ಬಂದ ಬಲ.

*ಕಲಿಸಿದ ಅಕ್ಷರಗಳಲ್ಲಿ ಸೂರ್ಯನ ತುಡಿತ*
*ಬರೆದ ಸಾಲುಗಳೆಲ್ಲ ಭೂಮಿಗೀತ*
*'ಈ ಭೂಮಿ ನಮ್ಮದು'......!*

*ಅವಳ ಹಾಡು ನಿಲ್ಲದೇ ಮುಂದುವರೆಯುತ್ತದೆ.*
*ಸಮಾಧಿಯ ಮೇಲೆ ಸೂರ್ಯನ ಚೀಲ!*
*ಚರಿತ್ರೆಯ ಹಂಬಲ!*
*ಶಬರಿ ಹತ್ತಿರ ಬಂದಳು; ನಿರ್ಧಾರದಿಂದ ನೋಡಿದಳು*
*ಬಗಲು ಚೀಲವನ್ನು ಕೈಗೆತ್ತಿಕೊಂಡಳು.......* (ಪು.೨೬೮)

ಸೂರ್ಯನ ಜವಾಬ್ದಾರಿಯನ್ನು ತನ್ನ ಹೆಗಲಿಗೇರಿಸಿಕೊಂಡು ನಡೆಯುವ ಶಬರಿಯೇ ಒಂದು ಸಿದ್ಧಾಂತ. ಅದೊಂದು ಸೃಜನಶೀಲ ಸಿದ್ಧಾಂತ. ಅವಳ ಮೌನದಲ್ಲಿ ಸ್ಪಷ್ಟತೆಯಿದೆ. ಅವಳ ನಡೆಯಲ್ಲಿ ದಿಟ್ಟತನವಿದೆ. ತಾಯ್ತನದ ಕರುಣೆಯಲ್ಲಿ, ಅದಮ್ಯ ಪ್ರೀತಿಯಲ್ಲಿ ಹೋರಾಟವನ್ನು ಮುನ್ನಡೆಸುವ ಶಬರಿ ಈ ಕಾಲಕ್ಕೆ ಬೇಕಾದ ಸಾಮಾಜಿಕ ಅಧ್ಯಾತ್ಮದ ಮಾದರಿ.

**ಡಾ|| ಗೀತಾ ವಸಂತ**
ಸಹಾಯಕ ಪ್ರಾಧ್ಯಾಪಕರು, ಮುಖ್ಯಸ್ಥರು, ಕನ್ನಡ ವಿಭಾಗ, ವಿಶ್ವವಿದ್ಯಾನಿಲಯ ವಿಜ್ಞಾನ ಕಾಲೇಜು, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು – ೫೭೨ ೧೦೩

ಎಸ್. ಶಂಕರ

ಪ್ರತಿ ಜೀವಿಯಲ್ಲಿರುವ ಚೈತನ್ಯ ಮತ್ತು ಉಸಿರಾಟದಷ್ಟೇ ಸಹಜವಾದ ಕ್ರಿಯೆ ಗಂಡು–ಹೆಣ್ಣುಗಳ ಸಮಾಗಮ ಮತ್ತು ಸಂತಾನ ವೃದ್ಧಿ ಮಾಡುವಷ್ಟು ವಯಸ್ಸಾದ – ಗಂಡು ಹೆಣ್ಣುಗಳ ದೈಹಿಕ ಸಮಾಗಮದಲ್ಲಿ ಹೆಣ್ಣಿನ ಗರ್ಭಾಶಯದಲ್ಲಿ ಗಂಡು ವೀರ್‍ಯಾಣುಗಳನ್ನು ಚೆಲ್ಲಿದಾಗ ವೀರ್‍ಯಾಣುಗಳು ಅಂಡಾಣುವನ್ನು ಮುತ್ತಿಗೆ ಹಾಕಿ, ಒಂದು ವೀರ್‍ಯಾಣು ಅಂಡಾಣುವಿನ ಹೊರ ಕವಚವನ್ನು ಭೇದಿಸಿ ಒಳ ನುಗ್ಗಿ ಮಿಲನಗೊಂಡಾಗ "ದೇಹವಾಗಿ ವ್ಯಕ್ತಿಯ ಜೀವಾಂಕುರವಾಗಿ ಗರ್ಭಧಾರಣೆಯಾಗುತ್ತದೆ, ಆ ಒಂದು ಕೋಶದಿಂದ ವ್ಯಕ್ತಿ ದೇಹವಾಗಿ ಹುಟ್ಟುವ ಪ್ರಕ್ರಿಯೆ ಆರಂಭವಾಗುತ್ತದೆ." ಹೆಣ್ಣಿನ ಗರ್ಭಾಶಯದಲ್ಲಿ ತಿಂಗಳಿಗೆ ಒಂದು ಮಾತ್ರ ಪಕ್ವವಾಗುವ ದೇಹದ ಅತಿ ದೊಡ್ಡ ಕೋಶವಾದ ಅಂಡಾಣುವಿನಲ್ಲಿ ಒಂದೇ ಬಗೆಯ ಎರಡು ವರ್ಣತಂತುಗಳಾದ "X. X" ಇರುತ್ತದೆ. ಗಂಡಿನ ವೃಷಣದಲ್ಲಿ ದೇಹದ ಅತಿ ಚಿಕ್ಕ ಕೋಶವಾದ ವೀರ್‍ಯಾಣುಗಳು ದಿನಾಲು ಲಕ್ಷಾಂತರ ಉತ್ಪತ್ತಿಯಾಗಿ ವೀರ್ಯ ಚೀಲದಲ್ಲಿ ಶೇಖರಣೆಯಾಗುತ್ತಿದ್ದೂ ಅವುಗಳಲ್ಲಿ ಎರಡು ವಿಧದ ವರ್ಣತಂತುಗಳು ಇರುತ್ತವೆ. ಒಂದು "X." ಮತ್ತೊಂದು "Y." ಅಂಡಾಣುವಿನ ಹೊರ ಕವಚವನ್ನು ಭೇದಿಸಿ "X" ವರ್ಣತಂತು ಇರುವ ವೀರ್‍ಯಾಣು ಒಳ ನುಗ್ಗಿದರೆ ಹುಟ್ಟುವ ವ್ಯಕ್ತಿ "ಹೆಣ್ಣು." "Y" ವರ್ಣತಂತು ಇರುವ ವೀರ್‍ಯಾಣು ಒಳನುಗ್ಗಿದರೆ ಹುಟ್ಟುವ ವ್ಯಕ್ತಿ "ಗಂಡು." ವ್ಯಕ್ತಿ ಗಂಡೋ ಹೆಣ್ಣೋ ಎಂಬ ನಿರ್ಧಾರ ಗಂಡಿನ ವೀರ್‍ಯಾಣುವಿನ "X. Y" ವರ್ಣತಂತುಗಳಿಂದ ಶೇಕಡ ೧೦೦ರಷ್ಟು ಆಗುತ್ತದೆ.

ಒಂದು ಜೀವಾಂಕುರ ಕೋಶ ಸೃಷ್ಟಿಸಲು ಹೆಣ್ಣಿನ ಅಂಡಾಶಯದಲ್ಲಿ ಐದು ಲಕ್ಷ ಅಪಕ್ವ ಅಂಡಾಣುಗಳಿರುವುದು, ಒಮ್ಮೆ ಸ್ಖಲನಗೊಂಡ ಗಂಡಿನ ವೀರ್ಯದಲ್ಲಿ ೩೦ ಕೋಟಿಗೂ ಹೆಚ್ಚು ವೀರ್‍ಯಾಣುಗಳಿರುವುದು ಜೀವನ ಸೃಷ್ಟಿಗೆ ಪ್ರಕೃತಿ ತೋರುವ ಕಾತುರತೆ ಅಥವಾ ಅಚ್ಚರಿ ತಂದರೆ, ಜೀವಾಂಕುರವಾದ ಒಂದು ಕೋಶ ಬಹುಕೋಶಗಳಾಗಿ, ಬಹುಕೋಶಗಳು ಅಂಗಾಂಗಗಳಾಗಿ, ಅಂಗಾಂಗಗಳು ಕಾರ್ಯ ಚಟುವಟಿಕೆ ನಡೆಸುವ "ಅದ್ಭುತತೆ"! ಅನುವಂಶೀಯ ಬೆಳವಣಿಗೆಯ ಸಹಜ ನಿಯಮ, ಅದರಂತೆ ಜೀವಾಂಕುರವಾದ ಒಂದು ಕೋಶ ಎರಡಾಗಿ, ಎರಡು ನಾಲ್ಕಾಗಿ ಹೀಗೆಯೇ ಮತ್ತೆ ಮತ್ತೆ ವಿಭಜನೆ ಹೊಂದುತ್ತ ಕೋಟ್ಯಂತರ ಕೋಶಗಳ ರಾಶಿಯ ದುಂಡಾಕಾರದ ಉಂಡೆಯಂತಾಗಿ, ಈ ಉಂಡೆಯ ಹೊರ ಕೋಶಗಳು ತಾಯಿ ಮಾಸುವಾಗಿ ಬದಲಾದರೆ, ಒಳಗಿನದು ಭ್ರೂಣವಾಗಿ ಬೆಳವಣಿಗೆ ಹೊಂದುತ್ತದೆ. ಭ್ರೂಣ ಶಿಶುವಾಗಿ ಬೆಳೆಯುವಾಗ ತಾಯಿ ಮಾಸು ತಾಯಿಯಿಂದ ಬರುವ ಪೋಷಕಾಂಶಗಳನ್ನು ಶಿಶುವಿಗೆ ತಲುಪಿಸಿ, ಶಿಶುವಿನಿಂದ ಬರುವ ತ್ಯಾಜ್ಯವನ್ನು ತಾಯಿಯ ರಕ್ತದ ಮೂಲಕ ಹೊರಹಾಕುವ ಕೆಲಸ ಮಾಡುತ್ತದೆ.

ಹೊರಗಿನ ವಾತಾವರಣದೊಂದಿಗೆ ಪ್ರತಿಕ್ರಿಯಿಸಿ ಮಾಹಿತಿಯನ್ನು ನೀಡುವ ಪಂಚೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಒಳ ಅಂಗಾಂಗಗಳಾದ ಹೃದಯ, ರಕ್ತ ಪರಿಚಲನೆ, ಶ್ವಾಸಕೋಶ, ಜೀರ್ಣಾಂಗಗಳು, ಮೂತ್ರಪಿಂಡ... ಹೀಗೆ ಪೂರ್ಣ ಒಳ, ಹೊರ ಅಂಗಾಂಗಗಳ ಇಡೀ ದೇಹವನ್ನು ನಿಯಂತ್ರಿಸಿ ನಿರ್ದೇಶಿಸುವ ಮಿದುಳು ಮತ್ತು ನರಮಂಡಲದ ಬೆಳವಣಿಗೆ ಮೂರು ವಾರದ ಭ್ರೂಣದಲ್ಲಿ ಆರಂಭವಾಗಿರುತ್ತದೆ. ೮ ವಾರದ ಮಾನವ ಆಕೃತಿಯ ಭ್ರೂಣದ ಒಳ ಹೊರ ಅಂಗಾಂಗಗಳು ಪೂರ್ಣ ವಿಕಾಸ ಹೊಂದಿ, ಮುಂದಿನ ವಾರಗಳಲ್ಲಿ ಸಹಜ ಅವಶ್ಯಕತೆಗೆ ತಕ್ಕಂತೆ ಹಂತ ಹಂತವಾಗಿ ಗಾತ್ರದಲ್ಲಿ ದೊಡ್ಡದಾಗುತ್ತ ಬೆಳವಣಿಗೆ ಹೊಂದುತ್ತದೆ. ತಲೆ ಮೊದಲಾದ ಅಂಗಾಂಗಗಳು ನಿಗದಿತ ಸ್ಥಳದಲ್ಲಿ ನೆಲೆಸಿ ಕೈಕಾಲು ಬೆರಳುಗಳು ಪ್ರತ್ಯೇಕಗೊಂಡು ಶಕ್ತಿಯುತವಾದ ೧೬ನೇ ವಾರದ ಭ್ರೂಣ ತಾಯಿಯ ಗರ್ಭದಲ್ಲಿ ಕೈಕಾಲುಗಳನ್ನು ಅಲುಗಾಡಿಸುತ್ತಿರುತ್ತದೆ.

ಮಾನವ ವ್ಯಕ್ತಿಯ ಶಾರೀರ ವಿಧವಿಧವಾಗಿ ಜೋಡಿಸಿದ ಅವಶ್ಯ ಅಂಗಾಂಗಗಳ ಸಂಕೀರ್ಣ ವ್ಯವಸ್ಥೆ, ಅಸ್ಥಿಪಂಜರ, ಸ್ನಾಯುಗಳು (ಮಾಂಸಖಂಡಗಳು) ಮಿದುಳು ಮತ್ತು ನರಮಂಡಲ, ಹೃದಯ ಮತ್ತು ರಕ್ತ ಪರಿಚಲನೆ ಸಂಚಲನ ವ್ಯವಸ್ಥೆ, ಶ್ವಾಸಕೋಶಗಳು, ಮೂತ್ರಪಿಂಡ, ಜೀರ್ಣಾಂಗಗಳು, ವಿಸರ್ಜನ ಅಂಗಾಂಗಗಳು, ಸಂತಾನೋತ್ಪತ್ತಿ ವ್ಯವಸ್ಥೆ ಹೀಗೆ ಈ ಎಲ್ಲ ವ್ಯವಸ್ಥೆಗಳು ಅವಶ್ಯಕತೆಗಳಿಗೆ ತಕ್ಕಂತೆ ಸಕ್ರಿಯವಾಗಿ, ವ್ಯವಸ್ಥಿತವಾಗಿ ಕೆಲಸ ಮಾಡುವಂತೆ ಭ್ರೂಣದಿಂದ ಬೆಳವಣಿಗೆ ಹೊಂದಿ ಶಿಶುವಾಗಿ ತಾಯಿ ಗರ್ಭದಿಂದ ಹೊರಬರಲು ೨೮೨ ದಿನಗಳು, ಅಂದರೆ ೯ ತಿಂಗಳು ಅನಂತರದ ೭ ದಿನಗಳು ಬೇಕಾಗುತ್ತದೆ.

ಹೆಣ್ಣಿನ ಗರ್ಭದಲ್ಲಿ ಅಂಡಾಣು ಫಲಿತವಾದಾಗಿನಿಂದ ಅದನ್ನು ಗರ್ಭದಲ್ಲಿ ಪೋಷಿಸಿ, ಬೆಳೆಸಿ ಹೊರಬಂದು ಜೀವಿಸಲು ಸಿದ್ಧಪಡಿಸುವ




# ವ್ಯಕ್ತಿ – ಜೈವಿಕ ನೋಟ

ವ್ಯಕ್ತಿಯ ಸಾವು ಆತನು ಹುಟ್ಟಿ ಬೆಳೆದು ಬದುಕು ನಡೆಸಿದ ಪರಿಸರ, ಅವನು ಸೇವಿಸಿದ ಆಹಾರ, ಜೀವನ ನಡೆಸಲು ಮಾಡಿದ ದುಡಿಮೆ, ಪ್ರಾಕೃತಿಕ ವೈಪರೀತ್ಯಗಳು. ಆಕಸ್ಮಿಕವಾಗಿ ಅಥವಾ ಗೊತ್ತಿಲ್ಲದಂತೆಯೇ ಅಥವಾ ಗೊತ್ತಿರುವಂತೆಯೇ ಆತನ ದೇಹದೊಳಗೆ ಸೇರುವ ಅನೇಕ ವಿಷ ಪದಾರ್ಥಗಳು (ಮದ್ಯ, ಮಾದಕವಸ್ತು) ಆತನಿಗೆ ಬರುವ ರೋಗರುಜಿನಗಳು ಮತ್ತು ಅದಕ್ಕೆ ದೊರೆತ ಚಿಕಿತ್ಸೆ, ಆತನು ಎದುರಿಸಿದ ಕಷ್ಟನಷ್ಟಗಳು, ನೋವು – ನಿರಾಸೆಗಳು, ಸುಖ – ದುಃಖಗಳು, ತೃಪ್ತಿ ಅತೃಪ್ತಿಗಳು ಎಲ್ಲವೂ ಒಂದು ಬಗೆಯಲ್ಲಿ ವ್ಯಕ್ತಿಯ ಆಯಸ್ಸನ್ನು ನಿರ್ಧರಿಸುತ್ತವೆ ಮತ್ತು ಆನುವಂಶಿಕವಾಗಿ ನಿಗದಿಯಾದ ಆಯಸ್ಸು, ಈ ಎಲ್ಲ ಅಂಶಗಳ ಪ್ರಭಾವದಿಂದ ಬದಲಾಗಬಹುದು, ಹೆಚ್ಚು ಕಾಲ ಬದುಕುವುದು ಎಂದರೆ ವೃದ್ಧಾಪ್ಯದಲ್ಲಿಯೇ, ವೃದ್ಧಾಪ್ಯದಿಂದ ಸಾವು ಬರುವುದಿಲ್ಲ, ಸಾವು ರೋಗರುಜಿನಗಳಿಂದ ಬರುತ್ತದೆ, ಎಲ್ಲರೂ ಹೆಚ್ಚು ಕಾಲ ಬದುಕಲು ಬಯಸುತ್ತಾರೆ, ಆದರೆ ವೃದ್ಧಾಪ್ಯವನ್ನು ಯಾರೂ ಬಯಸುವುದಿಲ್ಲ.

ಮತ್ತು ಸಹಜವಾಗಿ ಹೊರತರುವ ಕಾರ್ಯಕ್ಕೆ ಪ್ರಕೃತಿ ಹೆಣ್ಣಿನ ಇಡೀ ದೇಹವನ್ನು ಸಿದ್ಧಪಡಿಸುವ ಜೀವಸೃಷ್ಟಿ ಮತ್ತು ಅದರ ಬೆಳವಣಿಗೆಯ ಅನುವಂಶೀಯ ಸಹಜ ನಿಯಮಗಳನ್ನು ವರ್ಣಿಸಲು ಪದಗಳಿಲ್ಲ.

ಎಲ್ಲ ಜೀವಿಗಳಂತೆ ಮಾನವನಲ್ಲಿಯೂ ವೀರ್ಯಾಣುವಿನಿಂದ ಮಿಲನಗೊಂಡ ಅಂಡಾಣುವಿನಲ್ಲಿ ಎರಡು ರೀತಿಯಲ್ಲಿ ಕೋಶ ದ್ರವ್ಯಗಳು ಉಂಟಾಗುತ್ತವೆ. ಒಂದು, ದೇಹದ ಎಲ್ಲ ಚಟುವಟಿಕೆಗಳನ್ನು ನಡೆಸಲು ಬೇಕಾದ ಅಂಗಾಂಗಗಳಾಗಿ ಬೆಳವಣಿಗೆ ಹೊಂದುತ್ತದೆ. ಇನ್ನೊಂದು, ಅನುವಂಶೀಯ ಗುಣಗಳನ್ನು ಮುಂದಿನ ಪೀಳಿಗೆಗೆ ವರ್ಗಾವಣೆ ಮಾಡುವ ಜನನಾಂಗಗಳಾಗಿ ರೂಪುಗೊಳ್ಳುತ್ತದೆ. ಇವು ಪುರುಷರಲ್ಲಿ ವೀರ್ಯಾಣು ಮತ್ತು ಸ್ತ್ರೀಯರಲ್ಲಿ ಅಂಡಾಣುಗಳ ಉತ್ಪತ್ತಿಗೆ ಕಾರಣವಾಗಿ ಸಂತಾನ ವೃದ್ಧಿಮಾಡುವಷ್ಟು ವಯಸ್ಸಾದ ಗಂಡು ಹೆಣ್ಣಿನ ಮಿಲನದಲ್ಲಿ ಆಗುವ ಜೀವ ಸೃಷ್ಟಿದಲ್ಲಿ ಅನುವಂಶೀಯ ಲಕ್ಷಣಗಳನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯುತ್ತದೆ.

ನಾವು ಗಮನಿಸಿರುವಂತೆ ಕೈಕಾಲು ಮೂಳೆಗಳಿಗೆ ಪೆಟ್ಟುಬಿದ್ದ ವ್ಯಕ್ತಿ ಕೆಲಸ ಮಾಡಲು, ನಡೆದಾಡಲು ಕಷ್ಟಪಡುತ್ತಾನೆ... ಕೈಕಾಲು ಮೂಳೆಗಳು ಮುರಿದರಂತೂ ಮೂಳೆ ಕೂಡುವವರೆಗೆ ವ್ಯಕ್ತಿ ಹಾಸಿಗೆ ಹಿಡಿಯುತ್ತಾನೆ, ೨೦೬ ಮೂಳೆಗಳನ್ನೊಳಗೊಂಡ ಮಾನವ ಅಸ್ಥಿಪಂಜರ ವ್ಯಕ್ತಿಯ ದೇಹಕ್ಕೆ ಒಂದು ಆಕಾರ, ಆಧಾರ, ಎತ್ತರ, ಶಕ್ತಿಯನ್ನು ನೀಡುತ್ತದೆ. ತಲೆ ಬುರುಡೆಯು ಮಿದುಳು, ಕಣ್ಣಿನಂತಹ ಮೆತ್ತನೆಯ ಅಂಗಗಳನ್ನು ರಕ್ಷಿಸುತ್ತದೆ. ಉಂಗುರಗಳಂತೆ ಒಂದರಮೇಲೊಂದರಂತೆ ಪೋಣಿಸಿರುವ ಬೆನ್ನುಮೂಳೆಗಳು ಮಿದುಳಿನಿಂದ ಹೊರಟು ಅಂಗಾಂಗಗಳನ್ನು ತಲುಪುವ ಮಿದುಳು ಬಳ್ಳಿಗಳನ್ನು ತನ್ನ ನಾಳದಲ್ಲಿ ರಕ್ಷಿಸುತ್ತ ವ್ಯಕ್ತಿಗೆ ನೆಟ್ಟಗೆ ನಿಲ್ಲಲು ಸಹಕರಿಸುತ್ತದೆ. ಎದೆ ಮೂಳೆಗಳು ಹೃದಯ, ಶ್ವಾಸಕೋಶಗಳಿಗೆ ರಕ್ಷಣೆ ನೀಡುತ್ತವೆ. ಹೊಟ್ಟೆಯ ಭಾಗಕ್ಕೆ ಮೂಳೆಗಳ ರಕ್ಷಣೆ ಇಲ್ಲದಿದ್ದರೂ ಅದರ ತಳಭಾಗ ಬೋಗಣಿ ಆಕಾರದಲ್ಲಿದ್ದರೂ ಇಕ್ಕೆಲಗಳಲ್ಲಿ ಅಗಲ ಮೂಳೆಗಳ ಭಿತ್ತಿ ಇದೆ, ಸೊಂಟದ ಮೂಳೆಗಳು ಜನನಾಂಗಗಳಿಗೆ, ವಿಸರ್ಜನೆಗೆ ಸಂಬಂಧಪಟ್ಟ ಅಂಗಗಳನ್ನು ರಕ್ಷಿಸುತ್ತದೆ. ಸೊಂಟದ ಮೂಳೆಗಳು ಹೆಣ್ಣಿನ ಗರ್ಭಕೋಶಕ್ಕೆ ಆಶ್ರಯ ನೀಡುವುದರಿಂದ ಗಂಡಿನದಕ್ಕಿಂತ ಅಗಲ ಮತ್ತು ಆಳವಾಗಿರುತ್ತದೆ, ಮೂಳೆಗಳಿಗೆ ಮಾಂಸಖಂಡಗಳು (ಸ್ನಾಯುಗಳು) ಅಂಟಿಕೊಂಡು ಹಿಗ್ಗುವ ಮತ್ತು ಕುಗ್ಗುವ ಮೂಲಕ ನಡೆದಾಡಲು, ಕೆಲಸ ಮಾಡಲು ಸಹಾಯ ಮಾಡುತ್ತದೆ. ಮೂಳೆಗಳ ತಿರುಳಿನಲ್ಲಿರುವ ಖನಿಜ ಮತ್ತು ಲವಣದ ಅಂಶಗಳು ರಕ್ತಕಣಗಳ ಉತ್ಪಾದನೆ ಮಾಡುತ್ತದೆ. ಐವತ್ತು ಕೆ. ಜಿ. ತೂಕದ ವ್ಯಕ್ತಿಯ ದೇಹದ ಮೂಳೆಗಳು ಹತ್ತು ಕೆ.ಜಿ. ತೂಕ ಹೊಂದಿರುತ್ತವೆ. ಅಂದರೆ ಐದನೇ ಒಂದು ಭಾಗದ ತೂಕ ವ್ಯಕ್ತಿಗೆ ಮೂಳೆಗಳಿಂದ ಬರುತ್ತದೆ.

ಎಲ್ಲ ಜೀವಿಗಳು ತನ್ನಂತೆ ಇರುವ ಜೀವಿಗಳನ್ನು ಸೃಷ್ಟಿಸುವಂತೆಯೇ ಮನುಷ್ಯ ಕೂಡ ಹುಟ್ಟುತ್ತಾನೆ, ಮಗು ತಾಯಿಯ ಗರ್ಭದಲ್ಲಿರುವಾಗ ಮತ್ತು ಹುಟ್ಟಿದ ನಂತರ ಜೀವಶಾಸ್ತ್ರೀಯ ನಿಯಮದಂತೆ ಬೆಳವಣಿಗೆ ಹೊಂದುತ್ತದೆ, ತನ್ನ ಪೂರ್ವಿಕರಾದ ಅಜ್ಜ-ಅಜ್ಜಿ, ತಂದೆ-ತಾಯಿಯಲ್ಲಿರುವ ರೂಪ, ಬಣ್ಣ, ಆಕಾರ, ಆರೋಗ್ಯ ಮುಂತಾದವುಗಳನ್ನು ಆನುವಂಶಿಕವಾಗಿ ಪಡೆದು ಹುಟ್ಟಿ, ಬೆಳವಣಿಗೆ ಹೊಂದುತ್ತದೆ. ವ್ಯಕ್ತಿ ವಾಸಿಸುವ ಪರಿಸರ, ಬಳಸುವ ಆಹಾರ, ಜೀವನ ನಡೆಸಲು ಮಾಡುವ ದುಡಿಮೆ ಮುಂತಾದವು ವಂಶಪಾರಂಪರ್ಯವಾಗಿ ಬಂದ ಅನುವಂಶೀಯ ಲಕ್ಷಣದ ಅಂಶಕ್ಕೆ ಕೆಲವು ಹೊಸ ಲಕ್ಷಣಗಳನ್ನು ಸೇರಿಸುತ್ತವೆ. ಜೈವಿಕವಾಗಿ ಪೋಷಕರಿಂದ ಪಡೆದ ದೇಹ ಹುಟ್ಟು, ಬಾಲ್ಯ, ಯೌವನ, ಸಂಗಾತಿಯೊಂದಿಗೆ ಕೂಡಿ ಸಂತಾನಾಭಿವೃದ್ಧಿ, ಮಧ್ಯವಯಸ್ಸು, ವೃದ್ಧಾಪ್ಯ, ಸಾವು (ಹುಟ್ಟು, ಬೆಳವಣಿಗೆ, ಪುನರ್‌ಸೃಷ್ಟಿ, ಇಳವಣಿಗೆ, ಸಾವು) ಹೀಗೆ ವ್ಯಕ್ತಿಯ ಜೈವಿಕ ಜೀವನ ಬದಲಾವಣೆ ಹೊಂದುತ್ತಿರುತ್ತದೆ. ವ್ಯಕ್ತಿಯು ತಾಯಿಯ ಗರ್ಭದಲ್ಲಿ ಶಿಶುವಾಗಿ ಪರಿವರ್ತನೆಯಾಗಲು ಆರಂಭವಾದಾಗಿನಿಂದ ದೇಹದಲ್ಲಿ ಹುಟ್ಟುವ ಜೀವಕೋಶಗಳು ಹೆಚ್ಚಾಗುತ್ತಲೇ ಹೋಗುತ್ತಿರುತ್ತವೆ. ಸಾಯುವ ಜೀವಕೋಶಗಳು ಕಡಿಮೆ ಇರುತ್ತವೆ. ಯೌವ್ವನ ವ್ಯವಸ್ಥೆಯಲ್ಲಿ ದೇಹ ಸಂಪೂರ್ಣ ಸದೃಢವಾಗಿ ಸಕ್ರಿಯವಾಗಿದ್ದು, ಪುನರ್‌ಸೃಷ್ಟಿಗಾಗಿ ಸಂಗಾತಿಯೊಂದಿಗೆ ಕೂಡುತ್ತದೆ, ನಂತರ ಮಧ್ಯವಯಸ್ಸು ಆಗುತ್ತಿದ್ದಂತೆ ದೇಹದ ಬೆಳವಣಿಗೆ ನಿಲ್ಲುತ್ತಾ ಬರಲು ಆರಂಭವಾಗುತ್ತದೆ. ವ್ಯಕ್ತಿಗೆ ಮೂವತ್ತು ವರ್ಷದ ನಂತರ ದೇಹದ ಕ್ರಿಯೆಗಳ ಸಾಮರ್ಥ್ಯ ಪ್ರತಿ ವರ್ಷ ಶೇಕಡ ಕ್ರಮೇಣ ಕಡಿಮೆಯಾಗುತ್ತ ಬರುತ್ತದೆ. ಹಾಗಾಗಿ ದೇಹದಲ್ಲಿ ಹುಟ್ಟುವ ಜೀವಕೋಶಗಳು ನಿಧಾನವಾಗಿ ಕಡಿಮೆಯಾಗುತ್ತಾ ಬರುತ್ತವೆ. ಸಾಯುವ ಜೀವಕೋಶಗಳು ಹೆಚ್ಚಾಗುತ್ತಾ ವೃದ್ಧಾಪ್ಯ ಆವರಿಸುತ್ತದೆ, ದೇಹದ ಯಾವ ಜೀವಕೋಶಗಳ ಬೆಳವಣಿಗೆ ನಿಲ್ಲುತ್ತಾ ಬರುತ್ತದೋ, ಆ ಭಾಗ ನಷ್ಟವಾಗುತ್ತ ಹೋಗುತ್ತದೆ. ಉದಾಹರಣೆಗೆ, ಹಲ್ಲಿನ ಜೀವಕೋಶಗಳು ಬೆಳವಣಿಗೆ ನಿಲ್ಲಿಸಿದರೆ ಹಲ್ಲುಗಳು ಉದುರುತ್ತವೆ. ಚರ್ಮದ ಜೀವಕೋಶಗಳು ಬೆಳವಣಿಗೆ ನಿಲ್ಲಿಸಿದರೆ ಚರ್ಮ ಸುಕ್ಕು ಕಟ್ಟುತ್ತದೆ. "ದೇಹದ ಅಂಗಾಂಗಗಳು ನಿರಂತರವಾದ ಕೆಲಸದಿಂದಾಗಿ ಸವೆತ ಉಂಟಾಗಿ ಅಂಗಾಂಗಗಳ ಕ್ರಿಯೆಯು ನಿಧಾನಗೊಳ್ಳುವುದು ಮತ್ತು ನಿಂತು, ನಿಂತು ನಡೆಯುವ ಶಿಥಿಲತೆ ಉಂಟಾಗುತ್ತವೆ. ಒಂದು ಅಂಗದ ಶಿಥಿಲತೆ ಇನ್ನೊಂದು ಅಂಗದ ಮೇಲೆ ಪರಿಣಾಮ ಬೀರಿ ರೋಗರುಜಿನಗಳಿಗೆ ಕಾರಣವಾಗಿ ಅಂಗಾಂಗಗಳ ಕ್ರಿಯೆಯ ವೈಫಲ್ಯದಿಂದ ಸಾವು ಸಂಭವಿಸುತ್ತದೆ. ಸಾವು ಎಂದರೆ ದೈಹಿಕ ಕ್ರಿಯೆಗಳ ಸ್ಥಗಿತತೆ."

ವ್ಯಕ್ತಿಯ ಸಾವು ಆತನು ಹುಟ್ಟಿ ಬೆಳೆದು ಬದುಕು ನಡೆಸಿದ ಪರಿಸರ, ಅವನು ಸೇವಿಸಿದ ಆಹಾರ, ಜೀವನ ನಡೆಸಲು ಮಾಡಿದ ದುಡಿಮೆ, ಪ್ರಾಕೃತಿಕ ವೈಪರೀತ್ಯಗಳು. ಆಕಸ್ಮಿಕವಾಗಿ ಅಥವಾ ಗೊತ್ತಿಲ್ಲದಂತೆಯೇ ಅಥವಾ ಗೊತ್ತಿರುವಂತೆಯೇ ಆತನ ದೇಹದೊಳಗೆ ಸೇರುವ ಅನೇಕ ವಿಷ ಪದಾರ್ಥಗಳು (ಮದ್ಯ, ಮಾದಕವಸ್ತು) ಆತನಿಗೆ ಬರುವ ರೋಗರುಜಿನಗಳು ಮತ್ತು ಅದಕ್ಕೆ ದೊರೆತ ಚಿಕಿತ್ಸೆ, ಆತನು ಎದುರಿಸಿದ ಕಷ್ಟನಷ್ಟಗಳು, ನೋವು-ನಿರಾಸೆಗಳು, ಸುಖ-ದುಃಖಗಳು, ತೃಪ್ತಿ-ಅತೃಪ್ತಿಗಳು ಎಲ್ಲವೂ ಒಂದು ಬಗೆಯಲ್ಲಿ ವ್ಯಕ್ತಿಯ ಆಯಸ್ಸನ್ನು ನಿರ್ಧರಿಸುತ್ತವೆ ಮತ್ತು ಆನುವಂಶಿಕವಾಗಿ ನಿಗದಿಯಾದ ಆಯಸ್ಸು, ಈ ಎಲ್ಲ ಅಂಶಗಳ ಪ್ರಭಾವದಿಂದ ಬದಲಾಗಬಹುದು, ಹೆಚ್ಚು ಕಾಲ ಬದುಕುವುದು ಎಂದರೆ ವೃದ್ಧಾಪ್ಯದಲ್ಲಿಯೇ. ವೃದ್ಧಾಪ್ಯದಿಂದ. ಸಾವು ಬರುವುದಿಲ್ಲ, ಸಾವು ರೋಗರುಜಿನಗಳಿಂದ ಬರುತ್ತದೆ, ಎಲ್ಲರೂ ಹೆಚ್ಚು ಕಾಲ ಬದುಕಲು ಬಯಸುತ್ತಾರೆ, ಆದರೆ ವೃದ್ಧಾಪ್ಯವನ್ನು ಯಾರೂ ಬಯಸುವುದಿಲ್ಲ.

**ಎಸ್. ಶಂಕರ**
ನಂ. ೫೧, ೧೪ನೇ ಅಡ್ಡರಸ್ತೆ, ವೀವರ್ಸ್ ಕಾಲನಿ, ಸಾರಕ್ಕಿ ಗೇಟ್
ಜೆ. ಪಿ. ನಗರ ೧ನೇ ಹಂತ, ಬೆಂಗಳೂರು – ೫೬೦ ೦೭೮

# ಗಜಲ್

ನೀ ಬರುವಾಗ ಹುಣ್ಣಿಮೆಯ ಬೆಳದಿಂಗಳು ಹರಡುತ್ತಿತ್ತು
ಸುಮಧುರ ಭಾವಗೀತೆ ಸಪ್ತಸ್ವರ ಸೂಸಿದಂತೆ ॥

ನೀ ಬರುವಾಗ ಹಗಲೆ ಹಾಲಾಗಿ ಹರಿಯುತ್ತಿತ್ತು
ಹದಬಲಿತ ಹಣ್ಣೊಂದು ಜೇನಿನಲಿ ಬೆರೆತಂತೆ ॥

ನೀ ಬರುವಾಗ ಕಿರು ತೊರೆಯೊಂದು ಮೆರೆಯುತ್ತಿತ್ತು
ಒಲುಮೆಯಾಳವೆಲ್ಲವನು ನೆನೆದು ತೆರೆಯುವಂತೆ ॥

ನೀ ಬರುವಾಗ ಮೊಗ್ಗೆಲ್ಲಾ ಹೂವಾಗಿ ತಲೆಯೆತ್ತುತ್ತಿತ್ತು
ಕಣ್ಣಿನಂಗಳದಲ್ಲಿ ನೂರು ಬಗೆಯ ಚಿತ್ತಾರ ಬಿಡಿಸಿದಂತೆ ॥

ನೀ ಬರುವಾಗ ಹೊಂಗನಸಿನ ಹೂ-ಬಳ್ಳಿ ಬೆಳೆಯುತ್ತಿತ್ತು
ಹೃದಯಂಗಳದಲ್ಲಿ ಉಸಿರೆ ಹಸಿರಾಗಿ ಚಿಗುರಿದಂತೆ ॥

ನೀ ಬರುವಾಗ ಭೂಮಿ ವರ್ಷಧಾರೆಗಾಗಿ ಕಾಯುತ್ತಿತ್ತು
ಪ್ರೀತಿ-ಪ್ರೇಮದಂಗಳದಲ್ಲಿ ಮನಸು ಮಧುವಾದಂತೆ ॥

ನೀ ಬುರುವಾಗ ಋತುಮಾನವೇ ಸಂತಸದಿ ನಲಿಯುತ್ತಿತ್ತು
ಬರಿದಾದ ನನ್ನದೆಯಲ್ಲಿ ಮಂದಾರ ಹೂವೊಂದು ಅರಳಿದಂತೆ ॥

ನೀ ಬರುವಾಗ ಮೌನದಲಿ ಬರೆದ ಕವನ ಮಾತಿನಲಿ ಮಿಡಿಯುತ್ತಿತ್ತು
ಮಳೆಬಿಲ್ಲಿನ ಅಂಚಿನಲಿ ಸೀಳಿ ಬರುವ ಗುಡುಗು-ಮಿಂಚಿನಂತೆ ॥

**ಸಿ. ಎಸ್. ಭೀಮರಾಯ**
ಆಂಗ್ಲ ಉಪನ್ಯಾಸಕರು, ಕೇರಾಫ್ : ಸಿದ್ದಣ್ಣ ಬಿ. ಪೂಜಾರಿ, 'ಅಪೂರ್ವ ನಿವಾಸ'
ಯಮುನಾ ನಗರ, ಕೂಸನೂರ ರಸ್ತೆ, ಕಲಬುರಗಿ – ೫೮೫ ೧೦೫







# ಬಣ್ಣದ ಕ್ಯಾನವಾಸ್-ಮುತ್ತಿಡುವ ತಾಜಾ ಹನಿಗಳು





ಚಿತ್ರಕಲೆಯ ಉದ್ದೇಶವೇ ರಸಗ್ರಹಣ. ನೋಡುಗನ ಮನಸ್ಸನ್ನು ವಿಶೇಷವಾಗಿ ವ್ಯಂಜಿಸುವ, ಆರ್ದ್ರಗೊಳಿಸುವ ಶಕ್ತಿ ಕಲಾಕೃತಿ ಗಳಿಗಿರುತ್ತವೆ. ಶಿರಸಿಯ ಇಪ್ಪತ್ತೊಂದರ ಹರೆಯದ ಯುವ ಚಿತ್ರಕಲಾವಿದ ಕೌಶಿಕ್ ಹೆಗಡೆಯವರ ಕಲಾಕೃತಿಗಳು ತೈಲವರ್ಣ, ಆಕ್ರಲಿಕ್ ಹಾಗೂ ಮಿಶ್ರ ಮಾಧ್ಯಮಗಳಿಂದ ರಚಿತವಾಗಿದ್ದರೂ ಛಾಯಾಚಿತ್ರಗಳೇ ಎನ್ನುವಷ್ಟು ಸಹಜತೆಯಿಂದ ತಾಜಾ ಹನಿಗಳನ್ನು ಹಾರಿಸುತ್ತಿವೆ! ಕಲಾವಿದನ ಕೌಶಲ್ಯತೆಗೆ ಕನ್ನಡಿಯಾಗಿವೆ.

ಯಾವುದೇ ವಸ್ತು, ಆಕಾರ, ದೃಶ್ಯಗಳನ್ನು ವೈಭವಪೂರ್ಣವಾಗಿ ಚಿತ್ರಿಸುವುದು, ಕಾಲ್ಪನಿಕವಾಗಿ ರಚಿಸುವುದು ಒಂದು ಬಗೆಯಾದರೆ, ಅತಿ ಸಹಜತೆಗೆ ಒತ್ತು ನೀಡಿ ಚಿತ್ರ ರಚಿಸುವುದು ಮತ್ತೊಂದು ರೀತಿ. ಕಲಾವಿದರ ಕೌಶಲ್ಯತೆಗೆ, ಕರಕುಶಲತೆಗೆ ಇವು ಒಂದು ಸವಾಲಿನ ಕೆಲಸ. ಯುವ ಕಲಾವಿದ ಕೌಶಿಕ್ ತಮ್ಮ ಚಿತ್ರಗಳಲ್ಲಿ ನಯ–ನಾಜೂಕಿನ ಜೊತೆಗೆ, ಶಬ್ದಕ್ಕೂ ಮೀರಿದ ಸಹಜತೆಯನ್ನು, ಕೌಶಲ್ಯದ ಉನ್ನತ ಮಟ್ಟವನ್ನು ತೋರಿಸಿದ್ದಾರೆ.

ಉತ್ತರ ಕನ್ನಡದ ಶಿರಸಿಯ ಗಡಳ್ಳಿಯವರಾದ ಕೌಶಿಕ್ ಹೆಗಡೆ, ಕಳೆದ ವರ್ಷವಷ್ಟೇ ಮಣಿಪಾಲದ ಕಲಾಶಾಲೆಯಿಂದ ದೃಶ್ಯಕಲೆಯಲ್ಲಿ ಪದವಿ ಗಳಿಸಿ ಹೊರಬಿದ್ದವರು. ಪ್ರಸ್ತುತ ಶಿರಸಿಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಮಕ್ಕಳಿಗೆ ಮಾರ್ಗದರ್ಶಕರಾಗಿದ್ದಾರೆ.

ಉಡುಪಿಯಲ್ಲಿ ನಡೆದ 'ಸಾಂಜಿ' ಕಲಾಶಿಬಿರ, ಜಲವರ್ಣ ಶಿಬಿರ, ಮಣಿಪಾಲದಲ್ಲಿ ನಡೆದ 'ವರ್ಲಿ' ಕಲಾಶಿಬಿರ, ಕೆ.ಕೆ.ಹೆಬ್ಬಾರ್ ಸ್ಮರಣಾರ್ಥ ಮಂಗಳೂರಿನಲ್ಲಿ ನಡೆದ ರೇಖಾಚಿತ್ರ ಶಿಬಿರ, ಕಡಲೋತ್ಸವ ಮತ್ತು 'ಸಮುದ್ರ ಸಂಭ್ರಮ' ಕಲಾಶಿಬಿರಗಳಲ್ಲಿ ಭಾಗವಹಿಸಿ ಕಲಾಚತುರತೆ ತೋರಿರುವ ಕೌಶಿಕ್ ಅವರ ಹಲವು ಕಲಾಕೃತಿಗಳು ಕಳೆದ ವರ್ಷ ಬೆಂಗಳೂರಿನ ಚಿತ್ರಕಲಾ ಪರಿಷತ್ ಆವರಣದಲ್ಲಿ ನಡೆದ 'ಚಿತ್ರಸಂತೆ; ಯಲ್ಲೂ ಮೆಚ್ಚುಗೆ ಗಳಿಸಿ ಕೆಲವು ಕಲಾಸಕ್ತರ ಸಂಗ್ರಹದಲ್ಲಿ ಸೇರಿ ಕೊಂಡಿವೆ.

✴ ಜಿ.ಎಂ.ಬೊಮ್ನಳ್ಳಿ, ಪೊ: ಬೊಮ್ನಳ್ಳಿ, ತಾ: ಶಿರಸಿ (ಉ.ಕ)–581402







Edited, printed and published by Dr. Siddanagouda Patil, Managing Director, Navakarnataka Publications (P) Ltd., Embassy Centre, Crescent Road, Bengaluru-560 001. Printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010.

**HOSATHU** Kannada Monthly / FEBRUARY 2017 / ₹ 20 (No. of Pages 64) Date of Publication : 26th of every month
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.